ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

# ಡಿ.ವಿ.ಗುಂಡಪ್ಪ

ರಾಘವೇಂದ್ರ ಪಾಟೀಲ

ಪ್ರಕಟಣೆ
ಕರ್ನಾಟಕ ವಿಧಾನ ಮಂಡಲದ ಗ್ರಂಥಾಲಯ ಸಮಿತಿ
ವಿಧಾನಸೌಧ, ಬೆಂಗಳೂರು

**D.V. GUNDAPPA**
Eminent Parlimentarian Series
Written by **RAGHAVENDRA PATIL,**
**Published** by
Karnataka Legislature Library Committee
Vidhana Soudha, Bangalore-560001.
Page: 239 + x Price: 20-00 Rs.

First Edition: 2009 Copies: 2000
**Printed & Designed by**
Government Press, Bangalore.

**ಡಿ.ವಿ. ಗುಂಡಪ್ಪ**
ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ
**ಲೇಖಕರು: ರಾಘವೇಂದ್ರ ಪಾಟೀಲ**
**ಪ್ರಕಾಶನ**
ಗ್ರಂಥಾಲಯ ಸಮಿತಿ
ಕರ್ನಾಟಕ ವಿಧಾನ ಮಂಡಲ
ವಿಧಾನಸೌಧ, ಬೆಂಗಳೂರು-560 001.
ಪುಟ: 239 + x ಬೆಲೆ: 20/- ರೂ.

ಮೊದಲ ಮುದ್ರಣ: 2009 ಪ್ರತಿಗಳು: 2.000
**ಮುದ್ರಣ ಮತ್ತು ವಿನ್ಯಾಸ**
ಸರ್ಕಾರಿ ಮುದ್ರಣಾಲಯ, ಬೆಂಗಳೂರು.

# ವಿಧಾನ ಮಂಡಲ ಗ್ರಂಥಾಲಯ ಸಮಿತಿ
## 2008–2009

ಅಧ್ಯಕ್ಷರು

**ಶ್ರೀ ವೀರಣ್ಣ ಮತ್ತಿಕಟ್ಟಿ**

ಸಭಾಪತಿಗಳು, ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರು

**ಶ್ರೀ ಜಗದೀಶ ಶೆಟ್ಟರ್**

ಸಭಾಧ್ಯಕ್ಷರು, ಕರ್ನಾಟಕ ವಿಧಾನ ಸಭೆ

**ಶ್ರೀ ಎಂ. ನಾರಾಯಣಸ್ವಾಮಿ**

ವಿಧಾನಸಭಾ ಸದಸ್ಯರು ಹಾಗೂ ಉಪ ಸಮಿತಿಯ ಅಧ್ಯಕ್ಷರು

**ಶ್ರೀ ಕೆ. ಲಕ್ಷ್ಮೀನಾರಾಯಣ**

ವಿಧಾನಸಭಾ ಸದಸ್ಯರು

**ಶ್ರೀ ಎಸ್.ವಿ. ರಾಮಚಂದ್ರ**

ವಿಧಾನಸಭಾ ಸದಸ್ಯರು

**ಶ್ರೀ ಎನ್.ಎ. ಹ್ಯಾರೀಸ್**

ವಿಧಾನಸಭಾ ಸದಸ್ಯರು

**ಶ್ರೀ ಹೆಚ್.ಎಸ್. ಪ್ರಕಾಶ್**

ವಿಧಾನಸಭಾ ಸದಸ್ಯರು

**ಡಾ॥ ಚಂದ್ರಶೇಖರ ಬಿ.ಕಂಬಾರ**

ವಿಧಾನ ಪರಿಷತ್ ಸದಸ್ಯರು

**ಶ್ರೀ ಮುಖ್ಯಮಂತ್ರಿ ಚಂದ್ರು**

ವಿಧಾನ ಪರಿಷತ್ ಸದಸ್ಯರು

**ಡಾ॥ ಶ್ರೀನಾಥ್**

ವಿಧಾನ ಪರಿಷತ್ ಸದಸ್ಯರು

# ವಿಧಾನ ಮಂಡಲ ಗ್ರಂಥಾಲಯ ಸಮಿತಿ
# 2004-2005

---

ಅಧ್ಯಕ್ಷರು

**ಶ್ರೀ ವಿ.ಆರ್. ಸುದರ್ಶನ್**

ಸಭಾಪತಿಗಳು, ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರು

**ಶ್ರೀ ಕೃಷ್ಣ**

ಸಭಾಧ್ಯಕ್ಷರು, ಕರ್ನಾಟಕ ವಿಧಾನ ಸಭೆ

**ಶ್ರೀ ವಿಶ್ವನಾಥ್ ಪಾಟೀಲ್ ಹೆಬ್ಬಾಳ್**

ವಿಧಾನಸಭಾ ಸದಸ್ಯರು ಹಾಗೂ ಉಪ ಸಮಿತಿಯ ಅಧ್ಯಕ್ಷರು

**ಶ್ರೀ ಜಿ.ಎಸ್. ಗಡ್ಡದೇವರ ಮಠ**

ವಿಧಾನಸಭಾ ಸದಸ್ಯರು

**ಶ್ರೀ ಕಳಕಪ್ಪ ಬಂಡಿ**

ವಿಧಾನಸಭಾ ಸದಸ್ಯರು

**ಶ್ರೀ ಆರ್. ಧ್ರುವನಾರಾಯಣ್**

ವಿಧಾನಸಭಾ ಸದಸ್ಯರು

**ಡಾ|| ವೀರಬಸವಂತರೆಡ್ಡಿ ಮುದ್ನಾಳ್**

ವಿಧಾನಸಭಾ ಸದಸ್ಯರು

**ಡಾ|| ವಿ.ಎಸ್. ಆಚಾರ್ಯ**

ವಿಧಾನ ಪರಿಷತ್ ಸದಸ್ಯರು

**ಡಾ|| ಎಲ್. ಹನುಮಂತಯ್ಯ**

ವಿಧಾನ ಪರಿಷತ್ ಸದಸ್ಯರು

**ಡಾ|| ಚಂದ್ರಶೇಖರ ಬಿ. ಕಂಬಾರ**

ವಿಧಾನ ಪರಿಷತ್ ಸದಸ್ಯರು

# ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

## ಅಧಿಕಾರಿ – ಸಂಪಾದಕ ವರ್ಗ

---

### ಕರ್ನಾಟಕ ವಿಧಾನಸಭೆ ಸಚಿವಾಲಯ

| | |
|---|---|
| ಎಸ್.ಜಿ. ಪಾಟೀಲ್ | ಕಾರ್ಯದರ್ಶಿ |
| ಟಿ.ಎನ್. ಧ್ರುವಕುಮಾರ್ | ಅಪರ ಕಾರ್ಯದರ್ಶಿ (ಪ್ರ) |
| ಎಂ. ಗುರುರಾಜ | ಉಪ ಕಾರ್ಯದರ್ಶಿ |
| ಮುನೀರುನ್ನಿಸಾ | ಅಧೀನ ಕಾರ್ಯದರ್ಶಿ (ಪ್ರ) |
| ಅನಸೂಯ ಎನ್.ದೇವಗಿರಿ | ಸಹಾಯಕ ಗ್ರಂಥಪಾಲಕಿ |

### ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ

| | |
|---|---|
| ವಿ. ಶ್ರೀಶ್ | ಕಾರ್ಯದರ್ಶಿ |
| ಟಿ. ಕೃಷ್ಣೇಗೌಡ | ಅಪರ ಕಾರ್ಯದರ್ಶಿ |

# ಮುನ್ನುಡಿ

**28 ಏಪ್ರಿಲ್ 2009**

ಸುವರ್ಣ ಮಹೋತ್ಸವದ ಆಚರಣೆಯ ಅಂಗವಾಗಿ ಈ ದೇಶಕ್ಕಾಗಿ ದುಡಿದ, ಅಗ್ರಮಾನ್ಯ ಸಂಸದೀಯ ಪಟುಗಳಾಗಿ ಕೊಡುಗೆಯನ್ನು ನೀಡಿದ ಮಹನೀಯರನ್ನು ಸ್ಮರಿಸುವುದು ನಮ್ಮ ಆದ್ಯ ಕರ್ತವ್ಯವಾಗಿದೆ. ಈಗಾಗಲೇ ಲೋಕಸಭಾ ಕಾರ್ಯಾಲಯದವರು ಇಂತಹ ಪ್ರತಿಭಾವಂತ ಸಂಸದೀಯ ಪಟುಗಳ ಬಗ್ಗೆ ಅನೇಕ ಹೊತ್ತಿಗೆಗಳನ್ನು ಹಿಂದಿ ಹಾಗೂ ಆಂಗ್ಲ ಭಾಷೆಯಲ್ಲಿ ಹೊರತಂದಿರುತ್ತಾರೆ. ಅವುಗಳಲ್ಲಿ ಡಾ॥ ರಾಮಮನೋಹರ ಲೋಹಿಯಾ, ಡಾ॥ ಬಿ.ಆರ್. ಅಂಬೇಡ್ಕರ್, ಡಾ॥ ಶಾಂಪ್ರಸಾದ್ ಮುಖರ್ಜಿ, ಡಾ॥ ರಾಜೇಂದ್ರ ಪ್ರಸಾದ್ ಮೊದಲಾದ ಗಣ್ಯರ ಪುಸ್ತಕಗಳನ್ನು ನಾವು ಕನ್ನಡದಲ್ಲಿ ಭಾಷಾಂತರಿಸಿ ಹೊರತಂದಿರುವ ಸಂತೋಷಕರ ವಿಷಯವನ್ನು ಉಲ್ಲೇಖಿಸಬಯಸುತ್ತೇವೆ.

ರಾಜ್ಯದ ಸಂಸದೀಯ ಪಟುಗಳಾದ ಅನೇಕ ಮಹನೀಯರನ್ನು ಕುರಿತು ಹೊತ್ತಿಗೆಗಳನ್ನು ಸಿದ್ಧಪಡಿಸಿ ಪ್ರಕಟಿಸುವ ಯೋಜನೆಯನ್ನು ಕರ್ನಾಟಕ ವಿಧಾನ ಮಂಡಲವು ಹಮ್ಮಿಕೊಂಡಿದ್ದು, ವಿಧಾನ ಮಂಡಲದ ಗ್ರಂಥಾಲಯ ಸಮಿತಿಯು ಈಗಾಗಲೇ ಪ್ರಕಟಿಸುತ್ತಿದೆ. ಈ ಉಪ ಸಮಿತಿಯು ಕಾರ್ಯಪ್ರವೃತ್ತವಾಗಿ ರಾಜ್ಯದ ಲೇಖಕರ, ವಿದ್ವಾಂಸರ ಸಹಕಾರದಿಂದ ಈ ಯೋಜನೆಯನ್ನು ಕಾರ್ಯಗತಗೊಳಿಸುತ್ತಿದೆ. ನಮ್ಮ ನಾಡಿನ ಪ್ರಗತಿಪರ ಚಿಂತಕರು, ರಾಜಕೀಯ ಮುತ್ಸದ್ದಿಗಳ ಆಶಯಗಳನ್ನು ದಾಖಲಿಸಿ ಈ ಮೂಲಕ ಅವರ ಜೀವನ ಚಿತ್ರಣವನ್ನು ಪುಸ್ತಕ ರೂಪದಲ್ಲಿ ತರುತ್ತಿದೆ.

ಪ್ರತಿಭಾವಂತ ಸಂಸದೀಯ ಪಟುಗಳ ಮಾಲಿಕೆಯಲ್ಲಿ ಈಗಾಗಲೇ ಶ್ರೀ ಕೆಂಗಲ್ ಹನುಮಂತಯ್ಯ, ಶ್ರೀ ಶಾಂತವೇರಿ ಗೋಪಾಲಗೌಡ, ಶ್ರೀ ಎಸ್. ನಿಜಲಿಂಗಪ್ಪ, ಶ್ರೀ ಕೆ.ಸಿ. ರೆಡ್ಡಿ, ಶ್ರೀ ಡಿ. ದೇವರಾಜ ಅರಸು, ಶ್ರೀ ಜೆ.ಹೆಚ್. ಪಟೇಲ್, ಶ್ರೀ ಟಿ.ಆರ್. ಶಾಮಣ್ಣ, ಶ್ರೀ ಎಸ್.ಡಿ. ಗಾಂವಕರ್, ಶ್ರೀಮತಿ ಬಿ.ಎಲ್. ಸುಬ್ಬಮ್ಮ, ಡಾ॥ ಲಂಕಾ ಸುಂದರಂ, ಸರದಾರ ಶರಣಗೌಡ ಇನಾಂದಾರ್, ಕೆ.ಹೆಚ್. ರಂಗನಾಥ್ ಮತ್ತಿತರ ಹಲವು ಗಣ್ಯರ ಬಗೆಗಿನ ಪುಸ್ತಕಗಳನ್ನು ಹೊರತರಲಾಗಿದೆ.

**ರಾಘವೇಂದ್ರ ಪಾಟೀಲ** ಅವರು ರಚಿಸಿರುವ ರಾಜ್ಯದ ಹಿರಿಯ ಸಂಸದೀಯ ಪಟುವಾಗಿದ್ದ ಶ್ರೀ **ಡಿ.ವಿ. ಗುಂಡಪ್ಪ** ಅವರ ಬಗೆಗಿನ ಈ ಪುಸ್ತಕವನ್ನು ತಮ್ಮ ಮುಂದಿಡಲು ಹೆಮ್ಮೆಯೆನಿಸುತ್ತದೆ. ಇವರ ಸದನದ ಭಾಷಣಗಳು ಸಾಮಾಜಿಕ ಸಮಸ್ಯೆಗಳ ಮೇಲೆ ಬೆಳಕು ಚೆಲ್ಲುತ್ತವೆ. ಈ ನಾಡಿನ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಆಶಯಗಳನ್ನು ಬಿಂಬಿಸುತ್ತವೆ.

ಈ ಪುಸ್ತಕವನ್ನು ರಚಿಸಿದ ಲೇಖಕರಿಗೆ ಹಾಗೂ ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ ಸರ್ಕಾರಿ ಮುದ್ರಣಾಲಯದ ನಿರ್ದೇಶಕರಿಗೆ ಹಾಗೂ ಉಪ ಸಮಿತಿಯ ಅಧ್ಯಕ್ಷರಿಗೆ ಹಾಗೂ ಸದಸ್ಯರಿಗೆ ಧನ್ಯವಾದಗಳನ್ನು ಅರ್ಪಿಸುತ್ತೇವೆ.

ರಾಜ್ಯದ ಪ್ರತಿಭಾವಂತ ಸಂಸದೀಯ ಪಟುಗಳ ಬಗೆಗಿನ ಈ ಪುಸ್ತಕವು ಮಾನ್ಯ ಸದಸ್ಯರುಗಳಿಗೆ, ಸಂಶೋಧಕರಿಗೆ ಹಾಗೂ ಸಾಮಾನ್ಯ ಓದುಗರಿಗೆ ಸಂಸದೀಯ ವಿಷಯಗಳಲ್ಲಿ ಹೆಚ್ಚಿನ ಅನುಭವ ನೀಡುತ್ತದೆ ಮತ್ತು ಉಪಯುಕ್ತವಾಗುತ್ತದೆಂದು ಭಾವಿಸುತ್ತೇವೆ.

**ವೀರಣ್ಣ ಮತ್ತಿಕಟ್ಟಿ**
ಸಭಾಪತಿ
ಕರ್ನಾಟಕ ವಿಧಾನ ಪರಿಷತ್ತು

**ಜಗದೀಶ್ ಶೆಟ್ಟರ್**
ಸಭಾಧ್ಯಕ್ಷರು
ಕರ್ನಾಟಕ ವಿಧಾನ ಸಭೆ

# ಲೇಖಕರ ಮಾತು

ಕರ್ನಾಟಕ ವಿಧಾನಮಂಡಲದ ಗ್ರಂಥಾಲಯ ಸಮಿತಿಯವರು ಪ್ರತಿಭಾವಂತ ಸಂಸದೀಯಪಟು ಪುಸ್ತಕ ಮಾಲಿಕೆಯಲ್ಲಿ ಪೂಜನೀಯರಾದ ಡಿ.ವಿ.ಗುಂಡಪ್ಪನವರ ಬಗೆಗೆ ಒಂದು ಪುಸ್ತಕವನ್ನು ಸಿದ್ಧಪಡಿಸಿಕೊಡಲು ಕೇಳಿ ಆ ಕೆಲಸವನ್ನು ನನಗೆ ವಹಿಸಿಕೊಡುವುದರ ಮೂಲಕ ಮಹದುಪಕಾರವನ್ನು ಮಾಡಿದ್ದಾರೆ. ಮೇರು ವ್ಯಕ್ತಿತ್ವದ ಶ್ರೀ ಡಿ.ವಿ.ಗುಂಡಪ್ಪನವರ ಉದ್ಬೋಧಕವಾದ ವ್ಯಕ್ತಿತ್ವದೊಂದಿಗೆ ಸಂಪರ್ಕನ್ನು ಸಾಧಿಸುವ ಅವಕಾಶ ಇದರಿಂದ ನನಗೆ ಲಭ್ಯವಾಯಿತು. ಪೂಜನೀಯರಾದ ಡಿ.ವಿ.ಜಿಯವರ ವ್ಯಕ್ತಿತ್ವದ ಪ್ರಭೆಗೆ ನಮ್ಮನ್ನು ತೆರೆದುಕೊಳ್ಳುವುದೆಂದರೆ ನಮ್ಮ ವ್ಯಕ್ತಿತ್ವಕ್ಕೆ ಇತ್ಯಾತ್ಮಕವಾದ ಹೊಸ ಸಂಸ್ಕಾರವನ್ನು ಪಡೆದುಕೊಳ್ಳುವ ಮಾರ್ಗ. ಇದು ನನಗೆ ಒದಗಿದ ಸುದೈವ ಎಂದು ನಾನು ಭಾವಿಸುತ್ತೇನೆ.

ಕನ್ನಡ ಸಾಹಿತ್ಯ ಪರಂಪರೆಯಲ್ಲಿ ರಾಜಕಾರಣ ಮತ್ತು ಸಾಮಾಜಿಕ ಆರೋಗ್ಯದ ಬಗೆಗೆ ಅತ್ಯಂತ ತೀವ್ರವಾದ ಕಾಳಜಿಯನ್ನು ತೋರಿದ ಲೇಖಕರಲ್ಲಿ ಡಿ.ವಿ.ಜಿಯವರು ಅಗ್ರಮಾನ್ಯರು. ಸಂಸದೀಯ ಪ್ರಜಾಪ್ರಭುತ್ವದ ನಡವಳಿಕೆ ಮತ್ತು ಆರೋಗ್ಯ ಕುರಿತಂತೆ ಡಿ.ವಿ.ಜಿಯವರು ತೀವ್ರ ಕಾಳಜಿಯನ್ನು ಹೊಂದಿದ್ದು ಆ ಬಗೆಗೆ ಅನೇಕ ಸ್ವತಂತ್ರ ಲೇಖನಗಳನ್ನು ಮತ್ತು ಟೀಕೆ ಟಿಪ್ಪಣಿಗಳನ್ನು ಬರೆದಿದ್ದಾರೆ ಆ ಮೂಲಕ ಭಾರತೀಯ ಸಂಸದೀಯ ಪ್ರಜಾಪ್ರಭುತ್ವಕ್ಕೆ ವಿಧಾಯಕವಾದ ಸಂಹಿತೆಯನ್ನು ರಚಿಸಿ ಕೊಡುವ ಕಾಳಜಿ ತೋರಿದ್ದಾರೆ. ಸ್ವರಾಜ್ಯ ಎಂದರೆ ಏನು? ಸ್ವರಾಜ್ಯ ನಿರ್ವಹಣೆಗೆ ಪ್ರತಿನಿಧಿಗಳೇಕೆ ? ರಾಷ್ಟ್ರಕ ಕಾರ್ಯ ವಿಧಾನ ಪಕ್ಷ ಕಕ್ಷಿಗಳು ಸಂಖ್ಯಾದಿಕ್ಯದ ತೀರ್ಮಾನದ ಸ್ವರೂಪ, ಪ್ರಜಾರಾಜ್ಯವು ಇಂಡಿಯಾಕ್ಕೆ ಹೊಂದೀತೇ? ಪ್ರಜಾ ರಾಜ್ಯಕ್ಕಿರುವ ಮುಖ್ಯ ಅಪಾಯಗಳು ಹೀಗೆ ಅನೇಕ ಸಂಗತಿಗಳನ್ನೆತ್ತಿಕೊಂಡು ಚರ್ಚಿಸುತ್ತಾ ಡಿ.ವಿ.ಜಿಯವರು ಭಾರತೀಯ ಪ್ರಜ್ಞೆಗೆ ಪ್ರಜಾರಾಜ್ಯ ನಿರ್ವಹಣೆ ಕುರಿತಂತೆ ತರಬೇತಿಯನ್ನು ನೀಡುವ ಕೆಲಸವನ್ನು ಮಾಡಿದರು. ಆದರೆ ಡಿ.ವಿ.ಜಿಯವರಿಗೆ ಇದ್ದ ಕಳಕಳಿ, ಪ್ರಜಾರಾಜ್ಯವನ್ನು ಸಾಫಲ್ಯಗೊಳಿಸಬೇಕೆನ್ನುವ ಅವರ ತೀವ್ರವಾದ ಕಾಳಜಿ ನಮ್ಮ ಪ್ರಜಾ ಜನರಲ್ಲಿಯೂ ಮತ್ತು ಪ್ರಜಾರಾಜ್ಯ ನಿರ್ವಹಣೆಯ ಹೊಣೆಹೊತ್ತ ಪ್ರತಿನಿಧಿಗಳಲ್ಲಿಯೂ ಅದೇ ಪ್ರಮಾಣದಲ್ಲಿ ಇಲ್ಲದೇ ಹೋದದ್ದು ಚರಿತ್ರೆಯ ವಿಷಾದನೀಯ ಭಾಗ. ಡಿ.ವಿ.ಜಿಯವರ ಇಂತಹ ಕಾಳಜಿಯ ಮಹತ್ವದ ಲೇಖನ ಮತ್ತು ಟಿಪ್ಪಣಿಗಳನ್ನು ಈ ಪುಸ್ತಕದಲ್ಲಿ ಅಳವಡಿಸಲಾಗಿದೆ.

ಡಿ.ವಿ.ಜಿಯವರು 14 ವರ್ಷಗಳ ಕಾಲ ಮೈಸೂರಿನ ರಾಜಪ್ರತಿನಿಧಿ ಸಭೆಯ ಸದಸ್ಯರಾಗಿದ್ದುಕೊಂಡು ರಾಜ್ಯ ನಿರ್ವಹಣೆಯ ಕಾರ್ಯದಲ್ಲಿ ಅಪಾರವಾದ ಸಕ್ರಿಯತೆಯನ್ನು ತೋರಿದವರು. ಬಜೆಟ್‌ಗಳ ಮೇಲಿನ ಅವರ ವಿಸ್ತಾರವಾದ ಭಾಷಣಗಳಲ್ಲಿ ಇದ್ದ ಸಾಮಾಜಿಕ, ಆರ್ಥಿಕ ತಿಳುವಳಿಕೆಗಳು ವಿಪುಲವೂ ಸ್ಥಳಸ್ಪರ್ಶಿಯಾದವುಗಳೂ ಆಗಿದ್ದವು.

ಆ ಕಾಲದಲ್ಲಿ ಬರುತ್ತಿದ್ದ ಯಾವುದೇ ಸಾಮಾಜಿಕ ಸಮಸ್ಯೆಗಳ ಬಗೆಗಿನ ಚರ್ಚೆಗಳಲ್ಲಿ ಡಿ.ವಿ.ಜಿಯವರು ಸಂಪೂರ್ಣವಾಗಿ ತೊಡಗಿಕೊಳ್ಳುತ್ತಾ ಆ ಚರ್ಚೆಗಳಿಗೆ ಪಾರಂಪರಿಕತೆ ಮತ್ತು ವೈಚಾರಿಕತೆಗಳ ಎರಡೂ ಆಯಾಮಗಳನ್ನು ಒದಗಿಸುತ್ತಿದ್ದವು. ಡಿ.ವಿ.ಜಿಯುವರು ಇಂಥಹ ಎಲ್ಲ ಚರ್ಚೆಗಳಲ್ಲಿ ಅತ್ಯಂತ ವಸ್ತುನಿಷ್ಠ ನೆಲೆಯಲ್ಲಿ ಪಾಲ್ಗೊಳ್ಳುತ್ತಿದ್ದರು. ಶಾಸನ ನಿರ್ಮಾಣದ ಚರ್ಚೆಗಳಿಗೆ ಡಿ.ವಿ.ಜಿಯವರ ವಾದಗಳು ನಿರ್ಣಾಯಕ ನೆಲೆಯನ್ನು ಒದಗಿಸುತ್ತಿದ್ದವು.

ಒಂದು ವಿಷಾದನೀಯ ಸಂಗತಿಯೆಂದರೆ ಅಂದಿನ ಕಾಲದ ಶಾಸನ ಸಭೆಯ ನಡಾವಳಿಕೆಯ ರೀತಿಯಂತೆ ಡಿ.ವಿ.ಜಿಯವರು ತಮ್ಮ ಎಲ್ಲ ಭಾಷಣಗಳನ್ನೂ ಇಂಗ್ಲೀಷ್‌ನಲ್ಲಿಯೇ ಮಾಡಿದ್ದಾರೆ. ಮೆಟ್ರಿಕ್ ಪರೀಕ್ಷೆಯುನ್ನು ಪಾಸಾಗದ ಡಿ.ವಿ.ಜಿಯವರು ಇಂಗ್ಲೀಷ್ ಭಾಷೆಯಲ್ಲಿ ಸಾಧಿಸಿದ ಆಳವಾದ ಪರಿಣತೆಯನ್ನು ಅವರ ಭಾಷಣಗಳು ತೋರುತ್ತವೆ. ಆದರೆ ಡಿ.ವಿ.ಜಿಯವರು ಕನ್ನಡದಲ್ಲಿಯೇ ಮಾತನಾಡಿದರೇ ಚೆನ್ನಾಗಿರುತ್ತಿತ್ತು ಎನ್ನುವ ಅತೃಪ್ತಿಯ ಭಾವನೆಯನ್ನು ನಮ್ಮ ಮನದಲ್ಲಿ ಬಾರದಿರುವುದಿಲ್ಲ ಅದೇನೇ ಇರಲಿ ಡಿ.ವಿ.ಜಿಯವರ ವಿದ್ವತ್‌ಪೂರ್ಣವಾದ ಮತ್ತು ವಿಸ್ತೃತವಾಗಿದ್ದ ಎಲ್ಲ ಭಾಷಣಗಳನ್ನೂ ಇಲ್ಲಿ ಸಂಕಲಿಸಿರುವುದು ಸಾಧ್ಯವಾಗಿಲ್ಲ. ಕೆಲವಷ್ಟೇ ಅನುವಾದಿತ ಭಾಷಣಗಳನ್ನು ಇಲ್ಲಿ ಸಂಕಲಿಸಲು ಸಾಧ್ಯವಾಗಿದೆ. ಅವರ ಶಾಸನ ಸಭೆಗಳಲ್ಲಿನ ಎಲ್ಲ ಭಾಷಣಗಳು ಸಮಗ್ರವಾಗಿ ಸಂಕಲನಗೊಳ್ಳುವ ಅವಶ್ಯಕತೆ ಇದೆ.

ಶಾಸನಸಭೆಗಳಲ್ಲಿನ ಅವರ ಇಂಗ್ಲೀಷ್ ಭಾಷಣಗಳನ್ನು ಕರ್ನಾಟಕ ಸರ್ಕಾರದ ಅನುವಾದ ಇಲಾಖೆಯು ಅನುವಾದಿಸಿಕೊಟ್ಟಿದೆ. ಈ ಸಹಾಯಕ್ಕಾಗಿ ಅವರಿಗೆ ನನ್ನ ಧನ್ಯವಾದಗಳು ಸಲ್ಲುತ್ತವೆ. ಸನ್ಮಾನ್ಯ ಶ್ರೀ ಡಿ.ಆರ್.ವೆಂಕಟರಮಣನ್ ಅವರು ತಮ್ಮ "ವಿರಕ್ತ ರಾಷ್ಟ್ರಕ ಡಿ.ವಿ.ಜಿ" ಕೃತಿಯಲ್ಲಿ ಡಿ.ವಿ.ಜಿಯವರ ಜೀವನದ ಬಗ್ಗೆ ವಿಸ್ತೃತವಾದ ತಿಳುವಳಿಕೆಯನ್ನು ಕೊಡುತ್ತದೆ. ಅವರ ಈ ಕೃತಿಯಲ್ಲಿನ ಎರಡು ಲೇಖನಗಳನ್ನು ಬಳಸಿಕೊಂಡಿದ್ದೇನೆ ಇದಕ್ಕಾಗಿ ಶ್ರೀ ಡಿ.ಆರ್.ವೆಂಕಟರಮಣನ್ ಅವರನ್ನು ಕೃತಜ್ಞತೆಯಿಂದ ನೆನೆಯುತ್ತೇನೆ.

ಈ ಪುಸ್ತಕವನ್ನು ತಪ್ಪಿಲ್ಲದಂತೆ ತರಲು ಸಹಕರಿಸಿದ ಅಕ್ಷರ ವಿನ್ಯಾಸಕಾರರಿಗೆ ಕರಡು ತಿದ್ದಿದ ಇಲಾಖೆಯ ಗೆಳೆಯರಿಗೆ ಕೃತಜ್ಞತೆಯನ್ನು ಸಲ್ಲಿಸುತ್ತೇನೆ. ಶಾಸನಸಭೆಯ ಭಾಷಣಗಳನ್ನು ದೊರಕಿಸಿಕೊಡಲು ಸಹಕರಿಸಿದ ಗ್ರಂಥಾಲಯದ ಮುಖ್ಯಸ್ಥರು ಮತ್ತು ಸಿಬ್ಬಂದಿ ವರ್ಗದವರಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

**ರಾಘವೇಂದ್ರ ಪಾಟೀಲ**

# ಪರಿವಿಡಿ

ಹೊಸ ಚಿಗುರು ಹಳೆಬೇರು ಕೂಡಿರಲು. ಮರ ಸೊಬಗು।
ಹೊಸ ಯುಕ್ತಿ ಹಳೆತತ್ವದೊಡಗೂಡೆ ಧರ್ಮ॥
ಋಷಿ ವಾಕ್ಯದೊಡನೆ ವಿಜ್ಞಾನ ಕಲೆ ಮೇಳವಿಸೆ।
ಜಸವು ಜನ ಜೀವನಕೆ – ಮಂಕುತಿಮ್ಮ॥

– ಡಿ.ವಿ.ಜಿ.

# ಅನನ್ಯ ಸಾಧಕ ಡಿ.ವಿ. ಗುಂಡಪ್ಪ

'ಡಿವಿಜಿ' ಎಂತಲೇ ಪ್ರಖ್ಯಾತರಾದ ದೇವನಹಳ್ಳಿ ವೆಂಕಟರಮಣಯ್ಯ ಗುಂಡಪ್ಪನವರದು ಅನನ್ಯವಾದ ಸಾಧನೆ. ಹೊಸ ಕಾಲಕ್ಕೆ ಹೊಸ ರಾಜ್ಯಶಾಸ್ತ್ರವನ್ನು ರೂಪಿಸುವ ಕಾಳಜಿಯನ್ನು ಬೆಳೆಸಿಕೊಂಡಿದ್ದ ಡಿ.ವಿ.ಜಿ.ಯವರು ಅಪ್ಪಟ ಪ್ರಾಮಾಣಿಕತೆಯ ಸಾರ್ವಜನಿಕ ಕಾರ್ಯವನ್ನು ನಡೆಸಿದವರು. ಸಾಹಿತ್ಯಕಾರರಾಗಿ ಕಾವ್ಯ ಮತ್ತು ಕಾವ್ಯಶಾಸ್ತ್ರಗಳ ಅಮೂಲ್ಯ ಕಾಣಿಕೆ ನೀಡಿದವರು. ಇಪ್ಪತ್ತನೆಯ ಶತಮಾನದ ಆರಂಭದ ಇತಿಹಾಸ ರಚನಾಕಾರರಾಗಿ ಜ್ಞಾಪಕ ಚಿತ್ರಗಳ ಉಗ್ರಾಣವನ್ನು ನಿರ್ಮಿಸಿದವರು. ಭಾರತೀಯ ಸಂಸ್ಕೃತಿಯ ವಸ್ತು ನಿಷ್ಠ ಅಭಿಮಾನಿಯಾದ ಇವರು ಉಪನಿಷತ್ತುಗಳು ಪುರುಷಸೂಕ್ತ ಮತ್ತು ಭಗವದ್ಗೀತೆಗಳ ಬಗ್ಗೆ ಪಾಂಡಿತ್ಯ ಪೂರ್ಣ ಭಾಷ್ಯಗಳನ್ನು ಬರೆದರು. ಗೋಖಲೆ ಸಾರ್ವಜನಿಕ ಸಂಸ್ಥೆಯನ್ನು ಕಟ್ಟಿದರು. ಕನ್ನಡ ಸಾಹಿತ್ಯ ಪರಿಷತ್ತಿನ ಆರಂಭಕಾಲದಲ್ಲಿ ಅದರ ಪದಾಧಿಕಾರಿಯಾಗಿ ಅದಕ್ಕೆ ಭದ್ರ ಬುನಾದಿಯನ್ನು ಹಾಕಿದರು. ಜೀವನದುದ್ದಕ್ಕೂ ನಿಷ್ಠಾವಂತ ಪತ್ರಕರ್ತರಾಗಿ ಬರೆದು ಬದುಕಿದರು. ಬೆಂಗಳೂರು ಮುನಿಸಿಪಲ್ ಕೌನ್ಸಿಲ್ಲಿನ ಸದಸ್ಯರಾಗಿ ಸಾರ್ವಜನಿಕ ಜೀವನ ಪ್ರವೇಶಿಸಿದ ಡಿ.ವಿ.ಜಿ.ಯವರು ಹದಿನೈದು ವರ್ಷಗಳ ದೀರ್ಘ ಅವಧಿಗೆ ಸರ್ಕಾರದಿಂದ ನಾಮಕರಣ ಹೊಂದಿದ ಲೆಜಿಸ್ಲೇಟಿವ್ ಕೌನ್ಸಿಲ್ಲಿನ ಸದಸ್ಯರಾಗಿ ರಾಜಕಾರಣಕ್ಕೆ ಪ್ರಜಾ ಕಲ್ಯಾಣ ಗುರಿಯನ್ನು ಒದಗಿಸಿದ, ಅತ್ಯಂತ ಕ್ರಿಯಾಶೀಲ ಸಂಸದೀಯ ಪಟು ಎನ್ನಿಸಿಕೊಂಡರು. ಸರ್ಕಾರದಿಂದ ನಾಮಕರಣ ಹೊಂದಿದ ಸದಸ್ಯರಾಗಿದ್ದರೂ ಡಿ.ವಿ.ಜಿ. ಯವರು ಎಂದಿಗೂ ಸರ್ಕಾರದ ಬಾಲ ಬಡುಕರಾಗಲಿಲ್ಲ. ಅವರದು ಏನಿದ್ದರೂ ಪ್ರಜಾ ನಿಷ್ಠೆ, ಸತ್ಯ ನಿಷ್ಠೆ ಜೊತೆಗೆ ಋಜು ಮಾರ್ಗದ ಆಚರಣೆ. ಹೇಳಬೇಕಾದದ್ದನ್ನು ಹೇಳುವ ಗೈರತ್ತನ್ನು ಡಿವಿಜಿಯವರು ಯಾವತ್ತಿಗೂ ಕಳೆದುಕೊಳ್ಳಲಿಲ್ಲ. ಮೈಸೂರು ಸಂಸ್ಥಾನದಲ್ಲಿ ಜವಾಬ್ದಾರಿ ಸರ್ಕಾರದ ಸ್ಥಾಪನೆಗೆ ಡಿ.ವಿ.ಜಿ.ಯವರು ಅಹರ್ನಿಶಿ ದುಡಿದರು. ಕನ್ನಡ ಇಂಗ್ಲೀಷ್ ಮತ್ತು ಸಂಸ್ಕೃತ ಭಾಷೆಗಳಲ್ಲಿ ಪ್ರೌಢಿಮೆ ಗಳಿಸಿದ ಡಿ.ವಿ.ಜಿ.ಯವರ ಶಾಲಾ ಶಿಕ್ಷಣ ನಡೆದದ್ದು ಮೆಟ್ರಿಕ್ ಪರೀಕ್ಷೆ ಅನುತ್ತೀರ್ಣರಾಗುವವರೆಗೆ ಮಾತ್ರ!

ಮೆಟ್ರಿಕ್ ಪರೀಕ್ಷೆ ಫೇಲಾದ ಡಿ.ವಿ.ಜಿ.ಯವರು ಶಾಲೆಯ ಹೊರಗೇ, ತಮ್ಮನ್ನು ತಾವು ಕಟ್ಟಿಕೊಳ್ಳುತ್ತ ಸ್ವಯಂಭುವಾಗಿ ಬೆಳೆದವರು. ಬೆಳೆದು ಮಾರ್ಗದರ್ಶಕರಾದವರು, ಋಷಿ ಸದೃಶರಾದವರು. ಬೆಳಗೆರೆ ಕೃಷ್ಣ ಶಾಸ್ತ್ರಿಗಳು

ಡಿವಿಜಿಯವರನ್ನು ಕುರಿತ ತಮ್ಮ ಒಂದು ನೆನಪನ್ನು ಹೇಳಿಕೊಳ್ಳುತ್ತಾರೆ "…..ನಾನು ಬೆಂಗಳೂರಿಗೆ ಹೋದಾಗ, ಅಂದು ಸಂಜೆ ರಾಮಕೃಷ್ಣಾಶ್ರಮದಲ್ಲಿ ಡಿವಿಜಿಯವರ ಕಾರ್ಯಕ್ರಮವಿರುವುದನ್ನು ಪತ್ರಿಕೆಗಳಲ್ಲಿ ನೋಡಿದೆ. ನಾನು ಹೋದೆ…… ವೇದಿಕೆ ಹತ್ತುವಾಗ ಡಿವಿಜಿಯವರು ತಮ್ಮ ಪಂಪ್ ಶೂಗಳನ್ನು ಕಳಚಲು ಕಾಲುಗಳನ್ನು ಒಂದಕ್ಕೊಂದು ಉಜ್ಜತೊಡಗಿದರು. ಹಿರಿಯ ಸ್ವಾಮಿಗಳು ಡಿವಿಜಿಯವರಿಗೆ ಹೆಗಲುಕೊಟ್ಟು ಆಸರೆಯಾಗಿ ನಿಂತರು. ಅವರ ಹೆಗಲ ಮೇಲೆ ಕೈಯಾಗಿ ನಿಂತ ಡಿವಿಜಿಯವರ ಶೂಗಳನ್ನು ಕಿರಿಯ ಸ್ವಾಮಿಗಳು ಬಾಗಿ ತಮ್ಮ ಕೈಗಳಿಂದ ಕಳಚಿ ತೆಗೆದುಕೊಂಡು ತಮ್ಮಲ್ಲೇ ಇಟ್ಟುಕೊಂಡು ವೇದಿಕೆಯ ಹಿಂಬದಿಗೆ ನಡೆದರು. ಡಿವಿಜಿಯವರು ಇದನ್ನು ಗಮನಿಸಲಿಲ್ಲ. ಕಿರಿಯ ಸ್ವಾಮಿಗಳ ಈ ನಡತೆ ನನಗೆ ಅಚ್ಚರಿಯನ್ನು ಉಂಟು ಮಾಡಿತು…….ವೇದಿಕೆಯಿಂದ ಇಳಿಯುವಾಗ ಮತ್ತೆ ಹಿರಿಯ ಸ್ವಾಮಿಗಳು ಡಿವಿಜಿಯವರಿಗೆ ನೆರವಾಗುತ್ತಿದ್ದರೆ ಕಿರಿಯ ಸ್ವಾಮಿಗಳು ಇದ್ದಕ್ಕಿದ್ದಂತೆ ನಡೆದು ಬಂದು ತಮ್ಮ ಬಳಿ ಇಟ್ಟುಕೊಂಡಿದ್ದ ಪಾದರಕ್ಷೆಗಳನ್ನು ಡಿವಿಜಿಯವರ ಕಾಲಿಗೆ ತೊಡಿಸಿದರು. ಈ ಸಲ ಡಿವಿಜಿಯವರು ಇದನ್ನು ಗಮನಿಸಿದರು. ಅಷ್ಟೇ ಅಲ್ಲ, ಸ್ವಾಮಿಗಳ ಮುಖವನ್ನು ಆಶ್ಚರ್ಯ ಮಿಶ್ರಿತ ತೆಳು ನಗುವಿನೊಂದಿಗೆ ನೋಡಿ ಅನಂತರ ಸ್ವಲ್ಪ ಗಂಭೀರರಾದರು. ಹೀಗೆಲ್ಲ ಮಾಡಿದ್ದು ಸರಿಯೇ, ಅಗತ್ಯವೇ? ಎಂದು ಕೇಳುವಂತಿತ್ತು ಅವರ ಆ ನೋಟ. ಸ್ವಾಮಿಗಳಾದರೋ ಹಸನ್ಮುಖರಾಗಿ ನಿಂತಿದ್ದರು. ಇದಕ್ಕೆಲ್ಲ ಏಕೆ ಅಷ್ಟು ಮಹತ್ವ ಕೊಡಬೇಕು ಎಂಬಂತಿತ್ತು ಅವರ ಆ ಭಂಗಿ…."

ಈ ಘಟನೆ ನಮಗೆ ಎರಡೊಂದು ರೀತಿಯ ಸೂಚನೆಯನ್ನು ನೀಡುತ್ತದೆ. ಮೊದಲನೆಯದಾಗಿ ರಾಮಕೃಷ್ಣಾಶ್ರಮದ ಆ ಸ್ವಾಮಿಗಳ ನಮ್ರತೆ ಮತ್ತು ನಿರಹಂಕಾರದ ನಿರ್ಲಿಪ್ತ ನಿಲುವು. ಎರಡನೆಯದಾಗಿ ಡಿವಿಜಿಯವರು ಸಾಧಿಸಿಕೊಂಡ ಉನ್ನತವಾದ ವ್ಯಕ್ತಿತ್ವ. ಋಷಿಸದೃಶ ವ್ಯಕ್ತಿತ್ವವನ್ನು ಸಾಧಿಸಿಕೊಂಡಿದ್ದರಿಂದಲೇ ರಾಮಕೃಷ್ಣಾಶ್ರಮದ ಸ್ವಾಮಿಗಳು ಇವರ ಬಗೆಗೆ ಅಂಥ ನಮ್ರವಾದ-ಗೌರವಪೂರ್ಣವಾದ ನಿಲುವನ್ನು ತೋರಿಸಿದ್ದು. ಬೇರೆಯವರಿಂದ ನಾವು ಪಡೆಯುವ ಸ್ಪಂದನೆಯ ಸ್ವರೂಪವು ಖಂಡಿತವಾಗಿಯೂ ನಮ್ಮ ವ್ಯಕ್ತಿತ್ವದ ಅಂತಃಸತ್ವವನ್ನು ಅವಲಂಬಿಸಿರುತ್ತದೆ.

ಡಿವಿಜಿಯವರು ಎಂದಿಗೂ ಪ್ರಸಿದ್ಧಿಯನ್ನು ಬಯಸಿದವರಲ್ಲ. ಗೀತೆಯ 'ಕರ್ಮಣ್ಯೇ ವಾಧಿಕಾರಸ್ತೆ….' ತತ್ವವನ್ನು ಅವರು ಸಹಜವಾಗಿ ಅನುಷ್ಠಾನದಲ್ಲಿರಿಸಿಕೊಂಡವರು. ವನಸುಮವು ಅವರ ಜೀವನದ ನಿತ್ಯ ಆದರ್ಶವಾಗಿದ್ದಿತು.

ವನಸುಮದೊಲೆನ್ನ ಜೀವನವು ವಿಕಸಿಸುವಂತೆ
ಮನವವನನುಗೊಳಿಸು ಗುರುವೇ ಹೇ ದೇವ
ಕಾನನದಿ ಮಲ್ಲಿಗೆಯು ಮೌನದಿಂ ಬಿರಿದು ನಿಜ
ಸೌರಭವ ಸೂಸಿ ನಲವಿಂ
ತಾನೆಲೆಯ ಪಿಂತಿರ್ದು ದೀನತೆಯ ತೋರಿ ಅಭಿ
ಮಾನವನು ತೊರೆದು ಕೃತ ಕೃತ್ಯತೆಯ ಪಡೆವಂತೆ.

ನಿರ್ಜನ ಕಾನನದಲ್ಲಿ ಯಾರಿಗೂ ಕಾಣದಂತೆ ಅರಳಿ, ಗಾಳಿಯಲ್ಲಿ ತನ್ನ ಸೌರಭವನ್ನು ಪಸರಿಸುತ್ತ, ತನ್ನಿರವನ್ನು ತೋರದೇ ಸಂತೋಷವನ್ನು ಹರಡುವ, ಹೂವಿನದು ನಿಜವಾದ ಸೇವೆ. ಅದರಂತೆ ಬಾಳುವುದೇ ಮನುಷ್ಯನ ಆದರ್ಶವಾಗಬೇಕು ಎಂಬುದು ಡಿವಿಜಿಯವರ ಬಾಳಿನ ಆದರ್ಶವಾಗಿದ್ದಿತು. ಕೀರ್ತಿ ಶನಿಯ ಬಗೆಗೆ ಡಿವಿಜಿಯವರ ಮಂಕುತಿಮ್ಮ ಹೇಳುವುದನ್ನು ಕೇಳಿ-

ಹೆಸರು ಹೆಸರೆಂಬುದೇಂ? ಕಸರು ಬೀಸುವ ಗಾಳಿ।
ಹಸೆಯೊಂದು ನಿನಗೇಕೆ ಬ್ರಹ್ಮಪುರಿಯೊಳಗೆ?॥
ಶಿಶುವಾಗು ನೀಂ ಮನದಿ, ಹಸುವಾಗು, ಸಸಿಯಾಗು।
ಕಸಬೊರಕೆಯಾಗಿಳೆಗೆ - ಮಂಕುತಿಮ್ಮ॥

ಕೀರ್ತಿಯನ್ನು ಶನಿ ಎಂದು ಭಾವಿಸಿ ಅದರ ಮಾಯೆಗೆ ಸಿಕ್ಕಿಕೊಳ್ಳದಿರುವಂತೆ ನಡೆಯುತ್ತಿದ್ದ ಡಿವಿಜಿಯವರು ಹಣದ ಬಗೆಗೆ ಕೂಡ ಇಂತಹದೇ ನಿರ್ಮೋಹವನ್ನು ಸಾಧಿಸಿಕೊಂಡಿದ್ದರು. ಡಿವಿಜಿಯವರ ಇಳಿ ವಯಸ್ಸಿನಲ್ಲಿ ಕರ್ನಾಟಕ ಸರ್ಕಾರದವರು ಅವರಿಗೆ ಮಾಸಾಶನ ನೀಡಲು ಉದ್ದೇಶಿಸಿದರೆ, ಡಿವಿಜಿಯವರು ಅಂದಿನ ಸರ್ಕಾರದ ಮುಖ್ಯ ಕಾರ್ಯದರ್ಶಿಗಳಾಗಿದ್ದ ಜಿ.ವಿ.ಕೆ. ರಾವ್ ಅವರನ್ನು ಮನೆಗೆ ಕರೆಸಿಕೊಂಡು, "ಏನಪ್ಪಾ ಇದೇನು ಮಾಡ್ತಿದೀಯ ನೀನು? ಯಾಕಾಗಿ ನನಗೆ ಹಣ ಕೊಡಲು ಹೊರಟದ್ದೀರಿ? ನೀನು ಅಲ್ಲಿರೋದು ಸರ್ಕಾರದ ಹಣವನ್ನು ಹೀಗೆ ಪೋಲು ಮಾಡಲಿಕ್ಕೋ? ಚೆನ್ನಾಯಿತು ಚೆನ್ನಾಯಿತು. ಇದೆಲ್ಲ ಕೂಡದು" ಎಂದು ಖಡಾ ಖಂಡಿತವಾಗಿ ಹೇಳಿಕಳಿಸಿದರಂತೆ.

ಡಾ॥ ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟರು ಡಿವಿಜಿಯವರ ಬದುಕಿನ ಒಂದು ಸಂದರ್ಭವನ್ನು ತಮ್ಮ ಸಾಹಿತ್ಯರತ್ನ ಸಂಪುಟದಲ್ಲಿ ವಿವರಿಸಿದ್ದಾರೆ. ಒಮ್ಮೆ ಡಿವಿಜಿಯವರ ಹತ್ತಿರದ ನೆಂಟರ ಮನೆಯಲ್ಲಿ ಒಂದು ಉತ್ಸವವಿದ್ದಿತು. ಡಿವಿಜಿಯವರಿಗೆ

ಹೋಗಲು ಆಗಲಿಲ್ಲ. ಮಕ್ಕಳನ್ನು ಕಳಿಸಿದರು. ಆರತಕ್ಷತೆಯ ಹೊತ್ತಿಗೆ ಡಿವಿಜಿಯವರ ಹೆಂಡತಿ ಭಾಗೀರತಮ್ಮನವರು ಹೋಗುವುದೆಂದಾಯಿತು. ಆದರೆ ಆರತಕ್ಷತೆಯ ಹೊತ್ತಾದರೂ ಭಾಗೀರತಮ್ಮನವರು ಮನೆಯಲ್ಲೇ ಉಳಿದಾಗ ಡಿವಿಜಿಯವರು ಅಸಮಾಧಾನದಿಂದ ಕೇಳಿದರು.

"ನೀನು ಅವರ ಮನೆಯಲ್ಲಿನ ಉತ್ಸವಕ್ಕೆ ಹೋಗುವುದಿಲ್ಲವೆ?"

"ಇಲ್ಲ"

"ಯಾಕೆ?"

"ಮಕ್ಕಳನ್ನು ಕಳಿಸಿದ್ದೇವಲ್ಲ"

"ಅದು ಸರಿ. ನೀನೂ ಹೋಗಬೇಕಷ್ಟೆ. ಅವರು ನಮಗೆ ಬಹಳ ಬೇಕಾದವರು. ನೀನು ಹೋಗದಿದ್ದರೆ ಬೇಸರ ಪಡುವುದಿಲ್ಲವೆ?"

"ಮನೆಯಲ್ಲಿ ಯಾರಾದರೂ ಇರಬೇಕು"

"ನಾನು ಇರುತ್ತೇನೆ. ನೀನು ಹೋಗಿ ಬಾ"

ಭಾಗೀರತಮ್ಮ ಏನೇನೋ ಸಬೂಬು ಹೇಳಿದರು. ಡಿವಿಜಿ ಅದಕ್ಕೆ ಉತ್ತರ ಕೊಡುತ್ತಲೇ ಹೋದರು. ಕೊನೆಗೆ ನಿಜವಾದ ಕಾರಣ ಹೊರ ಬರಲೇ ಬೇಕಾಯಿತು. ಅವರ ಪತ್ನಿಯ ಮುಖ ಬಾಡಿತು. ಸಂಕೋಚಪಡುತ್ತಲೇ ಹೇಳಿದರು–

"ನಾನು ಹೇಳಬಾರದೆಂದಿದ್ದೆ. ನೀವೋ ಪಟ್ಟು ಹಿಡಿದು ನನ್ನ ಬಾಯಿ ಬಿಡಿಸುತ್ತಿದ್ದೀರಿ. ನನ್ನ ಹತ್ತಿರ ಇರುವುದು ಇದೊಂದೇ ಸೀರೆ. ಇದೂ ಒಂದೆರಡು ಕಡೆ ಹರಿದಿದೆ. ನಾನು ಈ ಬಟ್ಟೆಯಲ್ಲಿ ಹೊರಗೆ ಕಾಣಿಸಿಕೊಂಡರೆ ಜನ ನಿಮ್ಮನ್ನು ಕುರಿತು ಆಡಿಕೊಳ್ಳುವುದಿಲ್ಲವೆ? ಬಂಧುಗಳ ಮನೆಗೆ ಹೋಗಿ ಬರುವುದು ಹೇಗೆ ನನಗೆ ಕರ್ತವ್ಯವೋ ಹಾಗೆಯೇ ನಿಮ್ಮ ಮರ್ಯಾದೆಗೆ ಊನ ಬರದಂತೆ ನಡೆದುಕೊಳ್ಳುವುದೂ ನನಗೆ ಕರ್ತವ್ಯವೇ ಅಲ್ಲವೆ? ಹೊಸ ಸೀರೆಯನ್ನು ಕೊಂಡು ಕೊಡಿ ಎಂದು ನಾನು ಕೇಳುತ್ತಿಲ್ಲ. ಆದರೆ ಈ ಸಂದರ್ಭದಲ್ಲಿ ನನಗೆ ಯುಕ್ತವೆಂದು ತೋರಿದಂತೆ ನಡೆದುಕೊಳ್ಳುತ್ತೇನೆ. ಅದಕ್ಕೆ ನೀವು ಅಡ್ಡಿ ಮಾಡಕೂಡದು ಎಂಬಷ್ಟೇ ನನ್ನ ಬೇಡಿಕೆ."

ಡಿವಿಜಿಯವರ ಆರ್ಥಿಕ ಸ್ಥಿತಿ ಯಾವ ರೀತಿಯಾಗಿದ್ದಿತು ಎನ್ನುವುದನ್ನು ಈ ಪ್ರಸಂಗವು ಅತ್ಯಂತ ಮಾರ್ಮಿಕವಾಗಿ ಹೇಳುತ್ತದೆ. ಜೊತೆಗೆ ತಪಸ್ಸಿಗೆ ಸಮನಾದ ಅವರ ಜೀವನದಲ್ಲಿ ಅವರ ಪತ್ನಿಯ ಪಾಲೂ ಎಷ್ಟೊಂದು ಇದ್ದಿತು ಎನ್ನುವುದನ್ನೂ ಇದು ಧ್ವನಿಸುತ್ತದೆ. ಗುಂಡಪ್ಪನವರು ಇಂಥ ಬಡತನದ ಸ್ಥಿತಿಯಲ್ಲಿಯೂ ನ್ಯಾಯಯುತವಲ್ಲದ ರೀತಿಯಲ್ಲಿ ಬರುವ ಹಣವನ್ನು ಖಡಾಖಂಡಿತವಾಗಿ ತಿರಸ್ಕರಿಸುವ ಆತ್ಮಾಭಿಮಾನವನ್ನು ಬಿಟ್ಟುಕೊಟ್ಟವರಲ್ಲ. ವಿಶ್ವೇಶ್ವರಯ್ಯನವರು ದಿವಾನರಾಗಿದ್ದಾಗ ನಡೆದ ಪ್ರಸಂಗವು ಡಿವಿಜಿಯವರ ಮನೋಸ್ಥಿತಿಯನ್ನು ಸ್ಪಷ್ಟವಾಗಿ ತಿಳಿಸುತ್ತದೆ. ಆಗಿನ್ನೂ ಡಿವಿಜಿಯವರು ಯುವ ಪತ್ರಕರ್ತರು. ದಸರಾ ಉತ್ಸವದ ಸಮಯದಲ್ಲಿ ನಾಡಿನ ಎಲ್ಲ ಪತ್ರಿಕೆಗಳವರೂ ದಸರಾ ಉತ್ಸವದ ವರದಿ ಮಾಡಲು ತಮ್ಮ ತಮ್ಮ ವರದಿಗಾರರನ್ನು ಕಳಿಸಿದ್ದರು. ಡಿವಿಜಿಯವರೂ ಈ ಕೆಲಸದ ಮೇಲೆ ಮೈಸೂರಿಗೆ ಹೋಗಿ ವರದಿ ಮಾಡಿದರು. ಉತ್ಸವ ಮುಗಿದು ನಾಲ್ಕಾರು ದಿನಗಳಾದ ಮೇಲೆ ಎಲ್ಲ ಪತ್ರಿಕೆಗಳ ವರದಿಗಾರರಿಗೆ ಸರ್ಕಾರದಿಂದ ದೊಡ್ಡ ಮೊತ್ತದ ಸಂಭಾವನೆ ಸಂದಾಯವಾಯಿತು. ಡಿವಿಜಿಯವರು ತಮಗೆ ಬಂದಿದ್ದ ಹಣದ ಸಹಿತ ದಿವಾನರ ಕಚೇರಿಗೆ ಬಂದರು.

"ಏನು ಬಂದಿರಿ ಗುಂಡಪ್ಪ?"

"ನನಗೆ ಈ ಹಣ ಯಾಕೆ ಕಳಿಸಿದ್ದೀರಿ?"

"ದಸರಾ ಉತ್ಸವವನ್ನು ಚೆನ್ನಾಗಿ ವರದಿ ಮಾಡಿದ್ದೀರಿ. ಅದಕ್ಕೆ"

"ಅದಕ್ಕೆ ಹಣ ಯಾಕೆ ಕಳಿಸಬೇಕು?"

"ನೀವು ಪತ್ರಕರ್ತರು.....ಓಡಾಟ ಇತ್ಯಾದಿ ಖರ್ಚುಗಳಿರುತ್ತವೆ. ಅಲ್ಲದೇ ಹಿಂದಿನಿಂದ ಬಂದ ಪದ್ಧತಿ".

"ವರದಿ ಮಾಡುವುದು ಪತ್ರಕರ್ತರ ಕರ್ತವ್ಯ. ಅದಕ್ಕೆ ಖರ್ಚಾದರೆ ಪತ್ರಿಕೆ ಕೊಡಬೇಕು. ಸರ್ಕಾರವಲ್ಲ. ನನಗೆ ಈ ಹಣ ಖಂಡಿತ ಬೇಡ. ಬೇಡವೇ ಬೇಡ".

ವಿಶ್ವೇಶ್ವರಯ್ಯನವರಿಗೆ ಈ ನಿಸ್ಪೃಹತೆ ತಕ್ಷಣ ಅರ್ಥವಾಯಿತು. ಸರ್ಕಾರದ ದಾಕ್ಷಿಣ್ಯ ಬೇಕಿಲ್ಲ ಈ ಪತ್ರಕರ್ತನಿಗೆ! ಅವನ ಸ್ವಾತಂತ್ರ್ಯದ ಕಲ್ಪನೆ ಎಷ್ಟು ದೊಡ್ಡದು! ಅವರಿಗೆ ತುಂಬ ಮೆಚ್ಚಿಕೆ ಎನಿಸಿತು. ತಮ್ಮ ಕಾರ್ಯದರ್ಶಿಗೆ ಹೇಳಿದರು:

“ಈ ಮನುಷ್ಯನ ರೀತಿ ಉಳಿದವರಂತಲ್ಲ. ಇವರಿಗೆ ನಾವು ಹಣ ಕೊಡಲು ಬರುವುದಿಲ್ಲ. ಹಿಂದಕ್ಕೆ ತೆಗೆದುಕೊಂಡು ಬಿಡಿ”

ನನ್ನ ಗೆಳೆಯ ಶ್ರೀ ಎಸ್. ದಿವಾಕರ (ಚೆನ್ನೈನಲ್ಲಿನ ಅಮೇರಿಕ ಕಾನ್ಸುಲೇಟ್‌ನಲ್ಲಿ ಕನ್ನಡ ಸಂಪಾದಕರಾಗಿದ್ದು ಇದೀಗ ನಿವೃತ್ತರಾಗಿದ್ದಾರೆ) ಅವರು ಡಿವಿಜಿಯವರ ಸಂಬಂಧಿ. ಅವರು ಡಿವಿಜಿಯವರ ಬಗೆಗಿನ ಒಂದು ನೆನಪನ್ನು ನನ್ನೊಂದಿಗೆ ಹಂಚಿಕೊಂಡರು. ಡಿವಿಜಿಯವರ ಮನೆಯ ಅಟ್ಟದಲ್ಲಿ ಒಂದು ಕಬ್ಬಿಣದ ಪೆಟ್ಟಿಗೆ ಇದ್ದಿತಂತೆ. ಆ ಪೆಟ್ಟಿಗೆಗೆ ಬೀಗ ಹಾಕಿ ಬೀಗದ ಕೈಯನ್ನು ತಮ್ಮ ಬಳಿಯೇ ಇಟ್ಟುಕೊಳ್ಳುತ್ತಿದ್ದ ಡಿವಿಜಿಯವರು ತಮ್ಮ ಮಗ ಬಿಜಿಎಲ್ ಸ್ವಾಮಿಯವರು ಆ ಪೆಟ್ಟಿಗೆಯ ಸಮೀಪ ಹೋಗದಂತೆ ತಾಕೀತು ಮಾಡಿದ್ದರಂತೆ. ಮುಂದೆ 1975ರಲ್ಲಿ ಡಿವಿಜಿಯವರು ತೀರಿಕೊಂಡ ಮೇಲೆ ಸ್ವಾಮಿಯವರು ಆ ಪೆಟ್ಟಿಗೆಯನ್ನು ಅಟ್ಟದಿಂದ ಕೆಳಗೆ ಇಳಿಸಿಕೊಂಡು ಅದನ್ನು ತೆರೆಯಲು ಅದರ ಬೀಗದ ಕೈಗಾಗಿ ಹುಡುಕಿದರೆ ಅದು ಸಿಕ್ಕದೇ, ಕೊನೆಗೆ ಬೀಗವನ್ನು ಒಡೆದು ಪೆಟ್ಟಿಗೆ ತೆರೆದು ನೋಡಿದರೆ - ಅದರಲ್ಲಿ ಶ್ರೀ ವಿಶ್ವೇಶ್ವರಯ್ಯ ಮತ್ತು ಶ್ರೀ ಮಿರ್ಜಾ ಇಸ್ಮಾಯಿಲ್ ಅವರು ದಿವಾನರುಗಳಾಗಿದ್ದ ಕಾಲದಲ್ಲಿ ತಮ್ಮ ಕೆಲಸಕ್ಕೆ ಡಿವಿಜಿಯವರಿಗೆ ಸಂದಾಯ ಮಾಡಿದ್ದ ಸಂಭಾವನೆಗಳ ಚೆಕ್ಕುಗಳಿದ್ದವು! ಡಿವಿಜಿಯವರು ಈ ಮಹನಿಯರುಗಳು ಸಂಭಾವನೆ ನೀಡಿದಾಗ ಅದನ್ನು ತಿರಸ್ಕರಿಸಿದರಂತೆ. ಆಗ ಅವರುಗಳು–ಹಾಗಿದ್ದರೆ ನಾವು ನಿಮ್ಮಿಂದ ನಮ್ಮ ಕೆಲಸಗಳಿಗೆ ಯಾವ ಸಹಾಯವನ್ನು ಪಡೆಯಲಾರೆವು ಎಂದು ನಿಷ್ಠುರ ಮಾತು ಆಡಿದಾಗ ಡಿವಿಜಿಯವರು ಅವರಿಂದ ತಮ್ಮ ಸಂಭಾವನೆಗಾಗಿ ಈ ಚೆಕ್ಕುಗಳನ್ನು ಪಡೆದು ಅವುಗಳನ್ನು ನಗದೀಕರಿಸಿಕೊಳ್ಳದೆ ಈ ಪೆಟ್ಟಿಗೆಯಲ್ಲಿ ಶಾಶ್ವತವಾಗಿ ಬಂಧಿಸಿಡುತ್ತಿದ್ದರು. ಡಿವಿಜಿಯವರ ಜನ್ಮ ಶತಮಾನೋತ್ಸವ ಸಂದರ್ಭದಲ್ಲಿ ಈ ಚೆಕ್ಕುಗಳನ್ನು ಪ್ರದರ್ಶಿಸಲಾಯಿತಂತೆ. ಬಡತನದ ಬದುಕು ಸಾಗಿಸುತ್ತಿದ್ದಾಗಲೂ ಹಣದ ಬಗೆಗಿನ ಡಿವಿಜಿಯವರ ನಿರ್ಮೋಹವು ಅವರ ಸ್ಥಿತಪ್ರಜ್ಞತೆಯ ಸಾಕ್ಷಿಯಾಗಿದೆ. ಡಿವಿಜಿಯವರ ಇಂತಹ ಪ್ರಾಮಾಣಿಕತೆ ಮತ್ತು ಸಾರ್ವಜನಿಕ (ಸರ್ಕಾರದ) ಹಣದ ಬಗೆಗಿನ ಜವಾಬ್ದಾರಿಯುತ ನಡತೆಯ ಕಾರಣವಾಗಿಯೇ ವಿಶ್ವೇಶ್ವರಯ್ಯನವರು ಅವರನ್ನು ಬೆಂಗಳೂರು ಮುನಿಸಿಪಲ್ ಕೌನ್ಸಿಲ್ಲಿಗೆ ಆ ನಂತರ ಲೆಜಿಸ್ಲೇಟಿವ್ ಕೌನ್ಸಿಲ್ಲಿಗೆ, ನಾಮಕರಣ ಮಾಡಿದರು. ಡಿವಿಜಿಯವರು ತಮಗೆ ನೀಡಿದ ಜವಾಬ್ದಾರಿಯನ್ನು ಯಾವತ್ತಿಗೂ ಅತ್ಯಂತ ನಿಷ್ಠೆಯಿಂದ ನೆರವೇರಿಸಿದ್ದಾರೆ.

ಡಿವಿಜಿಯವರ 'ಭಗವದ್ಗೀತಾ ತಾತ್ಪರ್ಯ' ಗ್ರಂಥಕ್ಕೆ 1967ಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಲಭ್ಯವಾಯಿತು. ಆದರೆ ಡಿವಿಜಿಯವರು ಆ ಪ್ರಶಸ್ತಿಯ ಧನವನ್ನು ತೆಗೆದುಕೊಳ್ಳುವುದಿಲ್ಲ ಎಂದು ತಕರಾರು ತೆಗೆದರು. ಆಗ ಶ್ರೀ ಆರ್.ವಿ. ಪ್ರಭಾಕರರಾಯರು, "ನಿಮಗೆ ಹಣ ತೆಗೆದುಕೊಳ್ಳುವುದು ಬೇಡ ಎಂತಾದರೆ ನಿಮ್ಮ ಸ್ವಂತಕ್ಕೆ ಅದನ್ನು ತೆಗೆದುಕೊಳ್ಳಬೇಡಿ. ಅದನ್ನು ಗೋಖಲೆ ಸಂಸ್ಥೆಗೆ ಕೊಟ್ಟುಬಿಡಿ" ಎಂದು ಒತ್ತಾಯಿಸಿದಾಗ ಡಿವಿಜಿಯವರು ಹಾಗೆಯೇ ಮಾಡಿದರು. ಪ್ರಶಸ್ತಿಯ ಆ ಮೊತ್ತದಿಂದ ಸಂಸ್ಥೆಗೆ ಒಂದು ಕೊಠಡಿಯನ್ನು ನಿರ್ಮಿಸಲಾಯಿತು. ಹಾಗೆಯೇ 1970 ರಲ್ಲಿ ಡಿವಿಜಿಯವರಿಗೆ ಬೆಂಗಳೂರಿನ ಪುಟ್ಟಣ್ಣಚೆಟ್ಟಿ ಟೌನ್ ಹಾಲ್‌ನಲ್ಲಿ ಪೌರ ಸನ್ಮಾನ ನೀಡಿ ಒಂದು ಲಕ್ಷ ಮೊತ್ತದ ನಿಧಿಯನ್ನು ಸಮರ್ಪಿಸಿದಾಗ ಅವರು ಆ ನಿಧಿಯನ್ನೂ ಗೋಖಲೆ ಸಂಸ್ಥೆಗೆ ನೀಡಿದರು.

ಇಂಥವರು ಈ ಡಿ.ವಿ. ಗುಂಡಪ್ಪ!

ಇಂದಿನ ಕಾಲದ ಸಾರ್ವಜನಿಕ ಜೀವನದಲ್ಲಿ ಇಂಥ ತಳಿಯ ಎಷ್ಟು. ಜನ ಇದ್ದಾರೆ? ಅಂಥವರನ್ನು ಹುಡುಕಲು ಬೇಕಾಗುವ ದುರ್ಬೀನು ಕೊಂಡರೆ ಎಷ್ಟು ಕಿಕ್‌ಬ್ಯಾಕ್ ದೊರೆತೀತು?!

# ಡಿವಿಜಿಯವರ ಮನೋಭೂಮಿಕೆ

ಡಿವಿಜಿಯವರು ಹುಟ್ಟಿ ಬೆಳೆದದ್ದು ಮುಳಬಾಗಿಲಿನಲ್ಲಿ. ಬೆಂಗಳೂರು ಪ್ರಾಂತ್ಯದಿಂದ ತಿರುಪತಿಗೆ ಯಾತ್ರೆ ಹೊರಟವರು ಮುಳಬಾಗಿಲಿನ ಆಂಜನೇಯ ಸ್ವಾಮಿಯ ದರ್ಶನ ಪಡೆದು ಯಾತ್ರೆ ಮುಂದುವರಿಸುತ್ತಿದ್ದರಂತೆ. ತಿರುಪತಿಗೆ ಈ ಸ್ಥಳವು ಮೂಡಣಭಾಗದಲ್ಲಿ ಇರುವುದರಿಂದ ಈ ಊರಿಗೆ ಮುಳಬಾಗಿಲು ಎನ್ನುವ ಹೆಸರು ಬಂದಿತೆನ್ನುವ ಐತಿಹ್ಯವಿದೆ. ಅದು ಏನೇ ಇರಲಿ. ಈ ಮುಳಬಾಗಿಲು ತೀರ್ಥ ಯಾತ್ರೆ-ಕ್ಷೇತ್ರಗಳ ಬಗೆಗಿನ ನಂಬಿಕೆಯ, ದೈವೀ ಭಾವ - ಆಸ್ತಿಕತೆಯ ನೆಲೆಯಾಗಿ ಬೆಳೆದುಬಂದಿರುವುದನ್ನು ಕಾಣುತ್ತೇವೆ.

ಈ ಮುಳಬಾಗಿಲಿನ ಊರ ಮಧ್ಯದಲ್ಲಿ ಸ್ಥಿರಗೊಂಡಿರುವ ಶ್ರೀಪಾದರಾಜರ ಮಠ ಮತ್ತು ಊರಿಂದ ಎರಡು ಕಿಲೋಮೀಟರ್ ದೂರದಲ್ಲಿರುವ ನೃಸಿಂಹ ತೀರ್ಥ ಕ್ಷೇತ್ರ, ಏಳು ಎಂಟು ಎಷ್ಟು ಆರಾಧನೆಯ ಗುಡಿಗಳ ಸಂಕೀರ್ಣವಾದ ಶ್ರೀಮದಾಂಜನೇಯ ಸ್ವಾಮಿಯ ದೇವಸ್ಥಾನ ಅಧ್ಯಾತ್ಮ ತತ್ವ ವಿಚಾರಗಳನ್ನು ಚರ್ಚೆಮಾಡುವ ವೆಂಕಟರಾಮಭಟ್ಟರು, ಚಂದ್ರಶೇಖರ ಶಾಸ್ತ್ರಿಗಳು, ರಂಗಾಚಾರ್ಯರು, ಅವರೂರು ಸಹೋದರರು, ಶ್ರೀಪಾದಮಠದ ಶ್ರೀ ಪಾದಂಗಳವರು, ಮಾಧ್ವ ವಿದ್ವನಂಡಲಿ, ಅಷ್ಟಾಚಾರ್ಯರು, ಮುಳಬಾಗಿಲಿನ ಅರ್ಚಕ ವರ್ಗದವರು ಈ ಎಲ್ಲ- ಡಿವಿಜಿಯವರ ಬಾಲ್ಯಕಾಲದ ಸ್ಥಾವರ - ಜಂಗಮ ಪರಿಸರದ ಸಾನ್ನಿಧ್ಯವು ಅವರ ಮನಸ್ಸಿನ ಮೇಲೆ ಆಸ್ತಿಕತೆಯ ಅಚ್ಚೊತ್ತಿತ್ತು, ಆಂಜನೇಯ ಸ್ವಾಮಿಯ ದೇವಸ್ಥಾನದಲ್ಲಿ ನಡೆಯುವ ಪೂಜೆ-ಉತ್ಸವಗಳ ವೈಭವವು ಡಿವಿಜಿಯವರ ಎಳೆಯ ಮನವನ್ನು ರೂಪಿಸಿದ ರೀತಿಯನ್ನು ಅವರ ದೇವತಾರ್ಚನೆಯ ಆಕಾಂಕ್ಷೆಯ ಘಟನೆಯೊಂದರ ಮೂಲಕ ತಿಳಿಯಬಹುದು.

"......ಬಾಲ್ಯದಲ್ಲಿ ನಾನು ವೈಕುಂಠ ದ್ವಾದಶಿಯ ಉತ್ಸವದ ವೈಭವಕ್ಕೆ ಮನಸೋತವನಾಗಿ ನನ್ನ ಮನೆಯಲ್ಲಿ ಹಾಗೆ ದೇವರನ್ನಿಟ್ಟು ಅಲಂಕಾರ ಮಾಡಬೇಕೆಂದು ಪ್ರವೃತ್ತಿಯುಳ್ಳವನಾದೆ. ಅದಕ್ಕಾಗಿ ಒಂದು ದೊಡ್ಡ ವಿಗ್ರಹಬೇಕೆಂದು ನನ್ನ ಕಿರಿಯಜ್ಜನನ್ನು ಕಾಡಿಸುತ್ತಿದ್ದೆ. ನನ್ನ ಸ್ವಂತ ದೇವತಾರ್ಚನೆಗೆ ನನ್ನ ಅಜ್ಜಿ ಸೋದರಮಾವಂದಿರ ಪ್ರೋತ್ಸಾಹ. ಕೊನೆಗೆ ವಿದ್ವಾನ್ ಸಂಜೀವಪ್ಪನವರು ಒಂದು ಶ್ರೀ ಪರವಾಸುದೇವ ವಿಗ್ರಹವನ್ನು ನನಗೆ ತಂದುಕೊಟ್ಟರು. ಅದು ಬಲು ಮುದ್ದಾಗಿತ್ತು. ಅದಕ್ಕೆ ಅಲಂಕಾರ ಮಾಡಲು ನನ್ನ ತಾತಂದಿರು ನನಗೆ ಕೊಟ್ಟಿದ್ದ ಒಂದು ಸಣ್ಣ ಕಾಶ್ಮೀರ

ಹಾಲಿನ ಜ್ಯೋತಿ ಕೆಲಸದ ಅಂಚನ್ನು ಕತ್ತರಿಸಿ ಪರವಾಸುದೇವ ಮೂರ್ತಿಯನ್ನು ಸಿಂಗರಿಸಿದೆ. ನನ್ನ ತಂದೆಗೆ ಗುರುತು ಪತ್ತೆಯಾಗಿ ಗುದ್ದುಗಳ ಸಮಾರಾಧನೆಯ ಊಟವಾಯಿತು. ಅದರ ಮೊಂಡು ಜೀವ. ನನಗೆ ಮುಕ್ಕಳಾಗುವವರೆಗೂ ಆ ಪರವಾಸುದೇವರು ಆಗಾಗ ಕಣ್ಣಿಗೆ ಕಾಣಿಸುತ್ತಿದ್ದರು......." (ಡಿವಿಜಿ ಕೃತಿಶ್ರೇಣಿ :7, ಪುಟ 3(14)). ಹೀಗೆ ಡಿವಿಜಿಯವರು ದೈವತ್ವದ ಕಲ್ಪನೆಯನ್ನು ಅಂತರ್ಗತಗೊಳಿಸಿಕೊಂಡವರು. ಅವರು ಒಂದು ಕಡೆ "ಮನೆಯನ್ನು ಬಿಟ್ಟರೆ ಆಂಜನೇಯ ದೇವಸ್ಥಾನವೇ ನನಗೆ ವಿಶ್ವವಿದ್ಯಾಲಯ" ಎಂದು ಹೇಳಿಕೊಳ್ಳುತ್ತಾರೆ.

ಇದೇ ರೀತಿಯಾಗಿ ಶ್ರೀಪಾದರಾಜ ಮಠದ ಶ್ರೀ ಪಾದಂಗಳವರ ಸಾನ್ನಿಧ್ಯವೂ ಅವರ ಮೇಲೆ ಆಳವಾದ ಪ್ರಭಾವ ಬೀರಿದೆ. "....ಆ ಗುರುಗಳ ಪೂರ್ವಾಶ್ರಮದ ಹೆಸರು ಹರಿಯಪ್ಪಾಚಾರ್ಯರೆಂದು. ಅವರು ಮಹಾ ವಿದ್ವಾಂಸರು ಮತ್ತು ತಪಸ್ವಿಗಳು. ನಾನು ಅವರನ್ನು ಕಂಡಿದ್ದದ್ದು ಅವರ ವಾರ್ಧಕ್ಯದಲ್ಲಿ. ಸಾಮಾನ್ಯವಾಗಿ ಬೆಳಗ್ಗೆ ಆರೂ ಮುಕ್ಕಾಲು ಏಳು ಘಂಟೆಯ ಸುಮಾರಿಗೆ ನನ್ನ ಸ್ಕೂಲುಬಳಿ ಬಂದಾಗ ಸ್ವಾಮಿಗಳು ಪ್ರಾತರ್ವಿಧಿಗಳನ್ನು ಮುಗಿಸಿಕೊಂಡು ನೃಸಿಂಹತೀರ್ಥದ ಕಡೆಯಿಂದ ಆ ವೇಳೆಗೆ ಸರಿಯಾಗಿ ಅಲ್ಲಿಗೆ ಬರುತ್ತಿದ್ದರು. ಸ್ವಾಮಿಗಳನ್ನು ನಾನು ಕಂಡಕೂಡಲೇ ಎಲ್ಲಿ ನಿಂತಿದ್ದರೆ ಅಲ್ಲಿಂದಲೇ ನೆಲದ ಮೇಲೆ ಸಾಷ್ಟಾಂಗ ನಮಸ್ಕಾರ ಮಾಡುತ್ತಿದ್ದೆ. ಸ್ವಾಮಿಗಳವರು ನನ್ನನ್ನೇ ವಾತ್ಸಲ್ಯದೃಷ್ಟಿಯಿಂದ ನೋಡುತ್ತಿದ್ದು ನಾನು ಎದ್ದು ನಿಂತಕೂಡಲೇ ಬಳಿಗೆ ಕರೆದು ತಲೆಯ ಮೇಲೆ ಕೈಯಿಟ್ಟು ಏನಾದರೊಂದು ಮಾತನಾಡಿಸುವರು. ಬಳಿಕ-ಸ್ಕೂಲಿಗೆ ಹೋಗು ಎನ್ನುತ್ತಿದ್ದರು. ಅವರ ಆಶೀರ್ವಾದ ನನ್ನನ್ನು ಈ ಹೊತ್ತೂ ಕಾದುಕೊಂಡಿದೆ ಎಂದು ತಿಳಿದಿದ್ದೇನೆ.......ನನಗೆ ಬಾಲ್ಯದಿಂದ ಮನಸ್ಸಿನಲ್ಲಿ ನಿಂತು ನನ್ನ ಜೀವನಕ್ಕೆ ವಜ್ರಕವಚವಾಗಿ ಬಂದಿರುವ ಸ್ಮೃತಿಸಂಗತಿಯೆಂದರೆ ಶ್ರೀಪಾದರಾಜ ಮಠದ ಶ್ರೀಪಾದಂಗಳವರದು." (ಡಿವಿಜಿ ಕೃತಿ ಶ್ರೇಣಿ-7 ಪುಟ: 285).

ಇದೇ ರೀತಿ ಅವರ ಮನಸ್ಸಿನ ಮೇಲೆ ಆಳವಾದ ಪ್ರಭಾವ ಬೀರಿದ ಇನ್ನೊಬ್ಬ ವ್ಯಕ್ತಿಯೆಂದರೆ ಸಾಕಮ್ಮನವರು. ಸಾಕಮ್ಮನವರು ಡಿವಿಜಿಯವರ ತಾಯಿಯ ತಾಯಿ. ತಮ್ಮ ಅಜ್ಜಿಯ ಬಗೆಗೆ ಡಿವಿಜಿಯವರು ಹೇಳುವ ಮಾತುಗಳನ್ನು ಕೇಳಿ. "....ನನ್ನ ಜೀವಮಾನದಲ್ಲಿ ನಾನು ಕಂಡಿರುವ ಮನುಷ್ಯ ವ್ಯಕ್ತಿಗಳಲ್ಲಿ ಮಹರ್ಷಿಪ್ರಾಯದವಳಾದವರು ನನ್ನ ತಾಯಿಯ ತಾಯಿ ಸಾಕಮ್ಮನವರು. ಆಕೆಗೆ ರಾಮಾಯಣ, ಭಾರತಾದಿ ಸಮಸ್ತ ಪುರಾಣಗಳೂ ಹೃದಯಸ್ಥವಾಗಿದ್ದವು. ಆಕೆ

ಹೇಳುತ್ತಿದ್ದ ದೇವರ ನಾಮಗಳು ನೂರಿನ್ನೂರು ಇರಬಹುದು. ಪದ್ಯಗಳು ನೂರಿನ್ನೂರು. ಆಕೆ ಸಹಿಸಿದ ಕಷ್ಟಗಳನ್ನಂತೂ ಕಣ್ಣು ಒದ್ದೆಯಾಗದೇ ವರ್ಣಿಸಲಾಗದು. ಎಲ್ಲ ಕಷ್ಟಗಳನ್ನೂ ಸಹಿಸಿ, ಭಗವದ್ಗೀತೆ ಎಲ್ಲಕ್ಕಿಂತ ಮೇಲಿನದೆಂದು ನಂಬಿ ಪರೋಪಕಾರ, ಸಾಧು ಸಜ್ಜನ ಸೇವಾ ನಿರತಳಾಗಿ ಆಯುಷ್ಯವನ್ನು ಮುಗಿಸಿಕೊಂಡಾಕೆ ನನ್ನ ಅಜ್ಜಿ''. (ಡಿವಿಜಿ ಕೃತಿಶ್ರೇಣಿ-8 ಪು:192). ಈ ಅಜ್ಜಿಯ ಬದುಕನ್ನು ಒಂದು ತಪಸ್ಸಿನಂತೆ ಕಂಡವರು ಡಿವಿಜಿ. ಹಾಗೆಯೇ ವೆಂಕಟರಾಮಭಟ್ಟರ ವ್ಯಕ್ತಿತ್ವವೂ ಡಿವಿಜಿಯವರ ಮೇಲೆ ಅಪಾರವಾದ ಪ್ರಭಾವ ಬೀರಿದೆ. ವೆಂಕಟರಾಮಭಟ್ಟರ ಕುಲವೃತ್ತಿ ಪೌರೋಹಿತ್ಯ. ಡಿವಿಜಿಯವರ ಮನೆಯೆದುರಿಗೇ ವೆಂಕಟರಾಮಭಟ್ಟರ ವಿಶಾಲವಾದ ಮನೆ. ಆ ಮನೆ ಅನ್ನದಾನಕ್ಕೆ ಪ್ರಸಿದ್ಧವಾಗಿದ್ದರಿಂದ ಅನ್ನಂಭಟ್ಟ, ಅನ್ನಪೂರ್ಣಮ್ಮ ಎಂತೆನ್ನುವ ಹೆಸರುಗಳು ಆ ವಂಶದುದ್ದಕ್ಕೂ ಬಂದಿದ್ದವು. ವೆಂಕಟರಾಮಭಟ್ಟರ ಮನೆಯ ಹೊರಗಡೆಯ ಉದ್ದನಾದ ಜಗಲಿಯಲ್ಲಿ ಸಂಜೆ ಸಂಜೆಯೂ ಗೋಷ್ಠಿ ನಡೆಯುತ್ತಿತ್ತಂತೆ. ಅಲ್ಲಿ ಕಾವ್ಯ, ಶಾಸ್ತ್ರ, ಪುರಾಣಗಳೆಲ್ಲದರ ಚರ್ಚೆ. ವೆಂಕಟರಾಮ ಭಟ್ಟರ ಮನೆಯಲ್ಲಿ ಯಾವಾಗಲೂ ನಾಲ್ಕೈದು ಮಂದಿ ವಿದ್ಯಾರ್ಥಿಗಳಿರುತ್ತಿದ್ದರು. ಡಿವಿಜಿಯವರಿಗೂ ಅವರು ವೇದ ಪಾಠ ಹೇಳಿಕೊಟ್ಟವರು. ವೆಂಕಟರಾಮಭಟ್ಟರ ಬದುಕು, ವ್ಯಕ್ತಿತ್ವಗಳನ್ನು ತುಂಬ ಹತ್ತಿರದಿಂದ ನೋಡಿ ಪ್ರಭಾವಿತರಾದ ಡಿವಿಜಿಯವರು ಅವರ ಬಗೆಗೆ: "ನನ್ನ ಜೀವನದಲ್ಲಿ ಒಳ್ಳೆಯದೇನಾದರೂ ಇದ್ದರೆ ಅದಕ್ಕೆ ಕಾರಣರಾದವರಲ್ಲಿ ಒಬ್ಬ ಮುಖ್ಯರಾದವರು ವೇದಮೂರ್ತಿ ವೆಂಕಟರಾಮ ಭಟ್ಟರು'' ಎಂದು ಕೃತಜ್ಞತೆಯಿಂದ ನೆನೆದಿದ್ದಾರೆ. ವೆಂಕಟರಾಮಭಟ್ಟರ ಭಾವಮೈದ ನಿವೃತ್ತಿ ತಿಪ್ಪಾಭಟ್ಟರು ಡಿವಿಜಿಯವರಿಗೆ "ನೀನು ಸೂರ್ಯ ಪ್ರಸಾದದಿಂದ ಹುಟ್ಟಿದವನು. ಆದ್ದರಿಂದ ನೀನು ಬಹಳ ಶುಚಿಯಾಗಿ ಭಕ್ತಿಯಿಂದ ಇರಬೇಕು'' ಎನ್ನುತ್ತಿದ್ದರಂತೆ. ಎರಡು ಹೊತ್ತಿನ ಭೋಜನ. ಅದು ಹೆಚ್ಚಿನ ತರಕಾರಿಗಳಾಗಲೀ, ಭಕ್ಷ್ಯ ಭೋಜ್ಯಗಳಾಗಲೀ ಇಲ್ಲದ್ದು; ಸ್ನಾನಕ್ಕೆ ಕೆರೆಯ ನೀರು; ಹಣೆಗೆ ವಿಭೂತಿ - ಇಷ್ಟಿದ್ದರೆ ಅಷ್ಟೈಶ್ವರ್ಯವಿದ್ದಂತೆ ಎಂದು ತೃಪ್ತಿಯಿಂದ ವೇದವನ್ನು ಹಾಡುತ್ತಿದ್ದ ಶಿವಶಂಕರಶಾಸ್ತ್ರಿಗಳ ಬದುಕು ಡಿವಿಜಿಯವರಲ್ಲಿ ಬೆರಗನ್ನು ಹುಟ್ಟಿಸಿದ್ದಿತು. ಶಿವಶಂಕರ ಶಾಸ್ತ್ರಿಗಳು ಚಿಂದೆಯಲ್ಲದ ಬಟ್ಟೆ ಉಟ್ಟದ್ದೇ ಇರಲಿಲ್ಲವಂತೆ. ಆದರೆ ಬಟ್ಟೆ ಹರಕಲು ಎಂಬುದರ ಪರಿವೆಯೇ ಅವರಿಗಿರುತ್ತಿರಲಿಲ್ಲ. ಹರಕಲು ಬಟ್ಟೆಯನ್ನು ಹೊಲಿಯುತ್ತಿರಲಿಲ್ಲ, ಹರಿದ ಅಂಚುಗಳನ್ನು ಕೈಯಿಂದ ಗಂಟು ಹಾಕಿರುತ್ತಿದ್ದರು. ಯಾವಾಗಲೂ ಅವರ ಮೈಮೇಲೆ ಈ ಗಂಟು ಹಾಕಿದ ಚಿಂದಿಗಳು. ಬಟ್ಟೆಯ ಹರಕಲು ಅವರ ಗಡ್ಡದ ಮೇಲಿನ ಕೂದಲಿನಂತೆ ಸ್ವಾಭಾವಿಕವಾದದ್ದು! "ಹರಿದಿರುವ ಕಡೆ ಹೊಲಿದಾದರೂ ಹಾಕಿಕೊಳ್ಳಬಹುದಲ್ಲ''

ಎಂದು ಕೇಳಿದರೆ ಶಾಸ್ತ್ರಿಗಳು - "ಛೀಛೀ! ಹೊಲಿದ ಬಟ್ಟೆಗಳನ್ನು ಬ್ರಾಹ್ಮಣ ಉಡುವುದೆಂದರೇನು? ಅದು ಶಾಸ್ತ್ರ ವಿರೋಧ" ಎನ್ನುತ್ತಿದ್ದರಂತೆ. ಇಷ್ಟೆಲ್ಲದರ ನಡುವೆಯೂ ಅವರು ಯಾಚನೆಗೆ ಹೊರಟವರಲ್ಲ. ಯಾಜನ, ಪ್ರತಿಗ್ರಹ-ಇವೆರಡೂ, ಕರ್ತವ್ಯವೆಂಬ ಬುದ್ಧಿಯಿಂದರೇ ಇದ್ದವರು. "ಅತ್ಯಾಶನಾದತೀಪಾನಾತ್ / ಯಚ್ಚ ಉಗ್ರಾತ್ ಪ್ರತಿಗ್ರಹಾತ್"

ಈ ಪಾಪಗಳಿಂದ ನಮ್ಮನ್ನು ಉಳಿಸು ಭಗವಂತ-ಎಂದು ಬೇಡುತ್ತಿದ್ದರು. ಇಂಥ ಜನಕ್ಕೆ ಜೀವನ ಸೌಕರ್ಯದ ಮಟ್ಟವನ್ನು ಏರಿಸುವುದು ಎಂಬ ಮಹಾಮಂತ್ರದ ಯುಗದಲ್ಲಿ ಹಳೆಯ ನೆಮ್ಮದಿ ಹೋಯಿತು; ಹಳೆಯ ಮನೋ ಸ್ವೈರ್ಯ ಹೋಯಿತು; ಹೊಸ ಸಂಪತ್ತು ಬರಲಿಲ್ಲ. ಆಗ ಅವರು ಮಾಡುತ್ತಿದ್ದ ಊಟವೂ ಈಗ ಅವರ ಮೊಮ್ಮಕ್ಕಳಿಗೆ ದುರ್ಲಭವಾಗಿದೆ. (ಜ್ಞಾಪಕ ಚಿತ್ರಶಾಲೆ - 5 ಪುಟ:257)

ಒಟ್ಟಿನ ಮೇಲೆ ಡಿವಿಜಿಯವರ ಬಾಲ್ಯವು ಒಂದು ದಟ್ಟವಾದ ವೈದಿಕ ಆವರಣದಲ್ಲಿ ಸಂಘಟಿಸಿ ಆ ವೈದಿಕ ಆವರಣವು ಡಿವಿಜಿಯವರಿಗೆ ಬೆಚ್ಚನೆಯದೆನ್ನಿಸಿತು. ಅವರಿಗೆ ವೈದಿಕ ಆವರಣವು ಆರೋಗ್ಯಪೂರ್ಣ ಬದುಕಿಗೆ ಅತ್ಯವಶ್ಯ ಎನ್ನಿಸಿತು. ವೈದಿಕ ಜೀವನ ವಿಧಾನದಲ್ಲಿ ಅವರು ಮುಖ್ಯವಾಗಿ ಗುರುತಿಸಿಕೊಳ್ಳುವ ಮೂರು ಲಕ್ಷಣಗಳೆಂದರೆ:

(ಅ) ನಂಬಿಕೆ

(ಆ) ನೆಮ್ಮದಿ

(ಇ) ವಾತ್ಸಲ್ಯ

ವೈದಿಕ ಸಂಸ್ಕೃತಿಯ ವಿಶೇಷವೆಂದರೆ, ಎಲ್ಲ ತಾರ್ಕಿಕ ವ್ಯಾಪಾರಗಳ ನಡುವೆಯೂ ಒಂದು ಪಾರಮಾರ್ಥಿಕತೆ, ಎಲ್ಲ ಐಹಿಕ ಪ್ರವೃತ್ತಿಗಳಲ್ಲಿಯೂ ಒಂದು ಮನಶಾಂತಿಯ ಬಯಕೆ, ಎಲ್ಲ ಸಂಸಾರ ಸಂಬಂಧಗಳಲ್ಲಿಯೂ ಒಂದು ಪರಿಶುದ್ಧಿ, ಅಂತರಾತ್ಮ ಹಿತದೃಷ್ಟಿ, ನಿರುಪಾಧಿಕತೆ, ಶುಚಿತೆ ಈ ಮೂರನ್ನೂ ಜೀವನದ ಉತ್ಕೃಷ್ಟ ಧ್ಯೇಯಗಳನ್ನಾಗಿ ಅಂಗೀಕರಿಸುವುದು ಭಾರತೀಯರಿಗೆ ಪೂರ್ವಕಾಲದಿಂದ ಬರೆದಿರುವ ಪ್ರವೃತ್ತಿ. ಬಡತನದಲ್ಲಿ ಸಿರಿತನವನ್ನು ಅನುಭವಿಸುವುದು, ಗದ್ದಲದ ನಡುವೆ ನೆಮ್ಮದಿಯನ್ನರಸುವುದು, ಕೊಳಕಿನ ನಡುವೆ ಚೊಕ್ಕಟಕ್ಕಾಗಿ ಶ್ರಮಿಸುವುದು ಇವು ಭಾರತೀಯ ಸಂಸ್ಕೃತಿಯ ವಿಶೇಷತೆಗಳು. (ಡಿವಿಜಿ ಕೃತಿಶ್ರೇಣಿ - 7 ಪುಟ: 248)

ವೈದಿಕ ಆಚರಣದಲ್ಲಿ ಬದುಕಿದ ಇವರು ಪುಣ್ಯ-ಪಾಪಗಳು, ಸ್ವರ್ಗ-ನರಕಗಳೆಂಬುದರಲ್ಲಿಯೂ ನಂಬಿಕೆಯಿಟ್ಟಿದ್ದರು. ಅದು ಆಳವೂ ಗಾಢವೂ ಆದ ನಂಬಿಕೆ. ಹೀಗೆ ನಂಬಿಕೆ ಇದ್ದದ್ದರಿಂದ ಅವರ ಜೀವನದಲ್ಲಿ ಒಂದು ನೆಮ್ಮದಿ ಕಾಣಬರುತ್ತಿತ್ತು. ಯಾವುದಕ್ಕೂ ಪರದಾಟವಿಲ್ಲ, ರಾಗ ದ್ವೇಷಗಳ ಅತಿಯಿಲ್ಲ. ಬಂದ ಕಷ್ಟ ಸಂಕಟಗಳನ್ನು ಹೇಗೋ ಸುಧಾರಿಸಿ ಸಹಿಸಿಕೊಳ್ಳುವ ಶಕ್ತಿ ಅವರಿಗಿತ್ತು. ಹೆಚ್ಚು ತಲ್ಲಣವಿಲ್ಲದಿದ್ದ ಕಾರಣದಿಂದ ತಮಗೆ ಇದ್ದುದರಲ್ಲಿ, ತಮಗೆ ಬಂದದ್ದರಲ್ಲಿ ಸಂತೋಷಪಡುವುದು ಅವರಿಗೆ ಸಾಧ್ಯವಾಗಿತ್ತು. ನೆಮ್ಮದಿಯಿಂದ ಸಂತೋಷದಿಂದ ಬದುಕುವುದು ಸಾಧ್ಯವಾಯಿತು.

ಹೀಗೆ ಜಗದೀಶ್ವರನ ಪ್ರಭುತ್ವದಲ್ಲಿ ನಂಬಿಕೆಯೂ, ಮನಸ್ಸಿನಲ್ಲಿ ಸಮಾಧಾನವೂ ಇದ್ದದ್ದರಿಂದ ಆ ಜನಕ್ಕೆ ಲೋಕವಿನಯದಲ್ಲಿ ಮೈತ್ರಿಯಿಂದ ನಡೆದುಕೊಳ್ಳುವುದು ಸುಲಭವಾಯಿತು. ನೆರೆಯವರಿಗೆ ಈ ಹೊತ್ತು ಸಿರಿ ಬಂದಿತೆಂದರೆ ಅದನ್ನು ನೋಡಿ ಕರುಬಿಲ್ಲ. ದೇವರು ದಯಮಾಡಿದರೆ ನಾಳೆ ನಮಗೂ ಸಿರಿಬಂದೀತು. ದೇವರ ದಯ ದೊಡ್ಡದು. ಅದು ಅವರಿಗೆ ಬಂದಿತು. ನಾವು ಸಂತೋಷಪಡೋಣ. ನೆರೆಯವರಿಗೆ ಕಷ್ಟಬಂದಿತು. ಅಯ್ಯೋ ಅದು ಪಾಪದ ಫಲ. ನಮಗೂ ಅದು ತಪ್ಪಿದ್ದಲ್ಲ, ಅವರ ಕಷ್ಟದ ಹೊರೆಯನ್ನು ನಮ್ಮಿಂದಾದಷ್ಟು ಹಗುರ ಮಾಡೋಣ. ಇದು ಲೋಕಸ್ನೇಹ. ಈ ಲೋಕ ಸ್ನೇಹ ಬರುವುದು ಮನಸ್ಸು ವಿಶಾಲವಾದಾಗ. ಮನಸ್ಸು ವಿಶಾಲವಾಗುವುದು ನೆಮ್ಮದಿಯಿದ್ದಾಗ, ನೆಮ್ಮದಿ ಬರುವುದು ನಂಬಿಕೆ ಪೂರ್ಣ ನಂಬಿಕೆಯಾದಾಗ.

ಇದು ಹಿಂದಿನ ಜೀವನದ ಅವಲೋಕನದಿಂದ ತೋರಿ ಬರುತ್ತದೆ. ನಮ್ಮ ಮೋಟಾರ್ – ಆಟಂ ಯುಗದಲ್ಲಿ, ಈಗಿನ ಗಡಿಬಿಡಿಯಲ್ಲಿ, ಇಂದಿನ ಬಾಳಿನ ಹೋರಾಟದಲ್ಲಿ, ಈ ಪಾಲಿ ಗಲಾಟೆಯಲ್ಲಿ, ಈಗಿನ ಫೇಸ್‌ಪೌಡರ್ ಟೂತ್ ಪೇಷ್ಟುಗಳ ಸಂಭ್ರಮದಲ್ಲಿ, ಇಂತಹ ನೆಮ್ಮದಿಯ ಕಾಲ ಒಂದಿತ್ತು ಎಂಬುದನ್ನು ನಾವು ಮನಸ್ಸಿಗೆ ತಂದುಕೊಂಡರೆ ಅದರಿಂದ ನೆಮ್ಮದಿಯ ಸ್ವರೂಪ ಕೊಂಚವಾದರೂ ನಮ್ಮ ಮನಸ್ಸಿಗೆ ಬಂದೀತೇನೋ ಎಂದು ಡಿವಿಜಿ ಕಳೆದುಹೋದುದರ ಬಗೆಗೆ ಹಳಹಳಿಸುತ್ತಾರೆ.

ಇಂಥ ಮನೋಭಾವದ ಹಿನ್ನೆಲೆಯಿಂದಲೇ ಡಿವಿಜಿಯವರು ಅವಿಭಕ್ತ ಕುಟುಂಬದ ಇತ್ಯಾತ್ಮಕತೆಯನ್ನು ಹೇಳುತ್ತಾ ಅದನ್ನು ಉಳಿಸಿಕೊಳ್ಳಲು ಸಾಧ್ಯವಾಗುತ್ತಿಲ್ಲವಲ್ಲಾ ಎಂದು ಪೇಚಾಡುತ್ತಾರೆ. ಡಿವಿಜಿಯವರು ಅವಿಭಕ್ತ ಕುಟುಂಬವು ಆತ್ಮ ವಿಸ್ತರಣಕ್ಕೆ ಅನುಕೂಲವಾದದ್ದು ಎಂದು ಪ್ರತಿಪಾದಿಸುತ್ತಾರೆ. "ಮನೆಯಲ್ಲಿ

ನಾಲ್ಕೈದು ಮಂದಿ ಅಣ್ಣ ತಮ್ಮಂದಿರು ಒಟ್ಟಾಗಿ ಬಾಳಿಕೊಂಡಿದ್ದರೆ ಅವರಲ್ಲಿ ಪ್ರತಿಯೊಬ್ಬನೂ ತನ್ನ ಸ್ವತ್ವವನ್ನು ಉಳಿದ ನಾಲ್ಕೈದು ಮಂದಿ ಅಣ್ಣ ತಮ್ಮಂದಿರುಗಳ ಸ್ವತ್ವಗಳಲ್ಲಿ ಏಕೀಭವಿಸುವುದನ್ನು ಅಭ್ಯಾಸ ಮಾಡಿಕೊಳ್ಳುತ್ತಾನೆ. ಆ ನಾಲ್ವರೈವರ ಹೆಂಡಂದಿರುಗಳೂ ಹಾಗೆಯೇ ಪರಸ್ಪರವಾಗಿ ಅಭೇದ ದೃಷ್ಟಿಯಿಂದ ನಡೆದುಕೊಳ್ಳುವುದನ್ನು ಕಲಿಯುತ್ತಾರೆ. ಒಬ್ಬರು ಉಟ್ಟ ಪಂಚೆಯನ್ನು ಮತ್ತೊಬ್ಬರು ಉಡುವುದೂ ಅಪರೂಪವಲ್ಲ.

ಈ ಅನ್ಯೋನ್ಯಭಾವದಿಂದ ಅವರುಗಳ ಮನಸ್ಸಿನ ಸಹಾನುಭೂತಿ ಗುಣವು ವಿಸ್ತಾರಪಡುತ್ತದೆ. ಇದೇ ಆತ್ಮ ವಿಸ್ತಾರದ ದಾರಿ. ಅವರಲ್ಲಿ ಕಡಿಮೆ ಶಕ್ತಿಯುವನಿರುತ್ತಾನೆ. ಕಡಿಮೆ ಸಂಪಾದನೆಯವನಿರುತ್ತಾನೆ. ಗುಣದಲ್ಲಿ ಕಡಿಮೆಯಾದವನು ಕೂಡ ಇರುತ್ತಾನೆ. ಅಂಥವನಿಗೆ ಹೆಚ್ಚು ಗುಣವಂತರ, ಹೆಚ್ಚು ಶಕ್ತಿವಂತರ ಸಂಪರ್ಕ ನಿರಂತರವಾಗಿರುವುದರಿಂದ ಅವನ ಸಣ್ಣತನ ಮರೆತಂತೆಲ್ಲ ಒಂದು ದೊಡ್ಡತನ ರೂಢಿಗೆ ಬರುತ್ತದೆ. ಇದೇ ಹೃದಯ ವೈಶಾಲ್ಯ. ಇದು ತನ್ನದು- ಇದು ಅವನದು ಎಂಬ ಭೇದ ಬುದ್ಧಿ ಕಳೆದು ಹೋಗಬೇಕಾದರೆ ಮನುಷ್ಯನು ಇತರರೊಡನೆ ಬೆರೆತು ಅವರ ಕಷ್ಟಗಳೂ, ದುಃಖಗಳೂ, ದುರ್ಬಲತೆಗಳೂ ಅವು ತನ್ನವೇ ಎಂಬಂತೆ ಅನುಭವಿಸಬೇಕು. ಈ ಅಭೇದವೃತ್ತಿಯ ಅಭ್ಯಾಸಕ್ಕೆ ಅವಿಭಕ್ತ ಕುಟುಂಬ ಸಹಾಯಕಾರಿ.

ವೇದಾಂತ ತತ್ವಜ್ಞರು 'ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ' ಎಂಬ ರೀತಿಯನ್ನು ಅಭ್ಯಾಸ ಮಾಡುವುದೇ ಆತ್ಮಶಾಂತಿಗೂ ಸಾಧನವೆಂದು ಉಪದೇಶಿಸಿದ್ದಾರೆ. ಈ ಸರ್ವಾತ್ಮಭಾವನೆಯು ಬಾಯ ಮಾತಿಗೆ ಸುಲಭವಾಗಿರುವಷ್ಟು ಮಟ್ಟಿಗೆ ನಿತ್ಯಾನುಷ್ಠಾನಕ್ಕೆ ಸುಲಭವಲ್ಲ. ಅದು ನಮ್ಮ ದಿನಚರಿಯಲ್ಲಿ ಅನುಭವಕ್ಕೆ ಬರಬೇಕಾದರೆ ನಮಗೆ ಅಂದಂದಿನ ಕೋಪತಾಪ ಲೋಭ ಮತ್ಸರಗಳನ್ನು ಅದುಮಿಕೊಳ್ಳುತ್ತ, ಅನ್ಯೋನ್ಯತಾ ತತ್ವವನ್ನು 'ಶಿಕ್ಷಣ ಮಾಡಿಸಿಕೊಡುವ' ಪಾಠಶಾಲೆ, ಅವಿಭಕ್ತ ಕುಟುಂಬ.

ಅವಿಭಕ್ತ ಕುಟುಂಬವು ನಮ್ಮಲ್ಲಿ ಅಧ್ಯಾತ್ಮ ಭಾವವನ್ನು ಪ್ರೇರೇಪಿಸುತ್ತದೆ. ಅಧ್ಯಾತ್ಮ ನೀತಿಯೆಂದರೆ ಅದೇನೋ ಭಯಂಕರವಾದದ್ದೆಂದು ಯಾರೂ ಅಂದುಕೊಳ್ಳಬೇಕಾಗಿಲ್ಲ. ಅದೊಂದು ಸಾಮಾನ್ಯ ಸಂಗತಿ. ನಮ್ಮಲ್ಲಿ ನೂರಕ್ಕೆ ತೊಂಬತ್ತು ಮಂದಿ ಅವರ ಜೀವನದಲ್ಲರಿಯದೆ ಆ ಗುಣವನ್ನು ಅಭ್ಯಾಸ ಮಾಡಿಕೊಂಡೇ ಇರುತ್ತಾರೆ. ನೀತಿ ಪ್ರಭಾವವಿಲ್ಲದೆ ಸಮಾಜದ ನಿರ್ವಹಣೆ ಸಾಧ್ಯವೇ ಇಲ್ಲ. ಆ ನೀತಿಯು

ನಮ್ಮ ನಿತ್ಯ ವ್ಯವಹಾರದಲ್ಲಿ ಸ್ನೇಹದರೂಪ ತಾಳಿರುತ್ತದೆ. ಕರುಣೆಯ ರೂಪ ತಾಳಿರುತ್ತದೆ. ಮತ್ತೊಬ್ಬರ ಹಿತಕ್ಕಾಗಿ ನಾವು ಸ್ವಲ್ಪವಾದರೂ ಸ್ವಾರ್ಥ ತ್ಯಾಗ ಮಾಡಬೇಕೆನ್ನುವ ಉಪಕಾರ ಬುದ್ಧಿಯ ರೂಪವನ್ನು ತಾಳಿರುತ್ತದೆ. ನಾವು ಸ್ವಾರ್ಥ ತ್ಯಾಗ ಮಾಡಿದಷ್ಟು ಮಟ್ಟಿಗೆ ನಮ್ಮ ಆತ್ಮವನ್ನು ಮತ್ತೊಬ್ಬರ ಆತ್ಮದೊಡನೆ ಏಕೀಕರಣ ಮಾಡಿದಂತಾಗುತ್ತದೆ. ಈ ಸ್ವಾತ್ಮ-ಪರಾತ್ಮಗಳ ಏಕೀಭಾವದ ಅಭ್ಯಾಸವೇ ಆಧ್ಯಾತ್ಮ ನೀತಿ. ನಾವು ನಮ್ಮ ನಮ್ಮ ವೈಯಕ್ತಿಕವಾದ, ನಮ್ಮ ಸ್ವಂತದವಷ್ಟೇ ಆದ ಸುಖದುಃಖಗಳನ್ನು ನಮ್ಮ ನೆರೆ ಹೊರೆಯವರ ಸುಖದುಃಖಗಳಲ್ಲಿ ಬೆರೆಸಿದಾಗ, ಅವರ ಸಂತೋಷದಲ್ಲಿ ನಾವು ಸೇರಿಕೊಂಡು ಸಂತೋಷಪಟ್ಟಾಗ, ಅವರ ದುಃಖದಲ್ಲಿ ಭಾಗಿಗಳಾಗಿ ನಾವು ದುಃಖಿಸಿದಾಗ ನಮಗೆ ಆಧ್ಯಾತ್ಮ ನೀತಿಯ ಅಭ್ಯಾಸವಾಗುತ್ತದೆ. ಇದಕ್ಕೆ ಅವಿಭಕ್ತ ಕುಟುಂಬವು ಜೀವನದಲ್ಲಿ ನಮಗೆ ಪ್ರಥಮ ಸೋಪಾನ. (ಡಿವಿಜಿ ಕೃತಿ ಶ್ರೇಣಿ - 8, ಪುಟ 254-258).

ಡಿವಿಜಿಯವರು ಸಾರ್ವಜನಿಕ ಜೀವನದಲ್ಲಿ ಅತ್ಯಂತ ಮಹತ್ವದ್ದೆಂದು ಪರಿಗಣಿಸಿದ ಮೌಲ್ಯವೆಂದರೆ ನೈತಿಕತೆ. ಅವರು ನೀತಿಯನ್ನು ನಡವಳಿಕೆಯ ನಿಯಮ ಎಂದು ಗ್ರಹಿಸುತ್ತಾರೆ. ಆ ನಿಯಮದಲ್ಲಿ ಗ್ರಾಹ್ಯವಾದ ಅಂಶಗಳೂ, ತ್ಯಾಜ್ಯವಾದ ಅಂಶಗಳೂ, ಎರಡೂ ಸೇರಿವೆ; ವಿಧಿ ನಿಷೇಧಗಳೆರಡೂ ಸೇರಿವೆ. ನಮ್ಮ ಸ್ವಭಾವದಲ್ಲಿ ಒಳ್ಳೆಯದೂ ಕೆಟ್ಟದ್ದೂ ಎರಡೂ ಬೆರೆತುಕೊಂಡಿರುತ್ತವೆ. 'ಒಳ್ಳೆಯದೆಂದರೆ ನಮಗೆ ಮಾತ್ರವಲ್ಲದೆ ನಮ್ಮ ಜೊತೆಯಲ್ಲಿರುವ ಎಲ್ಲರಿಗೂ ಹಿತಕರವಾದದ್ದು, ಕೆಟ್ಟದ್ದೆಂದರೆ ನಮಗೆ ಸುಖಕಾರಿಯಾಗಿದ್ದರೂ ನಮ್ಮೊಡನೆ ಇರುವ ಪ್ರಪಂಚಕ್ಕೆ ಅಹಿತವನ್ನು ಮಾಡತಕ್ಕದ್ದು.' ಇಂಥ ಗ್ರಹಿಕೆಯು ಸಾಮಾಜಿಕ ಸ್ವಾಸ್ಥ್ಯದ ಬಗೆಗಿನ ತಿಳುವಳಿಕೆಯನ್ನು ಹೊಂದಿರುವಂತಹದಾಗಿದೆ ಮತ್ತು ಸಾರ್ವಜನಿಕ ಜೀವನದಲ್ಲಿ ಸ್ವಾರ್ಥದ ಅವಗಣನೆಯನ್ನು ಪ್ರಧಾನವಾಗಿ ಪ್ರತಿಪಾದಿಸುವಂತಹದಾಗಿದೆ. 'ನೀತಿನಿಯಮವಿಲ್ಲದೆ ಯಾರಿಗೂ ಏಳಿಗೆಯಿಲ್ಲ. ಒಬ್ಬ ವ್ಯಕ್ತಿಯೇ ಆಗಲಿ, ಒಂದು ಜನಾಂಗವೇ ಆಗಲಿ ತನ್ನ ಯೋಗಕ್ಷೇಮಗಳನ್ನು ಉಳಿಸಿಕೊಂಡು ಬೆಳೆಸಿಕೊಳ್ಳಬೇಕಾದರೆ ಅದಕ್ಕಿರುವ ಮೊದಲನೆಯ ಸಾಧನ ನೀತಿಶ್ರದ್ಧೆ. ನಮ್ಮ ಜಗತ್ತಿನಲ್ಲಿ ಇಂದಿಗೆ ಹಿಂದೆ ಹತ್ತಾರು ಸಾಮ್ರಾಜ್ಯಗಳೂ, ಜನಪದಗಳೂ ಇದ್ದು ಬಾಳಿ ಮಣ್ಣುಪಾಲಾಗಿವೆ. ಗ್ರೀಸ್ ಪ್ರಜಾರಾಜ್ಯಗಳೇನು, ರೋಮ್ ಚಕ್ರಾಧಿಪತ್ಯವೇನು, ಜರ್ಮನ್ ಜನಪದವೇನು, ಫ್ರಾನ್ಸ್ ಏನು, ಇಟಲಿ ಏನು, ಬ್ರಿಟನ್ ರಾಜ್ಯ ತಾನೆ ಏನು!.....ಇಂಥ ಎಷ್ಟೋ ರಾಜ್ಯಗಳು ಪ್ರಬಲಿಸಿ, ಕೆಲವು ಕಾಲ ತಲೆಯೆತ್ತಿ ಮೆರೆದು ಬಳಿಕ ಕುಸಿದು ಬಿದ್ದು

ಹೆಸರಿನಲ್ಲಿ ಮಾತ್ರ ನಿಂತಿವೆ. ಆ ನಾನಾ ರಾಜ್ಯಗಳು ಏಕೆ ಬಿದ್ದು ಹೋದವು? ಚರಿತ್ರಕಾರರನ್ನು ನಾವು ನಂಬಬಹುದಾದರೆ, ಆ ಜನ-ಜನಾಂಗಗಳ ಅವನತಿಗೆ ಕಾರಣ - ಅವುಗಳ ನೀತಿ-ಪತನ! (ಡಿವಿಜಿ ಕೃತಿಶ್ರೇಣಿ-11, ಪುಟ 122). ಇದು ಡಿವಿಜಿಯವರ ರಾಜ್ಯಶಾಸ್ತ್ರದ ಗ್ರಹಿಕೆಯ ಮೂಲಮಂತ್ರವಾಗಿದೆ.

ಡಿವಿಜಿಯವರು ವೈದಿಕ ಗ್ರಹಿಕೆಯ ನೆಲೆಯಲ್ಲಿ ಜೀವನ ಸೂತ್ರಗಳನ್ನು ನಿರೂಪಿಸಿದ್ದು. 'ಈ ಜೀವನ ಸೂತ್ರಗಳ ಕೇಂದ್ರದಲ್ಲಿರುವುದು ಭಗವಂತನ ಅಸ್ತಿತ್ವ! ಭಗವಂತನ ಅಸ್ತಿತ್ವವನ್ನು ನಾವು ಅಂಗೀಕರಿಸುವುದರಿಂದ ಕೆಲವು ಜೀವನಸೂತ್ರಗಳು ಹೊರಡುತ್ತವೆ. ಅವು ಹೀಗಿವೆ:

1. ಜಗತ್ತು ಭಗವಂತನ ಕಾರ್ಯ. ಆದ್ದರಿಂದ ಅದು ಹೇಯವಲ್ಲ. ಅದು ನಮ್ಮ ಗೌರವಾದರಣೆಗಳಿಗೆ ಅರ್ಹವಾದದ್ದು.

2. ಭಗವಂತನು ಸರ್ವ ವ್ಯಾಪಿ: "ಸರ್ವಭೂತೇಷು ಗೂಢಃ". ಅದೇ ಪರಮಾತ್ಮ, ಅದೇ ಜೀವ ಜೀವದಲ್ಲಿಯೂ ಅಡಗಿಕೊಂಡಿರುವ ಅಂತಃಶ್ಚೈತನ್ಯ. ಆದ್ದರಿಂದ ನಾವು ಎಲ್ಲ ಜೀವಗಳಲ್ಲಿಯೂ ಆತ್ಮವನ್ನು ಗುರುತಿಸಬೇಕಾದದ್ದು. ಹೀಗೆ ಸಕಲ ಲೋಕ ಮೈತ್ರಿ ನಮಗೆ ಕರ್ತವ್ಯವಾಗುತ್ತದೆ.

3. ಭಗವಂತನು ಜಗನ್ನಿಯಾಮಕನು. ಆದ್ದರಿಂದ ನಾವು ನಮ್ಮ ಪಾಲಿಗೆ ಬಂದದ್ದನ್ನು ಭಗವತ್ಪ್ರಸಾದವೆಂದು ಸ್ವೀಕರಿಸಬೇಕಾದದ್ದು. ಕ್ರಾಂತಿಯ ಮನೋಭಾವ ಸಲ್ಲದು.

4. ಭಗವನ್ನಿಯಮಗಳಲ್ಲಿ ಪ್ರತಿಯೊಬ್ಬ ಜೀವಿಗೂ ಅವನವನ ಕರ್ಮದಂತೆ ಫಲಭೋಗವೆಂಬ ನಿಯಮವೊಂದು. ನಮ್ಮ ನಮ್ಮ ಸುಖ-ದುಃಖಗಳ ಜವಾಬ್ದಾರಿ ನಮ್ಮ ನಮ್ಮದು. ಅದನ್ನು ತಪ್ಪಿಸಿಕೊಳ್ಳಲಾಗದು.

5. ಪಾಪ ಪರಿಹಾರವನ್ನು ಮಾಡಿಸುವಶಕ್ತಿ ಭಗವಂತನಿಗುಂಟು. ಅದಕ್ಕಾಗಿ ಸತ್ಕರ್ಮಾಚರಣೆ ವಿಹಿತವಾದದ್ದು.

6. ಧರ್ಮಾಭ್ಯಾಸದಿಂದ ಜೀವಪರಿಶುದ್ಧಿಯೂ ಪುಣ್ಯಸಂಪಾದನೆಯೂ ಆಗುತ್ತದೆ.

7. ಅಂತರಂಗ ಸತ್ಯ ಬಹಿರಂಗ ಸತ್ಯಗಳೆರಡನ್ನೂ ಒಂದುಗೂಡಿಸಿ ಲೋಕಜೀವನದಲ್ಲಿ ಅನ್ವಯಿಸುವುದೇ ಧರ್ಮ. ಬಹಿರಂಗ ಸತ್ಯವು ಗಣಿತಶಾಸ್ತ್ರಕ್ಕೂ ಕಾನೂನು ಕಾಯಿದೆಗಳಿಗೂ ಸೇರಿದ್ದು. ಅಂತರಂಗಸತ್ಯವು ಆತ್ಮವಸ್ತುವಿನ ಸರ್ವತ್ರ

ವ್ಯಾಪನೆಯ ಅಂಗೀಕಾರದಲ್ಲಿ ರೂಪುಗೊಳ್ಳತಕ್ಕದ್ದು. ಅದೇ ಗೀತೆಯಲ್ಲಿ ಹೇಳಿರುವ ಆತ್ಮೌಪಮ್ಯ, ಅದರಿಂದ ಲೋಕಸ್ನೇಹ ಶಾಸ್ತ್ರದಿಂದ ಸಿದ್ಧವಾಗಿರುವ ವಿಧಿ ನಿಷೇಧಗಳ ಜೊತೆಗೆ ಸ್ನೇಹ ಕಾರುಣ್ಯಗಳು ಜೊತೆಗೂಡಿದಾಗ ಧರ್ಮಪೂರ್ಣ'.

ಡಿವಿಜಿಯವರ ಗ್ರಹಿಕೆಯಲ್ಲಿ ಅಧ್ಯಾತ್ಮವು ಕೇವಲ ವೈಯಕ್ತಿಕ ಸಾಧನೆ ಸಮಾಧಿಯಾಗಿರದೇ ಅದು ಲೋಕಸ್ನೇಹದ ಸಂಪಾದನೆಯೂ ಆಗಿದ್ದಿತು. ಲೋಕಸ್ನೇಹವನ್ನು ಅಂದರೆ ಸಾರ್ವಜನಿಕ ಜೀವನವನ್ನು ಒಳಗೊಳ್ಳದ ಅಧ್ಯಾತ್ಮದ ಸಾಧನೆಯು ಅಪೂರ್ಣವೂ ನಿರರ್ಥಕವಾದದ್ದೂ ಆಗಿರುತ್ತದೆ. ಇದೇ ರೀತಿಯಾಗಿ ಅಧ್ಯಾತ್ಮದ-ಆತ್ಮವಸ್ತುವಿನ ಸ್ಪರ್ಶವಿಲ್ಲದ ಸಾರ್ವಜನಿಕ ಜೀವನವೂ ರುಕ್ಷವಾದದ್ದು ಆಗಿರುತ್ತದೆ. ಅಂಥ ಸಾರ್ವಜನಿಕ ಜೀವನವು ಅಧಿಕಾರ-ಸಂಪತ್ತುಗಳ ಲಾಲಸೆಗಳಿಂದ ಪ್ರೇರಿತವಾಗಿದ್ದು ಅದು ಲೋಕ ಕಲ್ಯಾಣದ ಚಟುವಟಿಕೆಯಾಗದೇ ಲೋಕ ಕಂಟಕ ಚಟುವಟಿಕೆಯಾಗುತ್ತದೆ. ಡಿವಿಜಿಯವರ ಸಾರ್ವಜನಿಕ ಜೀವನದ ತಳಹದಿಯು ಸಂಪೂರ್ಣವಾಗಿ ಅಧ್ಯಾತ್ಮ ಪ್ರೇರಿತವಾದದ್ದೇ ಆಗಿದ್ದಿತು. ಭಗವದ್ಗೀತೆ ಅವರ ಸಾರ್ವಜನಿಕ ಜೀವನದ ಹಿಂದಿನ ಸತತ ಪ್ರೇರಣೆಯಾಗಿದ್ದಿತು. ಅದು ವೈಯಕ್ತಿಕ ನಿರಪೇಕ್ಷತೆ ಮತ್ತು ಲೋಕಕಲ್ಯಾಣ ತತ್ವಗಳ ನೆಲೆಯಲ್ಲಿ ರೂಪುಗೊಂಡದ್ದಾಗಿದ್ದಿತು.

**ಐತಿಹಾಸಿಕ ಸಂಕ್ಷೇಪದ ವ್ಯಾಖ್ಯಾನ:** ಡಿವಿಜಿಯವರು ಸ್ವರಾಜ್ಯ ಭಾರತದ ಚರಿತ್ರೆಯನ್ನು ಬುದ್ಧಿ ಪ್ರಸಕ್ತಿಯ ದೃಷ್ಟಿಯಿಂದಲೂ, ನೀತಿ ಪ್ರಸಕ್ತಿಯ ದೃಷ್ಟಿಯಿಂದಲೂ ಮೂರು ಯುಗಗಳಾಗಿ ವಿಂಗಡಿಸುತ್ತಾರೆ. ಮತ್ತು ಅವುಗಳ ಪ್ರಧಾನ ಲಕ್ಷಣವನ್ನು ಹೇಳುತ್ತಾರೆ. ಅವು ಹೀಗಿವೆ:

1. ದಾದಾಭಾಯಿ ಯುಗ: 1885 ರಿಂದ 1915ರ ವರೆಗೆ.

   ಸಾವಧಾನ ವಿಚಾರದ್ದು, ದೊಂಬಿ ದಾಳಿಗಳ ಸುಳಿವಿರಲಿಲ್ಲ.

2. ಗಾಂಧಿಯುಗ: 1915 ರಿಂದ 1947ರ ವರೆಗೆ.

   ಹಟ ಮುಷ್ಕರದ್ದು. ಒಂದೇ ಹಿಡಿವಾದ. ಆಲೋಚನೆ ಚಿಂತನೆಗಳ ಆವಶ್ಯವಿಲ್ಲ. ಏಕೈಕ ನಾಯಕ. ಏಕಾಗ್ರ ವಿಧೇಯತೆ.

3. ನೆಹರುಯುಗ: 1947 ರಿಂದ 1970 ರವರೆಗೆ

   ಉಪಯೋಗ ಶೀಲತೆಯದ್ದು. ಇದನ್ನು ಬಳಸು-ಅದನ್ನು ಹೊರಗಳಿಸು. ಇದನ್ನು ತಿರಸ್ಕರಿಸು. ಅದನ್ನು [illegible]

ಈ ಮೂರು ಯುಗಗಳನ್ನು ಹೇಳಿ, ಡಿವಿಜಿಯವರು, ನಾವು ಪ್ರಯತ್ನಿಸಿ ತಂದುಕೊಳ್ಳಬೇಕಾದ ನಾಲ್ಕನೆಯ ಯುಗದ ಬಗೆಗೆ ಸೂಚನೆ ನೀಡುತ್ತಾರೆ. ಅದೆಂದರೆ, 'ವಿಚಾರಪೂರ್ವಕ ಪ್ರಗತಿಯ ಯುಗ'. ಜೀವನದ ಎಲ್ಲ ಕ್ಷೇತ್ರಗಳೂ ಅಸ್ತವ್ಯಸ್ತಗೊಂಡಿವೆ; ಸಮಾಜ ಸಂಪ್ರದಾಯ, ಮತಾಚಾರ, ಭೂವ್ಯವಸಾಯ, ಸಂಪತ್ ಪ್ರಯತ್ನ, ರಾಜ್ಯದ ಕೋಶನೀತಿ, ದೇಶ ವಿದೇಶ ಸಂಬಂಧ, ವ್ಯಕ್ತಿ ಸ್ವಾತಂತ್ರ್ಯ, ನೀತಿ ನಿಷ್ಠೆ, ವಿದ್ಯೆ, ಸಂಸ್ಕೃತಿ–ಇವೇ ಮುಂತಾದ ಎಲ್ಲ ವಿಷಯಗಳಲ್ಲಿಯೂ ಹಳೆಯ ಸ್ವಾಸ್ಥ್ಯ ಹೋಗಿದೆ ಮತ್ತು ಹೊಸ ಸ್ವಾಸ್ಥ್ಯ ಬೆಳೆದು ಬಂದಿಲ್ಲ ಎನ್ನುವುದು ಡಿವಿಜಿಯವರ ಕೊರಗಾಗಿದ್ದಿತು. ಈ ವ್ಯವಸ್ಥೆಯ ಕಾಲವನ್ನು ಅವರು ಪರೀಕ್ಷೆಯ ಕಾಲ ಎನ್ನುತ್ತಾರೆ. ಮತ್ತು ಇಂಥ ಅವ್ಯವಸ್ಥೆಯನ್ನು ನಿವಾರಿಸಿ ಹೊಸ ವ್ಯವಸ್ಥೆಯನ್ನು ಕಟ್ಟುವ ಪ್ರಯತ್ನ ಮಾಡಬೇಕು ಎನ್ನುತ್ತಾರೆ. ಇದಕ್ಕಾಗಿ ಹೊಸ ಸೇವಾ ಸಂಸ್ಥೆಯೊಂದನ್ನು ಕಟ್ಟಬೇಕು ಎನ್ನುತ್ತಾರೆ. ಸ್ವಾತಂತ್ರ್ಯೋತ್ತರ ಸಂದರ್ಭದಲ್ಲಿ ಇದ್ದ ನಾಯಕರು ಬ್ರಿಟಿಷರನ್ನು ಹೊರಗಟ್ಟುವ ಚಳುವಳಿಯಲ್ಲಿ ಅನುಭವ ಪಡೆದವರು. ಆದರೆ ಇನ್ನು ಮುಂದೆ ಬೇಕಾದವರು ಇರುವುದನ್ನು ಸರಿಪಡಿಸುವ ಸಮರ್ಥರು. ಹಳೆಯ ಮನೆಯನ್ನು ಒಡೆದು ಹಾಕುವುದರಲ್ಲಿ ನಿರತವಾಗಿ ನಿಪುಣರಾದವರು ಹೊಸ ಮನೆಯನ್ನು ಕಟ್ಟುವುದರಲ್ಲಿಯೂ ಅಷ್ಟೇ ಸಮರ್ಥರೆಂದು ಯಾರೂ ಭರವಸೆ ಹೇಳಲಾರರು. ಅದಲ್ಲದೇ ಜಗತ್ತಿನಾದ್ಯಂತ ಅನೇಕ ವಿಪ್ಲವಗಳು ಸಂಭವಿಸುತ್ತಿವೆ. ಇವುಗಳ ಆಘಾತದಿಂದ ಭರತ ಭೂಮಿಯು ಊನಪಡದಂತೆ ಕಾಪಾಡುವುದು ಎಲ್ಲರ ಕರ್ತವ್ಯ ಎನ್ನುವ ಡಿವಿಜಿಯವರು, ಭಾರತ ಜನದ ಆಧ್ಯಾತ್ಮಿಕ ಸಂಸ್ಕೃತಿಯನ್ನು ಉಳಿಸಿ ಭಾರತದ ಸಾತ್ವಿಕ ಶಾಂತಿಯು ಜಗತ್ತಿನಾದ್ಯಂತ ಹರಡುವಂತೆ ಮಾಡಬೇಕೆಂದು ಬಯಸುತ್ತಾರೆ. ಇದಕ್ಕಾಗಿ ಒಂದು ನೂತನವಾದ ದೇಶ ಸೇವಾ ಸಂಪ್ರದಾಯವನ್ನು ಕಟ್ಟಬೇಕೆನ್ನುತ್ತಾರವರು. ಇಂಥ ಸಂಪ್ರದಾಯವನ್ನು ರೂಢಿಗೆ ತಂದು ಪ್ರಚಾರ ಮಾಡುವುದಕ್ಕಾಗಿ ಸಾತ್ವಿಕ ಸಂಘವನ್ನು ಸ್ಥಾಪಿಸಬೇಕು ಎನ್ನುತ್ತಾರವರು.

ಹೀಗೆ ಸ್ಥಾಪಿಸುವ ಸೇವಾ ಸಂಸ್ಥೆಯ ಸದಸ್ಯರು ಕೈಕೊಳ್ಳಬೇಕಾಗಿರುವ ಪ್ರತಿಜ್ಞೆಯನ್ನು ಗಮನಿಸಿದರೆ ಡಿವಿಜಿಯವರು ಸಾರ್ವಜನಿಕ ಜೀವನದ ಬಗೆಗೆ ತಾಳಿದ್ದ ನಿಷ್ಠಾವಂತ ನಿಲುವು ಎಂತಹದೆನ್ನುವುದು ತಿಳಿಯುತ್ತದೆ. ಅವರು ಹೇಳಿರುವ ಈ ಪ್ರತಿಜ್ಞೆಯನ್ನು ಗಮನಿಸೋಣ.

**ಪ್ರತಿಜ್ಞೆ: ಭಗವತ್ಸಾಕ್ಷಿಯಾಗಿ ನಾನು ಈ ಮುಂದೆ ಹೇಳುವ ಎಂಟು ವ್ರತಗಳನ್ನು ಕೊಡುತ್ತೇನೆ**

1. **ದೇಶ ಋಣ:** ಭಾರತ ದೇಶದ ಜನತೆಯೂ ಸಂಸ್ಥೆ ಸಂಪ್ರದಾಯಗಳೂ ನನ್ನನ್ನು ಕಾಪಾಡಿ ಬೆಳೆಸಿವೆ. ನನ್ನ ಈ ದೇಶದ ಋಣವನ್ನು ಸರ್ವದಾ ಸ್ಮರಿಸಿ ನನ್ನ ರಾಷ್ಟ್ರಕ ಕರ್ತವ್ಯಗಳನ್ನು ಪ್ರಕರಣಪೂರ್ವಕವಾಗಿ ನರವೇರಿಸಲು ಶ್ರಮಿಸುತ್ತೇನೆ.

2. **ದೇಶದ ಐಕಮತ್ಯ:** ಭಾರತ ದೇಶದ ಅಖಂಡೈಕತ್ವವನ್ನು ಸರ್ವಪ್ರಯತ್ನದಿಂದಲೂ ಕಾಪಾಡುತ್ತೇನೆ. ದೇಶ ಸಮಸ್ತಕ್ಕಿಂತ ಸಣ್ಣದಾದ ಯಾವ ಭಾಗದ ಪ್ರಯೋಜನವನ್ನೂ-ಅದು ಮತದ್ದಾಗಲಿ, ಜಾತಿಯದಾಗಲಿ, ಭಾಷೆಯದಾಗಲಿ, ಸಂಪದ್ವರ್ಗದ್ದಾಗಲಿ, ಸಾಮಾಜಿಕ ವರ್ಗದ್ದಾಗಲಿ-ಯಾವ ಒಂದು ಭಾಗಮಾತ್ರದ ಕಾರಣವನ್ನೂ ಅದು ದೇಶ ಸಮಸ್ತದ ಐಕಮತ್ಯಕ್ಕೂ ಹಿತ ಸಾಧನೆಗೂ ಭಂಗತಂದಾಗ - ಅದನ್ನು ನಿರೋಧಿಸುತ್ತೇನೆ.

3. **ಸತ್ಯ:** ಎಲ್ಲ ಸಾರ್ವಜನಿಕ ನಿರ್ಣಯಂಕ್ಕೂ ಸತ್ಯವೇ ಮೂಲಾಧಾರವಾಗಿರಬೇಕಾದದ್ದು; ಮತ್ತು ಸತ್ಯವನ್ನು ತಿಳಿಯಲು ನಿರ್ಭೀತವಾದ ವಿಚಾರ ವ್ಯಾಸಂಗವೂ, ಸರ್ವದೃಷ್ಟಿಗಳಿಂದಲೂ ಚರ್ಚೆಯೂ ಸಾಧನಗಳೆಂದು ನಂಬಿದ್ದೇನೆ.

4 **ಸೌಜನ್ಯ:** ಜನ ಸಂಪರ್ಕದಲ್ಲಿ ಸತ್ಯದೊಡನೆ ಸೌಜನ್ಯ ಬೆರೆತಿದ್ದಲ್ಲಿ ಮನುಷ್ಯ ಜೀವನವು ಶುಭಕರವಾಗುತ್ತದೆ. ಆದದ್ದರಿಂದ ಜನದಲ್ಲಿ ಪರಸ್ಪರ ಮೈತ್ರಿ, ಸಹಾನುಭೂತಿ, ಜೀವನಕಾರುಣ್ಯಗಳನ್ನು ಸಮೃದ್ಧಿ ಮಾಡುವ ಎಲ್ಲ ಪ್ರಯತ್ನಗಳಿಗೂ ನಾನು ಯಥಾಶಕ್ತಿ ಸಹಾಯವಾಗುತ್ತೇನೆ.

5. **ಸ್ವತಂತ್ರ ವಿಚಾರ:** ಸಾರ್ವಜನಿಕ ಪ್ರಶ್ನೆಗಳಿಗೆ ಪ್ರತ್ಯುತ್ತರ ಕಂಡುಕೊಳ್ಳುವುದರಲ್ಲಿಯೂ, ಆ ಉತ್ತರವನ್ನು ನುಡಿಯುವುದರಲ್ಲಿಯೂ ನಾನು ಯಾವ ಕಕ್ಷಿಗೂ ಯಾವ ಪಕ್ಷಕ್ಕೂ ವಶವರ್ತಿಯಾಗದೆ ನನ್ನ ಅಂತಃಸಾಕ್ಷಿಯೊಪ್ಪಿತವೊಂದನ್ನೇ ಆಧರಿಸಿ ನಡೆದುಕೊಳ್ಳುತ್ತೇನೆ ಆದರೆ ಯಾವ ಕಕ್ಷಿಯ ಅಭಿಪ್ರಾಯವನ್ನೂ ವಿಚಾರ ಮಾಡದೆ ಬಿಡುವವನಲ್ಲ. ಪ್ರತಿಯೊಂದು ಸಂಗತಿಯನ್ನೂ ಪ್ರತಿ ಅಭಿಪ್ರಾಯವನ್ನೂ ಸಹಾನುಭೂತಿಯಿಂದ ವಿಮರ್ಶೆ ಮಾಡಿ ನೋಡುತ್ತೇನೆ.

6. **ಶಾಂತಿ ಸಂಧಾನ:** ಜನದಲ್ಲಿ ವೈಷಮ್ಯವೂ ಕಲಹವೂ ಉಂಟಾಗುವ ಸಂದರ್ಭದಲ್ಲಿ ನಾನು ಜನರ ಸೌಭ್ರಾತ್ರವನ್ನು ಕಾಪಾಡಿ, ಸ್ನೇಹ ಸಮ್ಮತಗಳ

ಮೂಲಕ ಕಲಹವನ್ನು ಪರಿಹರಿಸುವ ಮಾರ್ಗವನ್ನು ಹುಡುಕುತ್ತೇನೆ. ನಾನಾ ಪಕ್ಷಗಳ ಮನಸ್ಸಮಾಧಾನದಿಂದ ಆದ ಶಾಂತಿಯೇ ಚಿರಕಾಲ ನಿಲ್ಲಬಲ್ಲ ಶಾಂತಿ.

7. **ನಿರ್ಭೀತತೆ:** ಸತ್ಯವನ್ನು ಪ್ರಕಟಪಡಿಸುವುದರಲ್ಲಿಯೂ, ಸೌಜನ್ಯವನ್ನು ಹರಡುವುದರಲ್ಲಿಯೂ ನಾನು ನಿರ್ಭೀತನಾಗಿರುತ್ತೇನೆ. ಯಾರ ಹಂಗಿಗಾದರೂ ದಾಕ್ಷಿಣ್ಯಕ್ಕಾದರೂ ಒಳಪಟ್ಟು ಸತ್ಯವನ್ನು ಮುಚ್ಚಿಡುವುದಿಲ್ಲ; ಅನ್ಯಾಯವನ್ನು ಸಹಿಸುವುದಿಲ್ಲ.

8. **ಸ್ವಾರ್ಥತ್ಯಾಗ:** ಸಾರ್ವಜನಿಕ ಸ್ಥಾನಗಳನ್ನೂ ಪ್ರಶಸ್ತಿಯನ್ನೂ ನಾನು ಸ್ವಂತ ಲಾಭಕ್ಕಾಗಿಯೂ ಸ್ವಪ್ರತಿಷ್ಠೆಗಾಗಿಯೂ ಉಪಯೋಗಪಡಿಸಿಕೊಳ್ಳುವುದಿಲ್ಲ.

ಡಿ.ವಿ.ಜಿ.ಯವರು ಈ ಎಂಟು ವ್ರತಗಳ ಪ್ರತಿಜ್ಞೆಯ ಮೂಲಕ ಸಾರ್ವಜನಿಕ ಜೀವನದ ಬಗೆಗಿನ ತಮ್ಮ ಮನದಾಳವನ್ನು ಅನಾವರಣಗೊಳಿಸಿ ಇಟ್ಟಿದ್ದಾರೆ. ಕೇವಲ ತಮ್ಮ ಮನದಾಳವನ್ನು ಬಯಲುಗೊಳಿಸಿದ್ದು ಮಾತ್ರವಲ್ಲದೇ ಡಿವಿಜಿಯವರು ಈ ಪ್ರತಿಜ್ಞೆಯ ಎಂಟೂ ವ್ರತಗಳನ್ನು ಕಾಯಾ-ವಾಚಾ-ಮನಸಾ ಅನುಸರಿಸಿದರು. ಅಂತಲೇ ಅವರು ಕವಿರಕ್ತ ರಾಷ್ಟ್ರಕ ಎನ್ನುವ ಅನ್ವರ್ಥಕವೆನ್ನಿಸುವ ಹೆಸರನ್ನು ಪಡೆದರು.

ಎಷ್ಟು ನೀನುಂಡರೇಂ? ಪುಷ್ಟಿ ಮೈಗಾಗುವುದು।
ಹೊಟ್ಟೆ ಜೀರ್ಣಿಸುವಷ್ಟೆ; ಮಿಕ್ಕುದೆಲ್ಲ ಕಸ॥
ಎಷ್ಟು ಗಳಿಸಿಟ್ಟೊಡಂ ನಿನಗೆ ದಕ್ಕುವುದೆಷ್ಟು?।
ಮುಷ್ಟಿ ಪಿಷ್ಟವು ತಾನೆ? - ಮಂಕುತಿಮ್ಮ॥
ಪರಿಮಿತಿಯನರಿತಾಶೆ, ಪರವಶತೆಯುಳಿದ ಸುಖ।
ವಿರತಿಯೊಡವೆರೆದ ಲೋಕೋದ್ಯೋಗಯುಕ್ತಿ॥
ಪರಿಕಿಸುತ ಜೀವಿತದ ಸತ್ಯವನೆ ಪಿಡಿವಮತಿ।
ಮಾಗಳೀ ನಾಲ್ಕೆ ವರ - ಮಂಕುತಿಮ್ಮ॥

# ಡಿ.ವಿ. ಗುಂಡಪ್ಪನವರ ಸಂಕ್ಷಿಪ್ತ ಜೀವನ ಚರಿತ್ರೆ

ಡಿವಿಜಿಯವರ ವಂಶಜರು 600 ವರ್ಷಗಳ ಹಿಂದೆ ಜೀವನಾರ್ಥವಾಗಿ ತಮಿಳುನಾಡಿನ ತಿರುಚಿನಾಪಳ್ಳಿ ಪ್ರದೇಶದಿಂದ ಮೈಸೂರು ಪ್ರದೇಶಕ್ಕೆ ಬಂದು, ದೇವನಹಳ್ಳಿಗೆ ಬಂದು ನೆಲೆಸಿದರು. ಮುಂದೆ ಈ ವಂಶಕ್ಕೆ ದೇವನಹಳ್ಳಿಯ ಹೆಸ್ರೆ ಖಾಯಮ್ಮಾಯಿತು. ಆ ಮನೆತನದ ಗುಂಡಪ್ಪ ಎನ್ನುವವರು ದಂಡಿನವರಿಗೆ ತೀನಿ ಒದಗಿಸುವ ಜವಾಬ್ದಾರಿಯನ್ನು ನಿರ್ವಹಿಸುವ ಶೇಖ್‌ದಾರರಾಗಿ ಮುಳಬಾಗಲಿಗೆ ಬಂದು ನೆಲೆನಿಂತರು. ಗುಂಡಪ್ಪನವರಿಗೆ ಶೇಷಗಿರಯ್ಯ ಸೇರಿದಂತೆ ನಾಲ್ಕು ಜನ ಗಂಡು ಮಕ್ಕಳು ಮತ್ತು ಇಬ್ಬರು ಹೆಣ್ಣು ಮಕ್ಕಳು. ಶೇಷಗಿರಯ್ಯನ ಮಗ ವೆಂಕಟರಮಣಯ್ಯನಿಗೆ ಅಲಮೇಲಮ್ಮನೊಂದಿಗೆ ಮದುವೆಯಾಗಿ ಆ ದಂಪತಿಗಳಿಗೆ ಹುಟ್ಟಿದ ಸುಪುತ್ರನೇ ದೇವನಹಳ್ಳಿಯ ವೆಂಕಟರಮಣಯ್ಯನ ಮಗ ಗುಂಡಪ್ಪ (17ನೇ ಮಾರ್ಚ್ 1887). ಮುತ್ತಜ್ಜನ ಹೆಸರನ್ನಿಟ್ಟು ಮುಚ್ಚಟೆಯಿಂದ ಸಾಕಿದರು ಅವರ ಚಿಕ್ಕ ಅಜ್ಜ ರಾಮಣ್ಣ ಮತ್ತು ಅಪ್ಪ ಅಮ್ಮಂದಿರು.

ಸೋದರಮಾವನ ಸುಪರ್ದಿನಲ್ಲಿ ಡಿವಿಜಿಯವರು ಕನ್ನಡ ಶಾಲೆಗೆ ಸೇರಿ ಕನ್ನಡ ಲೋಯರ್ ಸೆಕೆಂಡರಿ ಪರೀಕ್ಷೆ ಪಾಸು ಮಾಡಿದರು. ಮುಂದೆ ಮುಳಬಾಗಿಲಿನಲ್ಲಿ ಇಂಗ್ಲಿಷ್ ಮಿಡಲ್ ಸ್ಕೂಲು ಇಲ್ಲದ ಕಾರಣವಾಗಿ ರಾಮಚಂದ್ರಾಚಾರ್ ಅನ್ನುವವರ ಬಳಿ ಇಂಗ್ಲಿಷ್ ಕಲಿಯ ತೊಡಗಿದರು. 1900ರಲ್ಲಿ ಮುಳಬಾಗಲಿಗೆ ಇಂಗ್ಲಿಷ್ ಮಿಡಲ್‌ಸ್ಕೂಲ್ ಬಂದು ಅಲ್ಲಿ ಕೆ.ವಿ. ರಾಮಸ್ವಾಮಿ ಅಯ್ಯರ್ ಎನ್ನುವ ಇಂಗ್ಲಿಷ್ ಅಧ್ಯಾಪಕರು ಬಂದರು. ತುಂಬ ಉತ್ತಮ ಶಿಕ್ಷಕರು. ಡಿವಿಜಿಯವರಿಗೆ ಇಂಗ್ಲಿಷ್ ತಳಪಾಯ ಬಿದ್ದದ್ದು ಈ ಅಧ್ಯಾಪಕರಿಂದಲೇ. ಶಾಲೆಯ ಸಮಯದ ನಂತರವೂ ತಮ್ಮ ಮನೆಗೆ ಕರೆಸಿಕೊಂಡು ಈ ಅಧ್ಯಾಪಕರು ರಾಬಿನ್‌ಸನ್ ಕ್ರುಸೋ, ಸ್ವಿಸ್ ಫ್ಯಾಮಿಲಿ ರಾಬಿನ್‌ಸನ್, ಸ್ಯಾನ್‌ಫೋರ್ಡ್ ಅಂಡ್ ಮೆರ್ಟನ್ ಮುಂತಾದ ಇಂಗ್ಲಿಷ್ ಸಾಹಿತ್ಯಕೃತಿಗಳನ್ನು ಓದಿಸುತ್ತಿದ್ದರು. ಹಾಗೆಯೇ ಆಗ ಮುಳಬಾಗಲಿನಲ್ಲಿ ಸಬ್ ರಿಜಿಸ್ಟ್ರಾರ್ ಆಗಿದ್ದ ರಾಮದಾಸಪ್ಪನವರು ಡಿವಿಜಿಯವರಿಗೆ ಇಂಗ್ಲಿಷ್ ಓದಿನ ಸಂಸ್ಕಾರ ನೀಡಿದರು. ಶೇಕ್ಸ್‌ಪಿಯರ್‌ನ ಜೂಲಿಯಸ್ ಸೀಜರ್ ಕೃತಿ ಓದಿಸಿದ್ದಲ್ಲದೆ ಆಗ ಮದ್ರಾಸಿನಿಂದ ಪ್ರಕಟವಾಗುತ್ತಿದ್ದ 'ದ ಮೆಯಿಲ್' ಎನ್ನುವ ಪತ್ರಿಕೆಯನ್ನು ನಿತ್ಯವೂ ಓದಿಸುತ್ತಿದ್ದರು. ಇದು ಡಿವಿಜಿಯವರಿಗೆ ಇಂಗ್ಲಿಷನ್ನು ಸುಲಲಿತವಾಗಿ ಬಳಸುವ ಶಕ್ತಿಯನ್ನು ನೀಡಿತು. ಡಿವಿಜಿ ಇಂಗ್ಲಿಷ್ ಎಲ್.ಎಸ್. ಪಾಸು ಮಾಡಿದ ಮೇಲೆ ಮೈಸೂರಿಗೆ, ಅಲ್ಲಿಂದ ಕೋಲಾರಿಗೆ [illegible]

ಸಾಧ್ಯವಾಗದ್ದಕ್ಕೆ ಇವರ ಅಧ್ಯಾಪಕರು ಕ್ರೈಸ್ತ ಮತ ಪ್ರಚಾರದ ಇಂಗ್ಲಿಷ್ ಲೇಖನಗಳನ್ನು ಕನ್ನಡಕ್ಕೆ ತರ್ಜಮೆ ಮಾಡಿ ಹಣ ಗಳಿಸುವ ಮಾರ್ಗ ತೋರಿಸುತ್ತಾರೆ. ಇದರೊಂದಿಗೆ ಡಿವಿಜಿಯವರ 'ಮಸಿ ಕುಡಿಕೆ'ಯ ಜೀವನ ಆರಂಭವಾಯಿತು. ಈ ಅನುಭವವು ಮುಂದೆ ಅವರನ್ನು ಧೈರ್ಯದಿಂದ ಪತ್ರಿಕಾ ಬರಹದ ಬದುಕಿಗೆ ನುಗ್ಗಲು ಪ್ರೇರಣೆ ನೀಡಿತು. ತಮಾಷೆಯ ಸಂಗತಿಯೆಂದರೆ, ಮುಂದೆ ವಿಶ್ವವಿದ್ಯಾಲಯವೇ ಕರೆದು ಡಾಕ್ಟರೇಟ್ ಪದವಿಯನ್ನು ನೀಡುವಂತಹ ವಾಙ್ಮಯ ರಾಶಿಯನ್ನು ಸೃಜಿಸಿದ ಡಿವಿಜಿಯವರು ತಮ್ಮ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಕನ್ನಡ ವಿಷಯದಲ್ಲಿ ಕೂಡ ಪಾಸಾಗಲಿಲ್ಲ. ಅಲ್ಲಿಗೇ ಡಿವಿಜಿಯವರ ಓದು ಮುಗಿಯಿತು.

ಡಿವಿಜಿಯವರು ಫಿಫ್ತ್ ಫಾರ್ಮ್‌ದಲ್ಲಿ ಓದುವಾಗಲೇ ಅವರ ಮದುವೆಯಾಯಿತು. 1904ರ ಏಪ್ರಿಲ್ 25ನೇ ತಾರೀಖು ಡಿವಿಜಿಯವರಿಗೆ ಸುಬ್ಬಮ್ಮನವರ ಮಗಳಾದ ಭಾಗೀರತಮ್ಮನೊಡನೆ ಮದುವೆಯಾಯಿತು. ಮಾವನು ಮೊದಲೇ ತೀರಿಹೋಗಿದ್ದ. 1904 ರಲ್ಲಿ ಎಸ್.ಎಸ್.ಎಲ್.ಸಿ. ನಪಾಸಾದ ಮೇಲೆ ಅವರು ಜೀವನದ ಜಂಜಾಟಕ್ಕೆ ಬಿದ್ದರು. 3.12.1905 ರಿಂದ 6.6.1906ರ ವರೆಗೆ ಛಾಂಪಿಯನ್ ರೀಫ್ಸ್‌ನಲ್ಲಿ (ಕೋಲಾರ) ಹಾಜಿ ಇಸ್ಮಾಯಿಲ್ ಸೇಟ್‌ರ ಅಂಗಡಿಯಲ್ಲಿ ಗುಮಾಸ್ತನಾಗಿ ಕೆಲಸ ಮಾಡಿದರು. ಆ ನಂತರ ಮುಳಬಾಗಲಿನ ಶಾಲೆಯಲ್ಲಿ ಬದಲಿ ಅಧ್ಯಾಪಕರಾಗಿ ಸ್ವಲ್ಪ ದಿನ ಕೆಲಸಮಾಡಿದರು. ಆ ಕೆಲಸವೇ ಖಾಯಮ್ಮಾಗುವ ಎಲ್ಲ ಸಾಧ್ಯತೆಗಳಿದ್ದರೂ, ತಂದೆಯ ಮನಸ್ಸಿಗೆ ವಿರುದ್ಧವಾಗಿ ಆ ಕೆಲಸವನ್ನು ಬಿಟ್ಟುಕೊಟ್ಟು ಬದುಕು ಅರಸಿ ಬೆಂಗಳೂರಿಗೆ ಬಂದರು. ಬೆಂಗಳೂರಿನಲ್ಲಿ ಜಟಕಾಗಾಡಿಗೆ ಬಣ್ಣ ಬಳಿಯುವ ಕಾರ್ಖಾನೆಯಲ್ಲಿ ಸ್ವಲ್ಪ ದಿನ ಕೆಲಸಮಾಡಿದರು. ಆ ಕಾರ್ಖಾನೆ ಮುಚ್ಚಿದ್ದರಿಂದ ಮತ್ತೆ ಬೀದಿಗೆ ಬಿದ್ದರು. ಚಾಕರಿಯ ಹುಡುಕಾಟದ ನಡುವೆಯೇ ಡಿವಿಜಿಯವರು ದೇಶದ ಸ್ಥಿತಿಗತಿಗಳನ್ನು ಕುರಿತ ಅಂದಿನ ಪ್ರಸಿದ್ಧ ವೈಚಾರಿಕತೆಯ ನಾಯಕರುಗಳಾದ ರಾಜಾರಾಮ ಮೋಹನರಾಯ್, ಸ್ವಾಮಿ ವಿವೇಕಾನಂದ, ಗೋಪಾಲಕೃಷ್ಣ ಗೋಖಲೆ ಮತ್ತು ಕಾಂಗ್ರೆಸ್ ಅಧ್ಯಕ್ಷರುಗಳ ಭಾಷಣ ಕೃತಿಗಳನ್ನು ಓದಿದ್ದಲ್ಲದೆ ದೇಶಾಭಿಮಾನಿ ವೃತ್ತ ಪತ್ರಿಕೆಗಳನ್ನು ನಿತ್ಯ ಓದುತ್ತಿದ್ದರು. ಡಿವಿಜಿಯವರಿಗೆ ಅತ್ಯಂತ ಪ್ರಿಯವಾದ ಕೆಲಸ ಓದು ಆಗಿದ್ದಿತು. ಇಂಥ ಹಿನ್ನೆಲೆಯಲ್ಲಿ ಅವರು ಪತ್ರಿಕೋದ್ಯೋಗವನ್ನು ಪ್ರವೇಶಿಸಿದರು. 'ಸುರ್ಯೋದಯ ಪ್ರಕಾಶಿಕೆ' ಎನ್ನುವ ಪತ್ರಿಕೆಯ ಕೆಲಸಕ್ಕೆ ದಾಖಲಾದರು. ಜೊತೆಗೆ 'ಈವನಿಂಗ್ ಮೆಯಿಲ್' ಪತ್ರಿಕೆಗೆ ವಾರವಾರವೂ ಲೇಖನಗಳನ್ನು ಬರೆಯತೊಡಗಿದರು. 1907ರ ಕೊನೆಯಷ್ಟೊತ್ತಿಗೆ 'ಸುರ್ಯೋದಯ ಪ್ರಕಾಶಿಕೆ'

ನಿಂತು ಹೋಯಿತು. ಆಗ ನವರತ್ನ ಕೃಷ್ಣಸ್ವಾಮಿಯವರೂ ಇವರೂ ಸೇರಿ 'ಭಾರತಿ' ಎನ್ನುವ ಕನ್ನಡ ದಿನಪತ್ರಿಕೆಯನ್ನು ಆರಂಭಿಸಿದರು. ಬಂಡವಾಳ ಕೃಷ್ಣಸ್ವಾಮಿಯವರದು. ಮಸಿಯ ಕೆಲಸ ಡಿವಿಜಿಯವರದು. ಅದೇ ಸಮಯದಲ್ಲಿ ಎಂ. ಶ್ರೀನಿವಾಸ ಅಯ್ಯಂಗಾರ್ ಅವರು ನಡೆಸುತ್ತಿದ್ದ 'ದ ಮೈಸೂರ್ ಸ್ಟಾಂಡರ್ಡ್' ಎಂಬ ಅರ್ಧವಾರ ಪತ್ರಿಕೆಗೂ, 'ನಡೆಗನ್ನಡಿ' ಎಂಬ ಕನ್ನಡ ಪತ್ರಿಕೆಗೂ ಡಿವಿಜಿಯವರು ಲೇಖನಗಳನ್ನು ಬರೆದು ಸಂಸಾರ ಸಾಗಿಸಿದರು. 1908ರಲ್ಲಿ ದಿವಾನ್ ವಿ.ಪಿ. ಮಾಧವರಾವ್ ಅವರು 'ದ ಮೈಸೂರ್ ನ್ಯೂಸ್ ಪೇಪರ್ ರೆಗ್ಯುಲೇಟಿಂಗ್ ಆಕ್ಟ್' ತಂದಾಗ ಅದನ್ನು ಪ್ರತಿಭಟಿಸಿ ಪತ್ರಿಕೆಗಳನ್ನು ನಿಲ್ಲಿಸಲಾಯಿತು. ಡಿವಿಜಿಯವರು ಎಂ. ಶ್ರೀನಿವಾಸ ಅಯ್ಯಂಗಾರ್ ಅವರೊಂದಿಗೆ ಮದ್ರಾಸಿಗೆ ಹೋಗಿ ಅಲ್ಲಿ 'ದ ಮೈಸೂರ್ ನ್ಯೂಸ್ ಪೇಪರ್ ರೆಗ್ಯುಲೇಷನ್' ಕಾಯ್ದೆ ಕುರಿತು ವಿವಿಧ ಪತ್ರಿಕೆಗಳಲ್ಲಿ ಬಂದ ವಿಮರ್ಶೆಯನ್ನು ಸಂಕಲಿಸಿ ಪುಸ್ತಕ ಸಿದ್ಧಪಡಿಸಿದರು. ಅದು 'Press Gag in Mysore' ಎನ್ನುವ ಹೆಸರಿನಲ್ಲಿ ಪ್ರಕಟವಾಯಿತು. ಆ ಸಮಯದಲ್ಲಿ ಡಿವಿಜಿಯವರು 'ಹಿಂದೂ', 'ಇಂಡಿಯನ್ ಪೇಟ್ರಿಯಟ್' ಪತ್ರಿಕೆಗಳಿಗೂ 'ವೀರಕೇಸರಿ' ಎಂಬ ಪತ್ರಿಕೆಗೂ ಲೇಖನಗಳನ್ನು ಬರೆದರು.

1909ರಲ್ಲಿ ಬೆಂಗಳೂರಿಗೆ ಬಂದು 'ಸ್ವದೇಶಿ ಲೈಬ್ರರಿ' ಎಂಬ ಪುಸ್ತಕ ಭಂಡಾರವನ್ನು ಆರಂಭಿಸಿದರು. 'ವಂದೇ ಮಾತರಂ' ಸಿರೀಸ್ ಎನ್ನುವ ಹೆಸರಿನಲ್ಲಿ ಸಣ್ಣ ಸಣ್ಣ ಪುಸ್ತಕಗಳನ್ನು ಪ್ರಕಟಿಸಿದರು. ಆ ಮಾಲಿಕೆಯಲ್ಲಿ 'ವೇದಾಂತ ಮತ್ತು ರಾಷ್ಟ್ರೀಯತೆ' ಎನ್ನುವ ಡಿವಿಜಿಯವರ ಮೊದಲ ಪುಸ್ತಕ ಪ್ರಕಟವಾಯಿತು. ಡಿವಿಜಿಯವರ ಜೀವನ ದೃಷ್ಟಿ ಮತ್ತು ಧ್ಯೇಯಗಳ ನಕ್ಷೆಯನ್ನು ಈ ಪುಸ್ತಿಕೆಯಲ್ಲಿ ಕಾಣಬಹುದು. ಅದೇ ವರ್ಷವೇ ಡಿವಿಜಿಯವರು 'ಶ್ರೀ ರಾಮಕೃಷ್ಣ ಧರ್ಮ ಸಮಾಜ'ವನ್ನು ಸ್ಥಾಪಿಸಿದರು. ಸಂಘಜೀವಿಯಾದ ಡಿವಿಜಿಯವರು ಸ್ಥಾಪಿಸಿದ ಸಂಘಗಳಲ್ಲಿ ಇದು ಮೊದಲನೆಯದು. "ಸುಮತಿ" ಎನ್ನುವ ಸಾಪ್ತಾಹಿಕ ಪತ್ರಿಕೆಯನ್ನು ಆರಂಭಿಸಿದ್ದೂ ಆಗಲೇ. 'ಸುಮತಿ' ಗ್ರಂಥಮಾಲೆ ಆರಂಭಿಸಿ ದೇಶೀಯರಿಗೆ ಅಗತ್ಯವಾದ ಎಲ್ಲಾ ವಿಧದ ಪುಸ್ತಕಗಳನ್ನು ಪ್ರಕಟಿಸುವ ಸಾಹಸ ಕೈಗೊಂಡರು. ಈ ಗ್ರಂಥಮಾಲೆಯಲ್ಲಿ ಪ್ರಕಟವಾದ ಪುಸ್ತಕಗಳೆಂದರೆ 'ಲೇಟ್ ದಿವಾನ್ ರಂಗಾಚಾರ್ಯ ಅವರ ಚರಿತ್ರೆ', 'ಕನಕಾಲುಕಾ' (ಟೆನಿಸನ್ ಕವಿಯ 'ದ ಕಪ್' ಎನ್ನುವ ನಾಟಕ ಆಧಾರಿತ), 'ಚಿಕ್ಕೋಜಿ' (ಮಕ್ಕಳಿಗಾಗಿ ಇಂಗ್ಲಿಷ್ ಕಥೆಗಳ ತರ್ಜುಮೆ) 'ಜಾರ್ಜ್ ಚಕ್ರವರ್ತಿಗಳ ಕಿರೀಟ ಧಾರಣೆ', 'ರಾಜಾರಾಮ ಮೋಹನರಾಯ್', 'ವಂದೇ ಮಾತರಂ', 'ಸ್ವದೇಶಿ', 'ಹರಿಭಕ್ತಿಸಾರ', 'ಜೀವಗೀತೆ' ಇತ್ಯಾದಿ.

ಡಿವಿಜಿಯವರು ಮುಂದೆ 'ದಿ ಕರ್ನಾಟಕ' ಎಂಬ ಇಂಗ್ಲಿಷ್ ವಾರಪತ್ರಿಕೆಯನ್ನು ಆರಂಭಿಸಿದರು. ಮೊದಲನೆಯ ಸಂಚಿಕೆ 2.4.13ರಂದು ಪ್ರಕಟವಾಯಿತು. ಈ ಪತ್ರಿಕೆಯಲ್ಲಿ ಡಿವಿಜಿಯವರು ಸಾರ್ವಜನಿಕ ಜೀವನಕ್ಕೆ ಸಂಬಂಧಪಟ್ಟ ಎಲ್ಲ ಸಂಗತಿಗಳನ್ನೂ ಸತ್ಯನಿಷ್ಠೆ ಮತ್ತು ವಿಧಾಯಕತೆಯ ನೆಲೆಯಲ್ಲಿ ಪ್ರಕಟಪಡಿಸುತ್ತಿದ್ದರು. ಇವರ ಪತ್ರಿಕೋದ್ಯಮದ ಮೂಲಕವೇ ಇವರು ದಿವಾನ್ ವಿಶ್ವೇಶ್ವರಯ್ಯ ಮತ್ತು ಮಿರ್ಜಾ ಇಸ್ಮಾಯಿಲ್ ಅವರ ಸ್ನೇಹವನ್ನು ಗಳಿಸಿದರು. ಮಹಾರಾಜರವರೆಗೆ ಇವರ ಸತ್ಯನಿಷ್ಠ ಪ್ರಾಮಾಣಿಕ ಪತ್ರಿಕಾ ವೃತ್ತಿಯ ಪ್ರಸಿದ್ಧಿ ತಲುಪಿತು. ಇವರ ಸತ್ಯನಿಷ್ಠತೆಯನ್ನು ಮನಗಂಡು ದಿವಾನ್ ವಿಶ್ವೇಶ್ವರಯ್ಯನವರು ಇವರನ್ನು ಬೆಂಗಳೂರಿನ ಮುನಿಸಿಪಲ್ ಕೌನ್ಸಿಲ್ಲಿಗೆ ಸರ್ಕಾರದಿಂದ ನಾಮಕರಣ ಸದಸ್ಯರನ್ನಾಗಿಸಿದರು. ಮುಂದೆ ಮೈಸೂರು ಸಂಸ್ಥಾನದ ಲೆಜಿಸ್ಲೇಟಿವ್ ಕೌನ್ಸಿಲ್ಲಿಗೆ ನಾಮಕರಣ ಹೊಂದಿ 1927 ರಿಂದ 1941ರವರೆಗೆ ನಿಸ್ಪೃಹತೆಯಿಂದ ದುಡಿದು, ರಾಜ್ಯಾಡಳಿತದ ಕಾರ್ಯಕ್ಕೆ ಪ್ರಜಾಕಲ್ಯಾಣದ ಮೊನಚನ್ನು ಒದಗಿಸಿದರು. **ಗೋಖಲೆ ಸಾರ್ವಜನಿಕ** ಸಂಸ್ಥೆಯನ್ನು ಸ್ಥಾಪಿಸಿ ಬೆಳೆಸಿದರು. **ಕನ್ನಡ ಸಾಹಿತ್ಯ ಪರಿಷತ್ತಿನ** ಸ್ಥಾಪನೆಯಲ್ಲಿ ಸಕ್ರಿಯವಾಗಿ ದುಡಿದು, ಅದರ ಪ್ರಾರಂಭಿಕ ಪದಾಧಿಕಾರಿಯಾಗಿದ್ದರು. ಸಾಹಿತ್ಯ-ಧರ್ಮ ಸಾರ್ವಜನಿಕ ಜೀವನ ಎಲ್ಲವುಗಳ ಸಮನ್ವಯ ಸಾಧಿಸಿಕೊಂಡಿದ್ದ ಡಿವಿಜಿಯವರು 'ವಿರಕ್ತ ರಾಷ್ಟ್ರಕ' ಎನ್ನುವ ಅನ್ವರ್ಥಕವಾದ ಅಭಿದಾನವನ್ನು ಗಳಿಸಿಕೊಂಡವರು. ಬಡತನದಲ್ಲಿದ್ದರೂ ಆತ್ಮಾಭಿಮಾನ ಮತ್ತು ಪ್ರಾಮಾಣಿಕತೆಗಳನ್ನು ಕೊಂಚವೂ ಊನ ಮಾಡಿಕೊಳ್ಳದ ಡಿವಿಜಿಯವರು ಸಾಹಿತಿಗಳಿಗೂ, ರಾಜಕಾರ್ಯದಲ್ಲಿ ತೊಡಗಿದವರಿಗೂ ಮತ್ತು ಧರ್ಮ ಕಾರ್ಯದಲ್ಲಿ ತೊಡಗಿದವರೆಲ್ಲರಿಗೂ ಆದರ್ಶರಾಗಿ ಬದುಕಿದರು. ಇಂತಹ ಮಹಾನ್ ತೇಜಸ್ವಿ ವ್ಯಕ್ತಿತ್ವವು 1975ರ ಅಕ್ಟೋಬರ್ 7 ರಂದು ಪಂಚಭೂತಗಳಲ್ಲಿ ಲೀನವಾಯಿತು.

ಡಿವಿಜಿಯವರ ಹೆಂಡತಿ ಭಾಗೀರತಮ್ಮನವರು, ಹೆರಿಗೆಯಾಗಿ ಬಾಳಂತಿಯು ಮೈಕಾಯಿಸಿಕೊಳ್ಳುವ ಅಗ್ಗಿಷ್ಟಿಕೆಯ ಬೆಂಕಿ ತಗುಲಿ 1924ರ ಫೆಬ್ರುವರಿ ತಿಂಗಳ 9 ರಂದು ದುರ್ಮರಣವನ್ನಪ್ಪಿದರು. ಡಿವಿಜಿಯವರ ಮನಸ್ಸಿಗೆ ಇದು ತುಂಬ ಆಘಾತವನ್ನು ಮಾಡಿತು. ಅಂದಿಗೆ ಅವರು ವಿರಕ್ತರಾದರು. ಮತ್ತೆ ಮದುವೆಯಾಗದೇ ಉಳಿದು ಮಕ್ಕಳನ್ನು (ಮೂರು ಹೆಣ್ಣು ಒಂದು ಗಂಡು) ಸಾಕಿ ಬೆಳೆಸಿದರು. ಮಗ ಬಿ.ಜಿ.ಎಲ್ ಸ್ವಾಮಿಯವರು ಮದ್ರಾಸಿನ ಪ್ರೆಸಿಡೆನ್ಸಿ ಕಾಲೇಜಿನ ಪ್ರಾಚಾರ್ಯರಾಗಿ ನಿವೃತ್ತರಾದರು, ಕನ್ನಡ ಸಾಹಿತ್ಯದಲ್ಲಿ ತಮ್ಮ ಅಚ್ಚೊತ್ತಿದರು. ಇಂದು ಅವರೂ ಇಲ್ಲ. ಹೆಣ್ಣು ಮಕ್ಕಳು ಯೋಗ್ಯ ಮನೆಗಳನ್ನು ಸೇರಿ ವಂಶ ಬೆಳೆಸಿದರು.

ಮನುಜ ಸಾಕಲ್ಯದನುಭವಕೆ ಮಿತಿಗೊತ್ತುಂಟೆ?।
ದಿನದಿನವು ಕಡಲಗಳಂತೆ ಪರಿವುದದು॥
ಅನುಮಿತಿಯ ನಿರ್ಧಾರವದರಿಂ ನಿರಾಧಾರ।
ಪನಿ ಸೂರು ನರನೆದೆಗೆ – ಮಂಕುತಿಮ್ಮ॥

– ಡಿ.ವಿ.ಜಿ.

ನಿನ್ನೇಳು ಬೀಳುಗಳು ನಿನ್ನ ಸುಗ ಗೋಳುಗಳು।
ನಿನ್ನೊಬ್ಬನೋಸುಗವೆ ನಡೆವ ಯೋಜನೆಯೇಂ?॥
ಇನ್ನದೆನಿಬರ ಜೀವಪಾಕವದರಿಂದಹುದೊ।
ಭಿನ್ನವಾ ವಿಧಿಯ ಮಾರ್ಗ – ಮಂಕುತಿಮ್ಮ॥

— ಡಿ.ವಿ.ಜಿ.

# ಡಿವಿಜಿಯವರ ರಾಜಕೀಯ ಚಿಂತನೆಗಳು
# "ಸ್ವರಾಜ್ಯ" ಎಂದರೆ ಏನು?

"ಸ್ವರಾಜ್ಯ" ಎಂಬ ಮಾತನ್ನು ಮೊದಲು ಉಪಯೋಗಿಸಿ ಪ್ರಸಿದ್ಧಿಗೆ ತಂದವರು ದಾದಾಭಾಯಿ ನವರೋಜಿ ಎಂಬ ಮಹನೀಯರು. ಅವರು ನಮ್ಮ ಇಂಡಿಯಾ ದೇಶದ ಈಗಿನ ರಾಜಕೀಯಕ್ಕೆ ಮೂಲಪುರುಷರು. ಮಹಾತ್ಮ ಗಾಂಧಿಯವರೇ ಮೊದಲಾದ ನಮ್ಮ ಮುಂದಾಳುಗಳಿಗೆಲ್ಲ ದಾದಾಭಾಯಿಯವರು ಗುರುಪದವಿಯಲ್ಲಿದ್ದವರು. ಆ ಮಹನೀಯರು 1906ನೆಯ ಇಸವಿಯಲ್ಲಿ,-ಎಂದರೆ ಈಗ್ಗೆ (1952) 45 ವರ್ಷಗಳ ಹಿಂದೆ,-ಕಲ್ಕತ್ತಾ ಪಟ್ಟಣದಲ್ಲಿ ನಡೆದ ಕಾಂಗ್ರೆಸ್ ಮಹಾಸಭೆಯ ಅಧ್ಯಕ್ಷರಾಗಿದ್ದರು. ಆಗ ಅವರು ಮಾಡಿದ ಭಾಷಣದಲ್ಲಿ ಹೀಗೆ ಹೇಳಿದರು:

"ಬ್ರಿಟಿಷರಿಂದ ನಾವು ಕೇಳುತ್ತಿರುವುದು ವರಪ್ರಸಾದಗಳನ್ನಲ್ಲ. ನಮಗೆ ಬೇಕಾಗಿರುವುದು ಕೇವಲ ನ್ಯಾಯ. ನಾವು ಈಗ ಬ್ರಿಟಿಷ್ ಚಕ್ರಾಧಿಪತ್ಯದ ರಾಷ್ಟ್ರಕ ಪ್ರಜೆಯಾಗಿದ್ದೇವೆ. ಆ ಸಂಬಂಧದ ವಿವರಾಂಶಗಳಿಗೆ ಕೈಹಾಕದೆ, ಅದರಿಂದ ನಮ್ಮ ಪಾಲಿಗೆ ಸಲ್ಲಬೇಕಾದ ನ್ಯಾಯಾರ್ಹಗಳನ್ನೆಲ್ಲ ಒಂದುಮಾತಿನಲ್ಲಿ ಅಡಗಿಸಿ ಹೇಳಬಹುದು. ಆ ಮಾತೇನೆಂದರೆ : ಬ್ರಿಟನ್ ದೇಶದಲ್ಲಿಯೂ ಅದರ ನೆಲಸುನಾಡುಗಳಲ್ಲಿಯೂ ಅಲ್ಲಲ್ಲಿಯ ಪ್ರಜೆಗಳು ಎಂಥಾ 'ಸೆಲ್ಫ್-ಗವರ್ನ್‌ಮೆಂಟ್' ಅಥವಾ ಸ್ವರಾಜ್ಯವನ್ನು ಪಡೆದಿದ್ದಾರೋ ಅಂಥಾ ವ್ಯವಸ್ಥೆಯೇ ನಮಗೆ ನಮ್ಮ ದೇಶದಲ್ಲಿ ಬೇಕಾದದ್ದು."

ದಾದಾಭಾಯಿ ನವರೋಜಿಯವರು ಮತಧರ್ಮದಲ್ಲಿ ಪಾರಸಿಯವರು, ಅಗ್ನಿ ಪೂಜಕರು; ಆದರೂ ಇವರ ಮನೆಬಳಕೆಯ ಭಾಷೆ ಗುಜರಾತಿ. ಗುಜರಾತಿಯಲ್ಲಿ, ನಮ್ಮ ಕನ್ನಡದಲ್ಲಿರುವಂತೆಯೇ, ಸಂಸ್ಕೃತ ಭಾಷೆಯ ಮಾತುಗಳು ಹೆಚ್ಚಾಗಿ ರೂಢಿಯಲ್ಲಿವೆ. ದಾದಾಭಾಯಿಯವರು ಪ್ರಸಿದ್ಧಿಗೆ ತಂದ "ಸ್ವರಾಜ್" ಅಥವಾ "ಸ್ವರಾಜ್ಯ" ಎಂಬ ಮಾತು ಹಾಗೆ ಸಂಸ್ಕೃತದಿಂದ ತಯಾರಾಗಿ ಬಂದದ್ದು.

"ಸ್ವರಾಜ್ಯ" ಎಂಬ ಪದದಲ್ಲಿ ಎರಡು ಶಬ್ದಗಳು ಸೇರಿವೆ: (1) ಸ್ವ, (2) ರಾಜ್ಯ.

"ಸ್ವ-ರಾಜ್ಯ" ಎಂಬ ಮಾತಿಗೆ ಇಂಗ್ಲಿಷಿನ ಸರಿಮಾತಾದ "ಸೆಲ್ಫ್-ಗವರ್ನ್‌ಮೆಂಟ್" ಎಂಬುದರಲ್ಲಿಯೂ ಎರಡು ಶಬ್ದಗಳಿವೆ: (1) ಸೆಲ್ಫ್, (2) ಗವರ್ನ್‌ಮೆಂಟ್.

"ಸ್ವ" ಎಂದರೆ ತನ್ನ, ಅಥವಾ ಸ್ವಂತದ, ಅಥವಾ 'ಸೆಲ್ಫ್' ಎಂದು ಅರ್ಥ. 'ತಮ್ಮ' ಎಂದಾದರೂ ಆಗಬಹುದು : ಸ್ವಕೀಯ.

"ರಾಜ್ಯ" ಎಂದರೆ ರಾಜನ ಅಧಿಕಾರ, ರಾಜನ ಪದವಿ, ರಾಜನು ಮಾಡಬೇಕಾದ ಕರ್ತವ್ಯ, ಅಥವಾ ದೊರೆತನ, ಪ್ರಭುತ್ವ, ಸರಕಾರ, "ಗವರ್ನ್ಮೆಂಟ್" ಎಂದು ಅರ್ಥ.

ಹೀಗೆ ಸ್ವರಾಜ್ಯ ಎಂದರೆ ಸ್ವಂತ ಸರಕಾರ, ತನ್ನ ಪ್ರಭುತ್ವ, "ಸೆಲ್ಫ್-ಗವರ್ನ್ಮೆಂಟ್" ಎಂದು ಅರ್ಥ. ಇಲ್ಲಿ ರಾಜ್ಯ, ಅಥವಾ ಪ್ರಭುತ್ವ, ಅಥವಾ ಸರಕಾರ-ಎಂಬ ಮಾತಿನ ಅಭಿಪ್ರಾಯವನ್ನು ಮೊದಲು ಸಾವಧಾನವಾಗಿ ಗಮನಕ್ಕೆ ತೆಗೆದುಕೊಳ್ಳಬೇಕು.

ಬಹು ಸಂಖ್ಯೆಯ ಜನರು ಒಟ್ಟಾಗಿ, ತಮ್ಮೆಲ್ಲರಿಗೂ ಒಟ್ಟಿಗೆ ಬೇಕಾದ ಲೌಕಿಕ ಪ್ರಯೋಜನಗಳನ್ನು ಸಂಪಾದಿಸಿ ಕಾಪಾಡಿಕೊಳ್ಳುವುದಕ್ಕೋಸ್ಕರ ಒಂದು ಕಟ್ಟುಪಾಡಿಗೆ, ಅಥವಾ ಒಂದು ಆಡಳಿತಕ್ಕೆ ಒಳಪಟ್ಟು, ಒಂದು ಮಹಾ ಕುಟುಂಬವೆಂಬಂತೆ ಬಾಳಲು ಒಡಂಬಟ್ಟಿದ್ದರೆ, ಆ ಬಹುಜನದ ಒಟ್ಟಿನ ಏರ್ಪಾಟಿಗೆ, ಅಥವಾ ಸಮೂಹವ್ಯವಸ್ಥೆಗೆ, ರಾಜ್ಯ ಎಂದು ಹೆಸರು ; ಅವರೆಲ್ಲ ಅಂಗೀಕರಿಸಿರುವ ಆ ವ್ಯವಸ್ಥೆಯನ್ನು ನಡೆಸುವ ಮಾನುಷಯಂತ್ರವೇ ಸರಕಾರ.

ಅಂಥಾ ಜನಸಮುದಾಯವು ಸಾಮಾನ್ಯವಾಗಿ ಒಂದು ಗೊತ್ತಾದ ಭೂಪ್ರದೇಶದಲ್ಲಿ ವಾಸಮಾಡುತ್ತದೆಯಾದ ಕಾರಣದಿಂದ ಆ ನಾಡಿಗೂ ರಾಜ್ಯವೆಂಬ ಹೆಸರು ವಾಡಿಕೆಯಾಗುತ್ತದೆ. ಒಂದು ಸರಕಾರದ ಅಧೀನದಲ್ಲಿರುವ ದೇಶವೆಲ್ಲ ಒಂದು ರಾಜ್ಯ.

# ರಾಜ್ಯವೆಂದರೆ ಏನು?

ಆ ವ್ಯವಸ್ಥೆಯ ಮುಖ್ಯ ಲಕ್ಷಣಗಳನ್ನು ಪರೀಕ್ಷಿಸೋಣ.

(1) ಬಹು ಸಹಸ್ರಮಂದಿ ಜನರು-ಎಂದರೆ ಹತ್ತಾರು ಸಾವಿರ ಕುಟುಂಬಗಳವರು-ಒಂದು ಗುಂಪಾಗಿ ಕೂಡಿ, ಒಂದು ಸಮಾಜವಾಗಿ ಬಾಳಲು ಸಿದ್ಧರಾಗಿರಬೇಕು. ಎಂದರೆ, ಅವರಲ್ಲಿ ಎಲ್ಲರಲ್ಲಿಯೂ ಪರಸ್ಪರ-"ಇವರು ನಮ್ಮವರು" ಎಂಬ ಮಮತೆಯೂ, ಒಬ್ಬರ ಕಷ್ಟ ಸುಖಗಳಲ್ಲಿ ಇನ್ನೊಬ್ಬರು ಭಾಗವುಳ್ಳವರು ಎಂಬ ಸಂಗಾತಿಬುದ್ಧಿಯೂ ಸಾಮಾನ್ಯವಾಗಿ ಹರಡಿ ನೆಲೆಗೊಂಡಿರಬೇಕು. ಇಂಥ ಜನಪದ ಸಮೂಹವೇ ರಾಜಕೀಯ ಸಮಾಜ, ಅದೇ ಪ್ರಜಾಮಂಡಲ, ಅದೇ ದೇಶದೊಟ್ಟು. ಅದೇ ರಾಜ್ಯದ ಮೂಲ ಸಾಮಗ್ರಿ,-ರಾಷ್ಟ್ರ ಶರೀರ (ಬಾಡಿ ಪಾಲಿಟಿಕ್).

(2) ಆ ಪ್ರಜಾಸಮಾಜ ತನ್ನ ಪೈಕಿ ಎಲ್ಲರಿಗೂ ಸೇರಿದಂಥ ಲೌಕಿಕ ಹಿತಾರ್ಥಗಳಿಗೋಸ್ಕರ ಏರ್ಪಾಟಾದದ್ದಾಗಿರಬೇಕು. ಈ ಲೋಕದಲ್ಲಿ ಎಲ್ಲ ಮನುಷ್ಯರಿಗೂ ಬೇಕಾದ ಮನೆ, ಭೂಮಿ, ಹಣ, ಆರೋಗ್ಯ, ಪ್ರಯಾಣ ಸೌಕರ್ಯ, ನೆಮ್ಮದಿ, ರಕ್ಷಣೆ, ನ್ಯಾಯ ತೀರ್ಮಾನ, ವಿನೋದ ಸಾಮಗ್ರಿ-ಇಂಥಾ ನಮ್ಮ ನಿತ್ಯಜೀವನದ ಅನುಕೂಲತೆಯ ವಿಷಯಗಳು ಮಾತ್ರವೇ ರಾಜ್ಯಕ್ಕೆ ಸಂಬಂಧಪಟ್ಟವು. ಇವೇ ಸರ್ವಸಾಮಾನ್ಯ ಹಿತಾರ್ಥಗಳು. ಇಂಥಾ ಪ್ರಜಾಸಾಧಾರಣವಾದ (Common Interests) ಐಹಿಕ ಹಿತಾರ್ಥಗಳು ಮಾತ್ರವೇ ರಾಜ್ಯವೆಂಬ ಏರ್ಪಾಟಿನ ಮುಖ್ಯೋದ್ದೇಶ. ರಾಜ್ಯವೆಂಬುದು ಕೇವಲ ಲೌಕಿಕ (ಸೆಕ್ಯುಲರ್) ಸಂಸ್ಥೆ.

ಪರಲೋಕದ ವಿಚಾರ, ದೇವತೆಗಳ ವಿಚಾರ, ಕುಲಾಚಾರಗಳ ವಿಚಾರ-ಇಂಥಾ ಕೆಲ ಕೆಲವು ಮಂದಿಯ ಅಥವಾ ಬೇರೆ ಬೇರೆ ಪಂಗಡಗಳ, ಧೈವ ಮತಧರ್ಮಗಳ ವಿಚಾರಗಳು ರಾಜ್ಯಕ್ಕೆ ಸೇರಿದವಲ್ಲ. ಈ ಮತಾಚಾರಗಳ ವಿಷಯಕ್ಕೆ ಸಂಬಂಧಪಟ್ಟ ಸಮಾಜಗಳೂ, ಅವುಗಳ ಕಟ್ಟುಪಾಡುಗಳೂ ಮತ್ತು ಸಂಸ್ಥೆಗಳೂ ಬೇರೆಬೇರೆಯಾದವು. ಅವಕ್ಕೆ "ಮತ" ಅಥವಾ ಜಾತಿಕಟ್ಟು ಅಥವಾ ಕುಲಪಂಚಾಯಿತಿ ಎಂದು ಹೆಸರು. ಅವುಗಳಿಗೂ ಕೇವಲ ರಾಜಕೀಯ ಸಮಾಜವಾದ ರಾಜ್ಯಕ್ಕೂ ಸಂಬಂಧವಿರಬೇಕಾದದ್ದಿಲ್ಲ, ಅವರೊಡನೆ ವಿರೋಧವೂ ಇಲ್ಲ, ಸ್ನೇಹವೂ ಇಲ್ಲ. ರಾಜ್ಯವೂ ಆ ಇತರ ಕಟ್ಟುಪಾಡುಗಳೂ ಬೇರೆಬೇರೆಯಾಗಿ, ತಮ್ಮ ತಮ್ಮಷ್ಟಕ್ಕೆ ತಾವು ತಾವು ಸ್ವತಂತ್ರಗಳು.

(3) ರಾಜಕೀಯ ಸಮಾಜವು ಎಲ್ಲ ಮನುಷ್ಯ ಸಮಾಜಗಳ ಪೈಕಿ ಅತ್ಯಂತ ದೊಡ್ಡದು. ಮತ, ಮಠ, ಕುಲ, ಜಾತಿ-ಇಂಥವೇ ಆದ ಎಲ್ಲ ಇತರ ಸಮಾಜಗಳೂ ರಾಜಕೀಯ ಸಮಾಜದ

ಒಳಗಡೆ, ಅದರ ಪ್ರೋಷಣೆಯಿಂದ,-ಒಂದು ದೊಡ್ಡ ಪೆಟ್ಟಿಗೆಯ ಒಳಗಡೆ ನಾಲ್ಕಾರುತೆರದ ಸಣ್ಣ ಸಣ್ಣ ಅಡಕು ಭರಣಿ ಸಂಪುಟಗಳಲ್ಲಿ ಒಡವೆಗಳು ಅಡಕವಾಗಿರುವಂತೆ,-ಇರತಕ್ಕವು. ಇಲ್ಲಿ ಎರಡು ಸಂಗತಿಗಳನ್ನು ನೆನಪಿನಲ್ಲಿಟ್ಟುಕೊಳ್ಳಬೇಕು.

(ಅ) ಒಂದು ದೇಶದಲ್ಲಿ ವಾಸವಾಗಿರುವ ಯಾವ ಮನುಷ್ಯನೂ ತಾನು ಅಲ್ಲಿಯ ರಾಜಕೀಯ ಸಮಾಜದಿಂದ ಹೊರಗೆ ನಿಂತವನೆಂದು ಹೇಳಲಾಗದು. ಅವನು ಇತರೆ ವಿವಿಧ ಸಮಾಜಬಂಧನಗಳನ್ನು ತಪ್ಪಿಸಿಕೊಳ್ಳಬಹುದು. ಅವನು ಒಂದು ಮಠಕ್ಕೋ ಕುಲಸಂಘಕ್ಕೋ ಸೇರಿಯೇ ತೀರಬೇಕೆಂದು ಅವನನ್ನು ಯಾರೂ ನಿರ್ಬಂಧಪಡಿಸಲಾರರು. ಆದರೆ ರಾಜ್ಯಸಂಸ್ಥೆ ಮಾತ್ರ ಅವನನ್ನು ಹಾಗೆ ಹೊರಕ್ಕೆ ಬಿಟ್ಟಿರುವುದಿಲ್ಲ. ದೇಶದೊಟ್ಟಿನ ಎಲ್ಲ ಮನುಷ್ಯರೂ ಅದಕ್ಕೆ ಅಧೀನರು. ರಾಜ್ಯ ನಿಮ್ಮನ್ನು ಕಾಪಾಡಬೇಕಾದರೆ ನೀವು ಅದರ ಹಿಡಿತಕ್ಕೆ ಒಳಪಟ್ಟಿರಬೇಕು.

(ಆ) ರಾಜ್ಯವೆಂಬ ಸಮಾಜವು ಮತ, ಮಠ, ಕುಲ ಮೊದಲಾದ ಇತರೆ ಎಲ್ಲ ಸಮಾಜಗಳಿಗಿಂತ ಪ್ರಬಲವಾದದ್ದು-ಎಂದರೆ ರಾಜ್ಯದ ಕ್ಷೇಮಲಾಭಗಳಿಗೂ ಇತರ ಸಮಾಜ ಸಂಸ್ಥೆಗಳ ಇಷ್ಟ ಅಭಿಪ್ರಾಯಗಳಿಗೂ ತಕರಾರು ಬಂದ ಸಂದರ್ಭದಲ್ಲಿ ರಾಜ್ಯವೇ ಮೇಲ್ಕೈಯಾಗಿ ನಿಲ್ಲತಕ್ಕದ್ದು : ಏಕೆಂದರೆ ಎಲ್ಲರ ಕ್ಷೇಮಕ್ಕೂ ಮೂಲವಾದದ್ದು ರಾಜ್ಯ ಕ್ಷೇಮ. ರಾಜ್ಯ ಕೆಟ್ಟರೆ ಮಠ, ಕುಲ ಮುಂತಾದ ಯಾವ ಏರ್ಪಾಟೂ ಉಳಿಯಲಾರದು. ಆದದ್ದರಿಂದ ರಾಜ್ಯವು ಸರ್ವ ಪ್ರಧಾನ ಸಂಸ್ಥೆ. ಅದು ಉಳಿದ ಎಲ್ಲ ಬಗೆಯ ಸಂಘ ಸಂಸ್ಥೆಗಳಿಗಿಂತ ಪ್ರಬಲವಾಗಿರಬೇಕಾದದ್ದು.

(4) ಇಂಥಾ ಕೇವಲ ಲೌಕಿಕ ವಿಚಾರಗಳ ಆಡಳಿತಕ್ಕೆ ಕೆಲವು ಕಟ್ಟುಪಾಡುಗಳು ಅವಶ್ಯವಾಗುತ್ತವಷ್ಟೆ? ಅಂಥಾ ಕಾಯಿದೆ ಕಾನೂನುಗಳು ಅಥವಾ ಶಾಸನವಿಧಿಗಳು ಆ ಸಮಾಜವೆಲ್ಲಕ್ಕೂ ಒಂದೇ ಆಗಿರತಕ್ಕದ್ದು ; ಮತ್ತು ಆ ಶಾಸನಗಳನ್ನು ವಿಧಾಯಕ ಮಾಡುವವರೂ, ಮತ್ತು ಅವುಗಳನ್ನು ಅನುಸರಿಸಿ ಆಡಳಿತದ ಕೆಲಸವನ್ನು ನಡೆಸತಕ್ಕವರೂ ಯಾರಾಗಿರಬೇಕೆಂಬ ವಿಚಾರದಲ್ಲಿ, ಆ ಸಮಾಜವೆಲ್ಲಕ್ಕೂ ಒಂದೇ ಏರ್ಪಾಟು, ಅಥವಾ ನಿಬಂಧನೆ-ಎಂದರೆ ಒಂದೇ ಸರಕಾರದ ವ್ಯವಸ್ಥೆ-ಇರತಕ್ಕದ್ದು: ಎಂದರೆ ಜನತೆಯು ಹಿತಾರ್ಥಗಳು ಸರ್ವಸಮಾನವಾದಂತೆ ಹಿತಸಾಧಕವಾದ ಶಾಸನಗಳೂ ಮತ್ತು ಶಾಸನಾನುಸಾರವಾದ ಕಾರ್ಯಕಾರಿ ಮಂಡಲವೂ ಸಮಸ್ತ ಪ್ರಜೆಗೂ ಸರ್ವಸಮಾನವಾಗಿರಬೇಕಾದದ್ದು : ಎಂದರೆ ದೇಶಕ್ಕೆಲ್ಲ ಒಂದೇ ಒಂದು ಸರಕಾರವಿರಬೇಕಾದದ್ದು.

(5) ಹಾಗೆ ಒಟ್ಟು ಸಮಾಜವು ಅಂಗೀಕರಿಸಿರುವ ವ್ಯವಸ್ಥೆಯ ಮೇರೆಗೆ ಆಡಳಿತ ನಡೆಸಬೇಕಾದ ಅಧಿಕಾರಿಗಳು ಆ ಶಾಸನವಿಧಿಗಳನ್ನು (ಎಂದರೆ, ಕಾನೂನು ಕಟ್ಟುಪಾಡುಗಳನ್ನು) ಪ್ರಯೋಗಿಸಿ, ಸಮಾಜವನ್ನು ಕಾಪಾಡುವ ಕೆಲಸದಲ್ಲಿ ಅವಶ್ಯವಾದಂತೆ ಸಮಾಜದ ಎಂದರೆ ದೇಶದ ಒಟ್ಟಿನ-ಎಲ್ಲ ಜನಶಕ್ತಿ ದ್ರವ್ಯಶಕ್ತಿ ವಸ್ತುಶಕ್ತಿಗಳನ್ನೂ ಉಪಯೋಗಿಸಬಹುದಾಗಿರತಕ್ಕದ್ದು; ಎಂದರೆ ಸಮಾಜದ ಸರ್ವಸ್ವವೂ ರಾಜ್ಯಶಕ್ತಿಯ ಅಥವಾ ಸರಕಾರದ ಕೈಗೆ ಒದಗುವ ಉಪಯೋಗಿಸಬಹುದಾಗಿರತಕ್ಕದ್ದು; ಎಂದರೆ ಸಮಾಜದ ಸರ್ವಸ್ವವೂ ರಾಜ್ಯಶಕ್ತಿಯ ಅಥವಾ ಸರಕಾರದ ಕೈಗೆ ಒದಗುವ ಉಪಕರಣವಾಗಿರತಕ್ಕದ್ದು. ಅದೇ ಸ್ವಾಮ್ಯ ಅಥವಾ ಸರ್ವಸ್ವಾಮ್ಯ (Sovereignity).

ಹೀಗೆ ಯಾವ ಒಂದು ಏರ್ಪಾಟು, ಅಥವಾ ವ್ಯವಸ್ಥಾನಿಬಂಧನೆ ದೇಶದ ಸರ್ವ ಜನರಿಗೂ ಅವಶ್ಯವಾದದ್ದಾಗಿರುತ್ತದೆಯೋ ಅದು ಸರ್ವಕಾರ್ಯ ಅಥವಾ "ಸರಕಾರ". ಹಾಗೆಯೇ ಯಾವ ಒಂದು ವ್ಯವಸ್ಥೆಯ ಶಕ್ತಿಯು ಸರ್ವರನ್ನೂ ಆಳುತ್ತ ಸರ್ವರಿಂದಲೂ ಅವರವರ ಕರ್ತವ್ಯಗಳನ್ನು ಮಾಡಿಸುತ್ತದೆಯೋ ಅದು "ಸರ್ವ" ಕಾರ ಅಥವಾ "ಸರಕಾರ". ಆ ಶಕ್ತಿಯನ್ನು ಪ್ರಯೋಗಿಸಲು ಯಾವಯಾವ ಜನ ಗೊತ್ತಾಗಿರುತ್ತಾರೋ ಅವರೂ ಒಟ್ಟು ಎಣಿಕೆಯಲ್ಲಿ ಸರಕಾರ.

## ಈಗ "ಸ್ವರಾಜ್ಯ" ಎಂಬ ಪದವನ್ನು ನೋಡೋಣ

"ಸ್ವ" ಎಂದರೆ "ತನ್ನ". ಅದು ಯಾರ "ತನ್ನ"? ಈ "ತನ್ನ" ಎಂಬ ಮಾತಿನಲ್ಲಿ ಅಡಗಿರುವ "ತಾನು" ಎಂಬುದು ಯಾರು? ಪ್ರಕೃತ ಪ್ರಯೋಗದಲ್ಲಿ "ತಾನು" ಎಂಬುದು ಒಟ್ಟು ದೇಶ. "ಸ್ವ" ಎಂಬುದರ ಮುಂದೆ "ರಾಜ್ಯ" ಎಂಬ ಪದ ಸೇರಿದೆಯಲ್ಲವೆ? "ರಾಜ್ಯ" ಎಂಬುದರಲ್ಲಿ ದೇಶದ ಸರ್ವಜನ ಸಮುದಾಯ ಎಂಬ ಅಭಿಪ್ರಾಯ ಅಡಗಿಕೊಂಡಿದೆ ಎಂದು ಮೇಲೆ ನೋಡಿದ್ದೇವೆ. ಪ್ರಜೆಯಿಲ್ಲದೆ ರಾಜ್ಯವಿಲ್ಲ. ಆದಕಾರಣ ರಾಜ್ಯ ಎಂಬ ಮಾತು ಸ್ವ ಎಂಬ ಮಾತಿನೊಡನೆ ಸೇರಿಕೊಂಡಾಗ ಅದಕ್ಕೆ 'ದೇಶಪ್ರಜೆಯ' ಎಂದು ಅರ್ಥ ಬರುತ್ತದೆ. ಹೀಗೆ ಇಂಡಿಯಾದೇಶಕ್ಕೆ ಸ್ವರಾಜ್ಯ ಬೇಕು ಎಂದರೆ–ದಾದಾಭಾಯಿ ನವರೋಜಿಯವರು ವಿಶದಪಡಿಸಿರುವಂತೆ-ಇಂಡಿಯಾ ದೇಶದ ಸರಕಾರ ಇಂಡಿಯಾ ದೇಶೀಯ ಪ್ರಜೆಯ ಕೈಯಲ್ಲಿರಬೇಕಾದದ್ದು ಎಂದು ಅಭಿಪ್ರಾಯವಾಗುತ್ತದೆ.

ಈ ಅಭಿಪ್ರಾಯದಲ್ಲಿ ಎರಡು ಅಂಶಗಳಿವೆ:

(1) ಇಂಡಿಯಾ ದೇಶದ ಸರಕಾರದಲ್ಲಿ ಪರದೇಶೀಯರ ಅಧಿಕಾರ ಇರತಕ್ಕದ್ದಲ್ಲ-ಎಂಬುದೊಂದು.

(2) ಇಂಡಿಯದ ಸರಕಾರವು ದೇಶದ ಜನಸಾಮಾನ್ಯಕ್ಕೆ-ಎಂದರೆ ಜನದೊಟ್ಟಿಗೆ ಅಥವಾ ಪ್ರಜಾಸಮಷ್ಟಿಗೆ-ಸೇರಿರಬೇಕೆಂಬುದೊಂದು.

(1) 1947ನೆ ಇಸವಿ ಆಗಸ್ಟ್ 15ರವರೆಗೂ ನಮ್ಮ ದೇಶವು ಇಂಗ್ಲೆಂಡ್ ದೇಶದ ಅಧಿಕಾರಕ್ಕೆ ಒಳಪಟ್ಟಿತ್ತಷ್ಟೆ? ಯಾವ ಜನರಿಗೆ ನಮ್ಮ ದೇಶದ ಶಾಶ್ವತ ಯೋಗಕ್ಷೇಮಗಳ ಚಿಂತೆಯು ನಮಗಿರುವಂತೆ ಸಹಜವಾಗಿಯೂ ಆಳವಾಗಿಯೂ ಇರುವುದು ಅಸಂಭವವೋ, ಯಾರಿಗೆ ಇಂಡಿಯಾ ದೇಶೀಯರ ಶೀಲಸ್ವಭಾವಗಳ ಜ್ಞಾನ ಸಂಪೂರ್ಣವಾದದ್ದಾಗಿರಲಾರದೋ, ಯಾರ ಮುಖ್ಯ ದೃಷ್ಟಿ ತಮ್ಮ ಸ್ವಂತ ದೇಶದ ತಾತ್ಕಾಲಿಕ ಪ್ರಯೋಜನದ ಮೇಲೆಯೇ ಹೆಚ್ಚಾಗಿರುವುದು ಸ್ವಾಭಾವಿಕವೋ ಅಂಥ ಹೊರಗಣವರಾದ ಬ್ರಿಟಿಷರು ರಾಜ್ಯಸೂತ್ರಗಳನ್ನು ನಡೆಸುತ್ತಿದ್ದರೆ ಈ ದೇಶದ ಏಳಿಗೆ ಎಂದಿಗೂ ಬಹು ಮೇಲಿನ ಮಟ್ಟಕ್ಕೆ ಏರಲಾರದು; ಮತ್ತು ಈ ದೇಶೀಯರ ಯೋಗ್ಯತೆ ಬೆಳೆದು ತುದಿಮುಟ್ಟಲಾರದು. ಒಬ್ಬ ಮನುಷ್ಯನ ಗೃಹಕೃತ್ಯವನ್ನು ಬೇರೆ ಯಾವುದೋ ಊರಿನ ಯಾವುದೋ ಕುಟುಂಬದ ಯಜಮಾನನು ನಡೆಸುತ್ತಿದ್ದರೆ ಮೊದಲು ಹೇಳಿದ ಮನುಷ್ಯನ ಕುಟುಂಬದ ಸೌಖ್ಯ ಸಂಪತ್ತುಗಳು ಹೇಗೆ ತೃಪ್ತಿಕರವಾಗಿ ಬೆಳೆಯಲಾರವೋ ಹಾಗೆಯೇ ಒಂದು ದೇಶವನ್ನು ಇನ್ನೊಂದು ದೇಶ ಆಳಿ ಸಮಾಧಾನವನ್ನು ಉಂಟುಮಾಡಲಾರದು. ಈ ಅನುಭವದ ಸಿದ್ಧಾಂತವೆ ಸ್ವರಾಜ್ಯ ತತ್ತ್ವಕ್ಕೆ ತಳಹದಿ. ನಮ್ಮ ದೇಶಕ್ಕಿರುವ ಸಾಧನಸಂಪತ್ತಿನಿಂದಲೂ ಸಂದರ್ಭಾನುಕೂಲದಿಂದಲೂ ನಮ್ಮ ಜನ ಎಷ್ಟು ಹೆಚ್ಚಿನ ಸೌಖ್ಯಾಭಿವೃದ್ಧಿಯನ್ನು ಪಡೆಯುವುದು ಮನುಷ್ಯ ಪ್ರಯತ್ನದಿಂದ ಸಾಧ್ಯವೋ ಅಷ್ಟು ಮಟ್ಟಿನ ಸುಖ ಸಂತೋಷಗಳು ನಮ್ಮವರಿಗೆ ಲಭಿಸಬೇಕಾದರೆ, ನಮ್ಮ ದೇಶದ ಸರ್ಕಾರದಲ್ಲಿ ಪರಕೀಯರ ಕೈವಾಡ ಇಲ್ಲದೆ ಹೋಗಿ ಸಮಸ್ತ ಅಧಿಕಾರಸೂತ್ರವೂ ನಮ್ಮವರ ಕೈಗೇ ಬರಬೇಕು.

(2) ಸರಕಾರ ನಮ್ಮವರ ಕೈಗೆ ಬರುವುದು-ಎಂದರೆ, ನಮ್ಮ ದೇಶದಲ್ಲಿ ಯಾರೋ ಒಬ್ಬರಿಬ್ಬರ, ಅಥವಾ ನಾಲ್ವರೈವರ, ಅಥವಾ ಐವತ್ತು ಮಂದಿ ನೂರು ಮಂದಿ ಮುಖಂಡಜನರ ಕೈಗೆ ಬರುವುದು- ಎಂದು ಅರ್ಥವಲ್ಲ. ಇಂಡಿಯಾ ಸರ್ಕಾರದ ಮುಖ್ಯ ಅಧಿಕಾರಸ್ಥಾನಗಳಲ್ಲಿ ಸುಮಾರು ಮೂರು ಸಾವಿರ ಮಂದಿ ಐರೋಪ್ಯರು (ಪರಂಗಿಯವರು) ಇದ್ದರೆಂದು ಇಟ್ಟುಕೊಳ್ಳೋಣ. ಆ ಸ್ಥಳಗಳಿಂದ ಅವರನ್ನು ತಪ್ಪಿಸಿ, ಅಲ್ಲಿ ದೇಶೀಯ (ನೇಟಿವ್) ಜನರನ್ನು ಕೂಡಿಸಿಬಿಟ್ಟರೆ ಅಷ್ಟರಿಂದಲೇ ಅದು ಸ್ವರಾಜ್ಯವಾಗುವುದಿಲ್ಲ. ಸ್ವರಾಜ್ಯಕ್ಕೆ ಬೇಕಾದದ್ದು ಸರ್ಕಾರ ನಡೆಸುವವರ ತೊಗಲಿನ ಬಣ್ಣವಲ್ಲ; ಅವರ ಮನಸ್ಸಿನ ಗುಣ. ಬಹಿರಂಗದ ಬದಲಾವಣೆಯ ಜೊತೆಗೆ ಅಂತರಂಗ ಸ್ವಭಾವದ ಬದಲಾವಣೆಯೂ ಆಗಬೇಕು. ಒಬ್ಬ ರಾಜನಿಗೋ ಅಥವಾ ಒಬ್ಬ ಸುಲ್ತಾನನಿಗೋ, ಅಥವಾ ಐವರೋ ಹತ್ತು ಮಂದಿಯೋ ಭಾರತೀಯ (ಇಂಡಿಯನ್)

ಜನರೇ ಸೇರಿದ ಒಂದು ಮಂತ್ರಿಮಂಡಲಕ್ಕೋ, ಐನೂರು ಮಂದಿಯೋ ಸಾವಿರ ಮಂದಿಯೋ ಭಾರತೀಯರೇ ಸೇರಿದ ಒಂದು ಸಂಘಕ್ಕೋ, ಅಥವಾ ಭಾರತೀಯರ ಪೈಕಿ ಶ್ರೀಮಂತರೆಂದೂ ಲಕ್ಷಾಧಿಕಾರಿಗಳೆಂದೂ ಗೊತ್ತಾಗಿರುವಂಥ ಒಂದು ಐಶ್ವರ್ಯವಂತ ಗುಂಪಿಗೋ, ಅಥವಾ ಮಠಾಧಿಪತಿಗಳ ಗುಂಪಿಗೋ ಅಥವಾ ನಮ್ಮ ದೇಶದ ನಾನಾಕುಲಜಾತಿಗಳ ಪೈಕಿ ಯಾವುದಾದರೊಂದು ಜಾತಿಗೋ, ಒಂದು ಕೋಮಿಗೋ, ಒಂದು ಕಸಬಿಗೋ, ಅಥವಾ ಕಾಂಗ್ರೆಸ್, ಮುಸ್ಲಿಮ್ ಲೀಗ್, ಜಸ್ಟಿಸ್ ಪಾರ್ಟಿ ಮೊದಲಾದ ಪಾರ್ಟಿಗಳ ಪೈಕಿ ಯಾವುದಾದರೂ ಒಂದು ರಾಜಕೀಯ ಕಕ್ಷಿಗೋ, ಇಂಡಿಯಾ ದೇಶದ ಆಡಳಿತಗಳನ್ನು ಒಪ್ಪಿಸಿಬಿಟ್ಟರೆ ಅದು ಸ್ವರಾಜ್ಯವಾಗಲಾರದು. ಸ್ವರಾಜ್ಯ ಎಂಬಲ್ಲಿ, "ಸ್ವ" ಎಂದರೆ ದೇಶದ ಸಮಸ್ತ ಪ್ರಜಾಸಮೂಹ-ದೇಶದ ಜನದೊಟ್ಟು-ಎಂದು ಆಗಲೇ ವಿವರಿಸಿದ್ದಾಗಿದೆ. ಹಾಗೆ ದೇಶದ ಸರ್ಕಾರವನ್ನು ನಡೆಸುವ ಸ್ವಾತಂತ್ರ್ಯವೂ ಅಧಿಕಾರವೂ ಯಾವ ದಿನ ಪೂರ್ತಿಯಾಗಿ ಪ್ರಜಾಸಮಷ್ಟಿಗೆ ದೊರೆತಿವೆಯೋ ಅಂದು ನಮಗೆ ಸ್ವರಾಜ್ಯ ಸಿದ್ಧಿ.

## ಪ್ರತಿನಿಧಿಗಳೇಕೆ?

ಇಂಡಿಯಾದೇಶದ ಪ್ರಜೆ ಸುಮಾರು ಮುವ್ವತ್ತಾರು ಕಾಲು ಕೋಟಿ*. ಇಷ್ಟು ಮಂದಿ ಸೇರಿ ಒಂದು ರಾಜ್ಯವನ್ನು ಆಳುವುದಕ್ಕೆ ಆಗುತ್ತದೆಯೆ? ನಮ್ಮ ಊರುಗಳಲ್ಲಿ ಯಾವುದಾದರೂ ಒಂದು ಸಣ್ಣ ಕೆಲಸವನ್ನು ಮಾಡಬೇಕಾದರೆ ಕೂಡ, ಯಾರನ್ನಾದರೂ ಒಬ್ಬರನ್ನು ಅದರ ಯಾಜಮಾನಿಕೆಗೆ ನಿಲ್ಲಿಸಿದರೆ ಆ ಕೆಲಸ ಆಗುವಷ್ಟು ಚೆನ್ನಾಗಿ, ಹತ್ತು ಜನಕ್ಕೆ ಅದನ್ನು ಬಿಟ್ಟುಕೊಟ್ಟರೆ ಆಗುವುದಿಲ್ಲ. ಯಜಮಾನನು ಒಬ್ಬನಾಗಿದ್ದರೆ ಜವಾಬ್ದಾರಿ ಅವನ ತಲೆಗೆ ಹತ್ತುತ್ತದೆ; ಹತ್ತು ಮಂದಿಯಾದರೆ ಅವರು ಹತ್ತು ರೀತಿ ಮಾತನಾಡಿ, ಹತ್ತು ದಾರಿ ಹಿಡಿದು, ಒಬ್ಬೊಬ್ಬನೂ ಜವಾಬ್ದಾರಿ ತಪ್ಪಿಸಿಕೊಳ್ಳುತ್ತಾನೆ. ಇದು ಎಲ್ಲರೂ ಕಂಡಿರುವ ಸಂಗತಿ. ಹೀಗಿರುವಾಗ ಕೋಟ್ಯನುಕೋಟಿ ಜನ ಸೇರಿ ಒಂದು ರಾಜ್ಯ ಭಾರ ನಡೆಸುವುದು ಸಾಧ್ಯವೆ?-ಎಂದು ರಾಜಕೀಯಕ್ಕೆ ಹೊಸಬರಾದವರು ಕೇಳಬಹುದು. ಅದು ಖಂಡಿತವಾಗಿ ಸಾಧ್ಯ. ಪ್ರಪಂಚದ ಎಷ್ಟೋ ಇತರೆ ದೇಶಗಳಲ್ಲಿ ಈಗ ಹಾಗೆ ನಡೆಯುತ್ತಿದೆ. ಇಂಗ್ಲೆಂಡಿನಲ್ಲಿಯೂ ಅಮೆರಿಕದಲ್ಲಿಯೂ ರಷ್ಯದಲ್ಲಿಯೂ ಇಲ್ಲಿಯಂತೆಯೇ ಕೋಟ್ಯಂತರ ಮಂದಿ ಪ್ರಜೆ ಇದ್ದಾರೆ. ಅವರೆಲ್ಲ ತಮ್ಮತಮ್ಮ ದೇಶಗಳ ರಾಜ್ಯಭಾರಗಳನ್ನು ತಾವೇ ನಡೆಸಿಕೊಳ್ಳುತ್ತಿದ್ದಾರೆ.

*1952 ರಲ್ಲಿ

ಅದು ಹೇಗೆ? ಇದು ನಮ್ಮ ದೇಶಕ್ಕೆ ಹೊಸ ವಿಷಯ. ಆದ್ದರಿಂದ ಗಮನಿಸಿ ತಿಳಿದುಕೊಳ್ಳಬೇಕಾದುದು. ಯಾವ ದೇಶದಲ್ಲಿಯೇ ಆಗಲಿ, ಅಲ್ಲಿಯ ನಿವಾಸಿಗಳೆಲ್ಲರೂ ರಾಜ್ಯದ ಕೆಲಸದಲ್ಲಿ ಪಾಲು ತೆಗೆದುಕೊಳ್ಳಲು ಶಕ್ತರೆಂದು ಅಭಿಪ್ರಾಯವಿಲ್ಲ. ಪ್ರಜೆಗಳ ಪೈಕಿ ಸಾಮಾನ್ಯವಾಗಿ ಒಂದು ಅಂತಸ್ತಿನ ಬುದ್ಧಿ ಸಾಮರ್ಥ್ಯವನ್ನು ಪಡೆದವರು ಮಾತ್ರವೇ ರಾಜಕೀಯಕ್ಕೆ ಅರ್ಹರೆಂದು ಎಲ್ಲ ದೇಶಗಳವರೂ ಅಂಗೀಕರಿಸಿದ್ದಾರೆ. ಅಂಥವರೇ ಸಮರ್ಥ ರಾಷ್ಟ್ರಕರು. ಎಳೆಮಕ್ಕಳು, ಹುಚ್ಚರು, ಘಾತುಕಶೀಲರೆಂದು ಗುರುತಾಗಿರುವವರು—ಇಂಥವರನ್ನು ಎಲ್ಲಿಯೂ ರಾಜಕೀಯ ಸಮರ್ಥ ಪ್ರಜೆಯೆಂದು ಗಣನೆ ಮಾಡುವುದಿಲ್ಲ. ಸಾಧಾರಣವಾಗಿ ಪ್ರಾಯದ ವಯಸ್ಸಿಗೆ ಬಂದು, ಸ್ಥಿರನಿವಾಸ ಮಾಡಿಕೊಂಡಿರುವವರಿಗೆ ಮಾತ್ರವೇ ರಾಜ್ಯದ ಅಧಿಕಾರದಲ್ಲಿ ಭಾಗ ಸಲ್ಲತಕ್ಕದ್ದು. ನಮ್ಮ ದೇಶದಲ್ಲಿ 18 ವರ್ಷದ (ಮೆಜಾರಿಟಿ) ಪ್ರಾಯವನ್ನು ಪ್ರಬುದ್ಧವೆಂದು ಲೆಕ್ಕ ಮಾಡಿರುತ್ತಾರೆ. ರಾಜಕೀಯದಲ್ಲಿ ಭಾಗಸ್ಥನಾಗುವವನು ಪ್ರಾಯಸಮರ್ಥನಾಗಿರುವುದು ಮಾತ್ರವೇ ಅಲ್ಲದೆ ಅಕ್ಷರಸ್ಥನಾಗಿಯೂ ಇರಬೇಕೆಂದು ಕೆಲವು ದೇಶಗಳಲ್ಲಿ ನಿಯಮ ಮಾಡಿಕೊಂಡಿದ್ದಾರೆ. ಅವನು ಅಲ್ಪಸ್ವಲ್ಪ ಆಸ್ತಿಗೆ ಸೊತ್ತುದಾರನಾಗಿರಬೇಕೆಂದೂ ಕೆಲವು ಕಡೆ ನಿಯಮವುಂಟು. ಹೀಗೆ ಸರಕಾರಕ್ಕೆ ಸಂಬಂಧಪಟ್ಟ ವಿಚಾರಗಳನ್ನು ಚನ್ನ ಮನಸ್ಸಿಗೆ ಅರ್ಥಮಾಡಿಕೊಳ್ಳಲು ಸಾಕಾದಷ್ಟು ಬುದ್ಧಿಶಕ್ತಿ, ಸರಿತಪ್ಪುಗಳನ್ನು ಆಲೋಚನೆಯಿಂದ ತೀರ್ಮಾನ ಮಾಡಲು ಬೇಕಾಗುವಷ್ಟು ಲೋಕಾನುಭವ, ಚಂಚಲನಾಗದೆ ಯಾವುದಾದರೂ ಒಂದು ಉದ್ದೇಶವನ್ನು ದೃಢವಾಗಿ ಹಿಡಿದು ನಿಲ್ಲುವಷ್ಟು ಜವಾಬ್ದಾರಿಯ ಅಭ್ಯಾಸ ಮತ್ತು ತತ್ತ್ವನಿಷ್ಠೆ—ಈ ತೆರದ ಅರ್ಹತೆಗಳ ಆಧಾರದ ಮೇಲೆ ರಾಜಕೀಯ ಅಧಿಕಾರವನ್ನು ಪಡೆಯತಕ್ಕದ್ದು—ಎಂಬ ಬಗ್ಗೆ ಎಲ್ಲ ದೇಶಗಳಲ್ಲಿಯೂ ಕೆಲವು ನಿಯಮಗಳನ್ನು ಗೊತ್ತು ಮಾಡಿರುತ್ತಾರೆ. ಇಂಡಿಯಾದ ಹೊಸ ರಾಜ್ಯ ನಿಬಂಧನೆಯಲ್ಲಿ ಉನ್ಮತ್ತರು, ಘಾತುಕರು—ಇಂಥವರನ್ನು ಬಿಟ್ಟು ಇಪ್ಪತ್ತೊಂದು ವರ್ಷಕ್ಕೆ ಕಡಮೆಯಿಲ್ಲದ ವಯಸ್ಸಿನ ಪ್ರತಿಯೊಬ್ಬನೂ (ಪ್ರತಿಯೊಬ್ಬಳೂ) ಸಮರ್ಥ ರಾಷ್ಟ್ರಕ (ರಾಷ್ಟ್ರಿಕ) ಎಂದು ನಿರ್ಧಾರವಾಗಿದೆ.

---

* ಈಗ ವಯೋಮಿತಿಯನ್ನು ಹದಿನೆಂಟು ವರ್ಷಕ್ಕೆ ಇಳಿಸಲಾಗಿದೆ

## ರಾಷ್ಟ್ರಕಕಾರ್ಯ

ಅಂಥ ರಾಷ್ಟ್ರಕರು ರಾಷ್ಟ್ರಕಾರ್ಯಗಳ ವಿಷಯದಲ್ಲಿ ತಮ್ಮ ಅಭಿಪ್ರಾಯಗಳನ್ನು ತಿಳಿಸಲು ಅಧಿಕಾರವುಳ್ಳವರು. ಅದು ರಾಷ್ಟ್ರ ಪ್ರಜೆಗಳ ಪರಸ್ಪರ ಸಂಬಂಧದಲ್ಲಿ ಉಂಟಾಗಿರುವ ಮೊದಲನೆಯ ಅಧಿಕಾರ. ಆ ರಾಜಕೀಯ ಅಧಿಕಾರಕ್ಕೆ ಇಂಗ್ಲಿಷಿನಲ್ಲಿ "ವೋಟ್" (Vote) ಎಂದು ಹೆಸರು.ಆ ಮಾತಿಗೆ ಮೂಲರೂಪದಲ್ಲಿ "ಹಾರೈಕೆ" " ಇಷ್ಟ" ಎಂದು ಅರ್ಥ. ಕನ್ನಡದಲ್ಲಿ " ವೋಟ್" ಎಂಬ ಪದವನ್ನು "ಮತ" " ಅಭಿಮತ " ಎಂದು ತರ್ಜುಮೆ ಮಾಡುವುದುಂಟು. ಅದನ್ನು ಇಷ್ಟ ಸೂಚನೆ, ಇಷ್ಟಾಂಕನ-ಎಂದೂ ಹೇಳಬಹುದು; ಹರಕೆ ಎಂದರೂ ಸರಿಹೋಗುತ್ತದೆ. ವರಣ ಎಂದೂ ಕರೆಯಬಹುದು. ಈ " ವರಣ" ಶಬ್ದದಲ್ಲಿ ಹೆಚ್ಚಿನ ಔಚಿತ್ಯವುಂಟು. ವರಣ ಎಂದರೆ ವರಿಸುವುದು, -ಅನೇಕ ವಸ್ತುಗಳಲ್ಲಿ ಒಂದನ್ನು ಮಿಕ್ಕಲ್ಲವಕ್ಕಿಂತ ಮೇಲೆಂದು ಆರಿಸಿಕೊಳ್ಳುವುದು. "ಸ್ವಯಂವರ" ಎಂಬ ಮಾತಿನಲ್ಲಿ ಈ -"ವಿವೇಚನಪೂರ್ವಕವಾದ ಉತ್ತಮ ಪಾತ್ರನಿರ್ಣಯ" ಎಂಬಭಿಪ್ರಾಯ ಚೆನ್ನಾಗಿ ಕಾಣಬರುತ್ತದೆ." ವೋಟ್" ಕೊಡುವ " ಎಲೆಕ್‌ಷನ್" ಎಂಬ ಚುನಾವಣೆಯ, ಅಥವಾ ಆಯ್ಕೆಯ ಕಾರ್ಯವು, ಬುದ್ಧಿಪೂರ್ವಕವಾಗಿ, ವಿವೇಕ ಮೂಲಕ ವಾಗಿ ನಡೆಯಬೇಕಾದ ಕಾರ್ಯವಾದ ಕಾರಣ, " ವರಣ" ಎಂಬ ಪದ ಅದಕ್ಕೆ ತಕ್ಕದ್ದಾಗಿದೆ. ಇಂಥ ವೋಟನ್ನು ಅಥವಾ ವರಣಾಂಕನವನ್ನು ಕೊಡುವ ಅಧಿಕಾರಕ್ಕೆ ಯಾರ್ಯಾರು ರಾಜ್ಯ ನಿಬಂಧನೆಯ ಮೇರೆಗೆ ಅರ್ಹರೋ ಅವರು ರಾಜಕೀಯ ಪ್ರಜೆಗಳು.

ಪ್ರಜಾವ್ಯಕ್ತಿಯನ್ನು ಇಂಗ್ಲಿಷಿನಲ್ಲಿ "ಸಿಟಿಜನ್" ಎನ್ನುತ್ತಾರೆ. "ಸಿಟಿಜನ್" ಎಂಬುದರ ಮೂಲಾರ್ಥ " ನಾಗರಿಕ" ಅಥವಾ "ಪುರನಿವಾಸಿ" ಎಂದು. ನಾವು ಅಂಥವರನ್ನು ರಾಷ್ಟ್ರಭಾಗಿಪ್ರಜೆ, ಅಥವಾ ರಾಷ್ಟ್ರಕ ಪ್ರಜೆ, ಎಂದು ಕರೆಯಬಹುದು. ಈ ರಾಷ್ಟ್ರಕರಲ್ಲಿ ಸಮರ್ಥರಾದವರು ವೋಟುದಾರರು, ಅಥವಾ ವರಣಕರ್ತರು. "ವೋಟ್" ಎಂಬ ಇಷ್ಟ ವರಣ ರೂಪದ ರಾಜ್ಯದ ಮೂಲಾಧಿಕಾರವು ಅವರ ಸ್ವತ್ತು. ಈ ಮೂಲಾಧಿಕಾರವಾದರೋ ರಾಜ್ಯಕಾರ್ಯದಲ್ಲಿ ದಿನೇ ದಿನೇ ಪ್ರತ್ಯಕ್ಷವಾಗಿ ಪ್ರಯೋಗವಾಗತಕ್ಕದ್ದಲ್ಲ. ಅದು ಕೆಲವು ವರ್ಷಗಳಲ್ಲಿ ಗೊತ್ತಾದ ಒಂದು ಸಲ ಪ್ರತ್ಯಕ್ಷವಾಗಿ ಕೆಲಸಮಾಡುತ್ತದೆ. ಮಿಕ್ಕ ಕಾಲದಲ್ಲಿ ಅದು ಪರೋಕ್ಷವಾಗಿರುತ್ತದೆ. ಆದರೆ ತಾನು ಪ್ರತ್ಯಕ್ಷವಾಗಿಲ್ಲದಿದ್ದರೂ, ಪ್ರತಿ ದಿವಸವೂ ಪ್ರತ್ಯಕ್ಷವಾಗಿ ರಾಜ್ಯಕಾರ್ಯ ನಡೆಸುವ ಪ್ರತಿನಿಧಿಗಳನ್ನು ಒದಗಿಸುವುದು ಆ ಪ್ರಜಾನಿಷ್ಠವಾದ ಮೂಲಾಧಿಕಾರ.

ನಮ್ಮ ಇಂಡಿಯದ ಸಾಮಾನ್ಯ ಪ್ರಜೆಯಾದ ಮುವ್ವತ್ತಾರು ಕೋಟಿಯಲ್ಲಿ ಸಮರ್ಥ ರಾಷ್ಟ್ರಕರು, (ಎಂದರೆ ವೋಟುದಾರರು, ಅಥವಾ ವರಣಕರ್ತರು) ಸುಮಾರು

ಇಪ್ಪತ್ತು ಕೋಟಿ ಎಂದು ಇಟ್ಟುಕೊಳ್ಳೋಣ.* ಇದೂ ದೊಡ್ಡ ಸಂಖ್ಯೆಯೇ. ಆದರೆ ಇಷ್ಟು ಮಂದಿಯೂ ತಮ್ಮ ಅಧಿಕಾರವನ್ನು ಚಲಾಯಿಸಲು ಒಂದು ಕಡೆ ಸಭೆ ಸೇರಿ ಆಲೋಚನೆ ಚರ್ಚೆಗಳನ್ನು ನಡೆಸಬೇಕಾಗಿಲ್ಲ. ಅವರ ಅಧಿಕಾರವು,- ಅದರ ಹೆಸರೇ ತಿಳಿಸುವಂತೆ,- ಇಷ್ಟವರಣ. ಯಾವ ವಿಷಯದಲ್ಲಿ ಇಷ್ಟ? ತಮ್ಮ ಪರವಾಗಿ ರಾಜ್ಯಕಾರ್ಯದಲ್ಲಿ ಪ್ರತ್ಯಕ್ಷ ಭಾಗವಹಿಸಬೇಕಾದವರು ಯಾರು ಎಂಬ ವಿಷಯದಲ್ಲಿ ಇಷ್ಟ. ಅದನ್ನು ಸೂಚಿಸುವುದೇ, ಎಂದರೆ ತಮ್ಮ ಪ್ರತಿನಿಧಿಗಳನ್ನು ಆರಿಸಿ ಗೊತ್ತುಮಾಡುವುದೇ- ರಾಜಕೀಯ ಪ್ರಜೆಯ ಅಧಿಕಾರ. ಅದೇ "ಎಲೆಕ್ಷನ್" ಅಥವಾ ಇಷ್ಟವರಣ, ಅಥವಾ ಚುನಾವಣೆ.

ಹೀಗೆ ಪ್ರಜೆಯ ಪ್ರತಿನಿಧಿಯಾಗಿ ಬರಲು ಎಂಥವರು ಅರ್ಹರೆಂಬ ಬಗೆಗೂ ನಿಯಮಗಳಿರುತ್ತವೆ. ಚುನಾವಣೆಯ ಕಾಲ ಸ್ಥಳಗಳ ಬಗೆಗೂ ನಿಯಮವಿರುತ್ತದೆ. ಗೊತ್ತಾದ ಕಾಲದಲ್ಲಿ ಅರ್ಹರಾದ ಜನರನ್ನು ಪ್ರತಿನಿಧಿಗಳನ್ನಾಗಿ ಆರಿಸುವ ಬಗ್ಗೆ ರಾಷ್ಟ್ರಕ/ಕಿ ಸಮುದಾಯವನ್ನು ಚುನಾವಣೆಯ ಸೌಕರ್ಯಕ್ಕಾಗಿ, ಅವರವರ ವಾಸಪ್ರದೇಶಗಳ ಪ್ರಕಾರ, ಹತ್ತುಸಾವಿರದ ಅಥವಾ ಇಪ್ಪತ್ತುಸಾವಿರದ ಅಥವಾ ಯಾವುದೋ ಒಂದು ಇಂಥ ಭಾರಿ ಸಂಖ್ಯೆಯ ಗುಂಪಾಗಿ ಅಥವಾ ಮಂಡಲವಾಗಿ, ವಿಂಗಡಿಸುವ ಬಗ್ಗೂ ನಿಯಮಗಳಿರುತ್ತವೆ. ಹೀಗೆ ಗೊತ್ತಾದ ವೋಟುದಾರರ ಅಥವಾ ಚುನಾವಣೆಗಾರರ ಅಥವಾ ವರಣಕರ್ತರ ಸಮೂಹವೇ ಚುನಾವಣೆಯ ಕ್ಷೇತ್ರ, ಅಥವಾ ಇಷ್ಟವರಣ ಮಂಡಲ. ಇಂಥ ಒಂದೊಂದು ವರಣಕ್ಷೇತ್ರಕ್ಕೂ ಒಬ್ಬೊಬ್ಬನನ್ನು (ಕೆಲವು ಕಡೆ ಇಬ್ಬರನ್ನೊ ಮೂರು ಮಂದಿಯನ್ನೋ) ಪ್ರತಿನಿಧಿಯನ್ನಾಗಿ ಆರಿಸುವ ಅಧಿಕಾರವಿರುತ್ತದೆ.

ಚುನಾವಣೆಯ ದಿವಸಕ್ಕೆ ಸ್ವಲ್ಪ ಮುಂಚಿತವಾಗಿ, ದೇಶದ ರಾಜಕೀಯದಲ್ಲಿ ಪ್ರತ್ಯಕ್ಷವಾಗಿ ಭಾಗವಹಿಸಬೇಕೆಂದು ಉದ್ದೇಶಪಟ್ಟು, ನಿಯಮಪ್ರಕಾರ ಅರ್ಹರೆಂದು ಗೊತ್ತಾಗಿರುವವರು-ಎಂದರೆ ಉಮೇದುವಾರರು- ಅಥವಾ ಸ್ಥಾನಾರ್ಥಿಗಳು, (ಕ್ಯಾಂಡಿಡೇಟ್) -ಇಷ್ಟ ವರಣಕರ್ತರ (ವೋಟರ್) ಮುಂದೆ ಬಂದು ತಮ್ಮ ತಮ್ಮ ಉದ್ದೇಶಗಳನ್ನು ಅರಿಕೆಮಾಡಿ, ಅವರ ವೋಟುಗಳನ್ನು ಅಥವಾ ಅಭಿಮತಗಳನ್ನು ಬೇಡುತ್ತಾರೆ. ಆ ಸ್ಥಾನಾರ್ಥಿಗಳು, ಅಥವಾ ವರಣೀಯರು, ಜನದ ಅನುಕೂಲಕ್ಕಾಗಿ, ತಾವು ಮಾಡಿರುವ ಯೋಚನೆಗಳನ್ನೂ ತಮಗಿರುವ ಯೋಗ್ಯತೆಗಳನ್ನೂ ತಾವು ನಂಬಿರುವ ಧ್ಯೇಯಗಳನ್ನೂ ವಿವರಿಸುತ್ತಾರೆ. ವರಣಕರ್ತರು ಅವರ ಭಾಷಣಗಳನ್ನು ಕೇಳಿ, ಅವರ ಬರವಣಿಗೆಗಳನ್ನು ಓದಿ, ವಿಮರ್ಶೆಮಾಡಿ, ಅವರ ಆಲೋಚನೆಗಳಲ್ಲಿ

*1971 ರಲ್ಲಿ ಪ್ರಜಾ ಸಂಖ್ಯೆ 54 ಕೋಟಿ. ವೋಟುದಾರರು 28 ಕೋಟಿ.

ಯುಕ್ತ ಯಾವುದು, ಆಯುಕ್ತ ಯಾವುದು, ಅವರ ಮಾತುಗಳಲ್ಲಿ ಗಟ್ಟಿ ಎಷ್ಟು ಎಂಬುದನ್ನು ತೂಕ ಮಾಡಿ ನೋಡಿ, ಒಟ್ಟಿನ ಮೇಲೆ ತಮಗೆ ನ್ಯಾಯವೆಂದೂ ಸರ್ವಹಿತಕರವೆಂದೂ ತೋರಿದಂತೆ ಆ ಉಮೇದುವಾರರ ವಿಷಯದಲ್ಲಿ ತಮ್ಮ ನಿಶ್ಚಯವನ್ನು ಸೂಚಿಸುತ್ತಾರೆ. ಇದೇ ಚುನಾವಣೆ, ಅಥವಾ "ಇಷ್ಟ ವರಣ."

ಇಷ್ಟವರಣ ಕ್ರಮಗಳು ಅನೇಕವುಂಟು. ಪ್ರತಿನಿಧಿವರಣ ಸಂದರ್ಭಗಳಲ್ಲಿ ದೇಶದಲ್ಲಿ ಇರುವ ರಾಜಕೀಯ ಪಕ್ಷಗಳು (ಪಾರ್ಟಿ) ಬಹು ಅವಶ್ಯವಾದ ಕೆಲಸವನ್ನು ಮಾಡುತ್ತವೆ. ಆ ಸಹಾಯವನ್ನಾಗಲೀ ಆ ಕೋಲಾಹಲವನ್ನಾಗಲಿ ವರ್ಣಿಸುವುದಕ್ಕೆ ಇದು ಸ್ಥಳವಲ್ಲ.

## ಪಕ್ಷಕಕ್ಷಿಗಳು

ಆದರೂ ಪಾರ್ಟಿಗಳ ಅಥವಾ ರಾಜಕೀಯ ಕಕ್ಷಿಗಳ ವಿಷಯದಲ್ಲಿ ಒಂದು ಮಾತನ್ನು ಮಾತ್ರ ಹೇಳದಿರಲಾಗದು. ಪ್ರಜಾಸರಕಾರ ವ್ಯವಸ್ಥೆಗೆ "ಪಕ್ಷ" ಒಂದು ಅವಶ್ಯವಾದ ಅಂಗ. ದೇಶದಲ್ಲಿ ಪ್ರಜೆ ಹತ್ತು ಸಾವಿರ ಮಂದಿ ಇದ್ದರೂ ಅವರಲ್ಲಿ ಪ್ರತಿಯೊಬ್ಬನೂ ರಾಜ್ಯವಿಚಾರದಲ್ಲಿ ಸ್ವತಂತ್ರವಾಗಿ ಯೋಚನೆ ಹೇಳಲು ಶಕ್ತನಲ್ಲ. ಬಹುಮಂದಿ ಜನ ಇತರರು ಕೊಟ್ಟ ಸಲಹೆಗಳನ್ನು ಗ್ರಹಿಸಬಲ್ಲವರೇ ಹೊರತು ತಾವೇ ಸ್ವತಃ ಸಲಹೆಗಳನ್ನು ಕೊಡುವವರಲ್ಲ. ಅದಲ್ಲದೆ ಹತ್ತು ಸಾವಿರ ಮಂದಿಯೂ ಹತ್ತು ಸಾವಿರ ಸಲಹೆಗಳನ್ನು ಮುಂದಿಟ್ಟರೆ ದೇಶದ ಕಾರ್ಯಗತ ಅಷ್ಟನ್ನೂ ಗ್ರಹಿಸಿ ಮಾಡುವುದು ಹೇಗೆ? ಈ ಕಾರಣಗಳಿಂದ ದೇಶದ ಮನೋಗತವನ್ನು ಎರಡೋ ಮೂರೋ ನಾಲ್ಕೋ ಒಂದು ಮಿತವಾದ ಸಂಖ್ಯೆಯಷ್ಟು ಸೂಚನೆ ಯೋಚನೆಗಳ ರೂಪದಲ್ಲಿ ಅಭಿವ್ಯಕ್ತಗೊಳಿಸುವುದು ಅವಶ್ಯವಾಗುತ್ತದೆ. ಈ ಅವಶ್ಯ ಕೆಲಸವನ್ನು ಮಾಡತಕ್ಕವು "ಪಾರ್ಟಿ"ಗಳು ಅಥವಾ ಕಕ್ಷಿಪಕ್ಷಗಳು. ಅವು ಪ್ರತಿಜ್ಞಾಪತ್ರಿಕೆ (Election Manifesto) ಗಳನ್ನು ಹೊರಡಿಸಿ ತಮ್ಮ ಉದ್ದೇಶಗಳನ್ನೂ ತತ್ತ್ವಗಳನ್ನೂ ಕಾರ್ಯವಿಧಾನಗಳನ್ನೂ ಗೊತ್ತಾಗಿ ವಿವರಿಸುತ್ತವೆ. ಇಂಥಾ ಪ್ರತಿಜ್ಞಾಪತ್ರಿಕೆಗಳಿಂದ ಪ್ರಜೆಯ ಮನಸ್ಸಿಗೆ ಒಂದು ನಿಷ್ಕರ್ಷೆಯಾದ ವಿಷಯ ತಿಳಿದು ಬಂದು, ಅವರ ಆಲೋಚನೆಗೆ ಏಕಾಗ್ರತೆಯುಂಟಾಗಿ, ಅವರು ಕೆಲವು ಗೊತ್ತಾದ ತತ್ತ್ವ ಧ್ಯೇಯಗಳ ಆಧಾರದ ಮೇಲೆ ತಮ್ಮ ಪ್ರತಿನಿಧಿಗಳನ್ನಾರಿಸುವುದು ಸಾಧ್ಯವಾಗುತ್ತದೆ. ಇದು "ಪಾರ್ಟಿಯ" ಉಪಕಾರ.

"ಪಾರ್ಟಿ" ಯಿಂದ ಅಪಕಾರವೂ ಉಂಟು. ಚುನಾವಣೆಯ ಕಾಲದಲ್ಲಿ ದೇಶಕ್ಕೆ ಸಹಾಯವಾದ "ಪಾರ್ಟಿಯು" ಚುನಾವಣೆ ಮುಗಿದ ಮೇಲೆ ದೇಶದ ಮೇಲೆ ಸವಾರಿ ಹತ್ತುತ್ತದೆ. "ಪಾರ್ಟಿಯ" ನಾಯಕರ ಪ್ರಾಬಲ್ಯದಿಂದ ಪಾರ್ಟಿಯ ಯಂತ್ರವು- ಹುತ್ತದೊಳಗಿನ ಹುತ್ತ ಅಥವಾ ಚಕ್ರದೊಳಗಡೆಯ ಚಕ್ರ ಎಂಬಂತೆ- ಸರಕಾರದೊಳಗಣ ಸರಕಾರವಾಗುತ್ತದೆ. ಪಾರ್ಟಿಯು ಗೀಚಿದ ಗೆರೆಯನ್ನು ಅದರ ಯಾವ ಮೆಂಬರೂ (ಸದಸ್ಯನೂ) ಮೀರುವಂತಿಲ್ಲ. ಹೊರಗೆ ಪ್ರಜೆಯ ಪ್ರತಿನಿಧಿಯಾದವನು ಶಾಸನಸಭೆಯೊಳಗೆ ಕಕ್ಷಿಯ ಕಿಂಕರನಾಗುತ್ತಾನೆ. ಅವನು ತನ್ನ ಮನಸ್ಸಾಕ್ಷಿಯಂತೆ ನಡೆಯದೆ ಸ್ವಪಕ್ಷನಾಯಕನ ಆಜ್ಞೆಯಂತೆ ನಡೆಯಬೇಕಾಗುತ್ತದೆ. ಅವನ ಸ್ವಾತಂತ್ರ್ಯಕ್ಕೆ ಅವನ ಕಕ್ಷಿಬಲವೇ ಮೃತ್ಯುವಾಗುತ್ತದೆ. ಹೀಗೆ ಪ್ರಜಾಪ್ರಭುತ್ವಕ್ಕಾಗಿ ಪ್ರಾರಂಭವಾದ ಏರ್ಪಾಟು ಪಕ್ಷಸಂಘಪ್ರಭುತ್ವವಾಗಿ ಪರಿಣಮಿಸುತ್ತದೆ. ಕಕ್ಷಿಯಿಲ್ಲದೆ ಪ್ರಜಾರಾಜ್ಯ ನಡೆಯದು: ಕಕ್ಷಿಯಿದ್ದರೆ ಅದು ದಾರಿತಪ್ಪುತ್ತದೆ. ಹೀಗೂ ಕಷ್ಟ, ಹಾಗೂ ಕಷ್ಟ.-ಈ ಕಷ್ಟವೇ ಪ್ರಜಾಧಿಪತ್ಯ ಪದ್ಧತಿಗೆ ಇರುವ ಗಂಡ.

## ಸಂಖ್ಯಾಧಿಕ್ಯದ ತೀರ್ಮಾನ

ವೋಟೆಂಬ ಇಷ್ಟ ಸೂಚನೆಯಲ್ಲಿ ಅಧಿಕ ಸಂಖ್ಯೆಯ ಅಭಿಮತ (ವರಣಾಂಕ)ಗಳು ಯಾವ ಸ್ಥಾನಾರ್ಥಿಗಳ (ಉಮೇದುವಾರರ) ಹೆಸರಿಗೆ ಬರುತ್ತವೆಯೋ ಅವರೇ ಗೆದ್ದವರು; ವೃಣೀತರು* ಅಥವಾ ಚುನಾವಣೆಯಲ್ಲಿ ಆರಿಸಲ್ಪಟ್ಟವರು. ಅವರೇ ಪ್ರಜಾ ಪ್ರತಿನಿಧಿಗಳು; ಅವರೇ ರಾಜ್ಯಭಾರದಲ್ಲಿ ಪ್ರತ್ಯಕ್ಷಭಾಗವುಳ್ಳವರು. ಆ ಪ್ರತಿನಿಧಿಗಳು ಒಟ್ಟು ಸೇರುವುದರಿಂದ ಆಗುವ ಸಭೆಯೇ ಶಾಸನಸಂಸ್ಥೆ. ಆ ಶಾಸನ ಸಭೆಯೇ ಸರಕಾರದ ಕಟ್ಟಡಕ್ಕೆ ಆಧಾರಸ್ತಂಭ. ದೇಶಹಿತಕ್ಕೆ ಏನೇನು ಆಗಬೇಕು, ಏನು ಆಗತಕ್ಕದ್ದಲ್ಲ, ಯಾವ ಕಾನೂನು ಕಾಯಿದೆಗಳು ಅವಶ್ಯ, ಎಂಥ ಕಂದಾಯ ತೆರಿಗೆಗಳು ಸರಿ, ಯಾವ ಕೆಲಸಗಳಿಗಾಗಿ ಹಣ ವೆಚ್ಚಮಾಡುವುದು ಯುಕ್ತ-ಈ ತೆರದ ನಾನಾ ಪ್ರಶ್ನೆಗಳನ್ನು ನಿರ್ಣಯಮಾಡತಕ್ಕದ್ದು ಶಾಸನಸಭೆ; ಮತ್ತು ತನ್ನ ನಿರ್ಣಯಗಳಿಗೆ ಸರಿಯಾಗಿ ರೂಪ ಕೊಟ್ಟು ಅವುಗಳನ್ನು ಫಲಕ್ಕೆ ತರಲು ಕಾರ್ಯಸಚಿವರನ್ನು ನಿಯಮಿಸತಕ್ಕದ್ದೂ, ಅವರ ರೀತಿ ನೀತಿಗಳ ಬಗ್ಗೆ ಮೇಲ್ವಿಚಾರಣೆ ನಡೆಸತಕ್ಕದ್ದೂ, ಅವಶ್ಯವಾದಾಗ ಮಂತ್ರಿಸಂಪುಟ ಬದಲಾಯಿಸತಕ್ಕದ್ದೂ ಸಹ ಶಾಸನಸಭೆ. ಹೀಗೆ ದೇಶದ ರಾಜ್ಯಸೂತ್ರಗಳೆಲ್ಲ ಪ್ರಜಾಪ್ರತಿನಿಧಿ ಬಿಂಬವಾದ ಶಾಸನಸಂಸ್ಥೆಯ ಕೈಯಲ್ಲಿ ನಿಂತಿರುತ್ತವೆ.

---

* ಇದು ಶುದ್ಧ ಸಂಸ್ಕೃತವಲ್ಲ. ಸಂಸ್ಕೃತದ ಅಪಭ್ರಂಶ. ಆದರೆ ಬಳಕೆಗೆ ಅನುಕೂಲ.

ಶಾಸನಸಭೆಯಲ್ಲಿರುವ ಆ ಪ್ರಜಾಪ್ರತಿನಿಧಿಗಳಾದರೋ, ವರಣಕರ್ತರಾದ ರಾಷ್ಟ್ರದ ಮಹಾಜನರ ಅಧಿಕಾರಕ್ಕೆ ಒಳಪಟ್ಟವರಾಗಿರುತ್ತಾರೆ. ತಮ್ಮ ಪ್ರತಿನಿಧಿಗಳ ನಡವಳಿಕೆಗಳನ್ನು ಸ್ವತಂತ್ರವಾಗಿ ವಿಮರ್ಶೆ ಮಾಡುವುದಕ್ಕೂ ಅವರಿಗೆ ಸಲಹೆಗಳನ್ನು ಕೊಟ್ಟು ಎಚ್ಚರಿಸುವುದಕ್ಕೂ ವರಣಕರ್ತರಿಗೆ (ಹಕ್ಕು) ಸ್ವೈರಾಧಿಕಾರವಿರುತ್ತದೆ; ಅಲ್ಲದೆ ಮುಂದಿನ ಚುನಾವಣೆಯ ಕಾಲದಲ್ಲಿ ಪ್ರತಿನಿಧಿಗಳ ವಿಷಯದಲ್ಲಿ ತಮ್ಮ ಮೆಚ್ಚಿಕೆಯನ್ನಾಗಲೀ ಅಸಮಾಧಾನವನ್ನಾಗಲಿ ಸೂಚಿಸುವುದಕ್ಕೆ ಅವರಿಗೆ ಅವಕಾಶವಿರುತ್ತದೆ. ಹೀಗೆ ರಾಜ್ಯದ ಸರ್ವಾಧಿಕಾರವು ಪ್ರಬುದ್ಧ ಪ್ರಜೆಯ ಸಮುದಾಯದಲ್ಲಿ ಜೀವಂತವಾಗಿರುತ್ತದೆ. ಅದೇ ಪ್ರಜಾಪ್ರಭುತ್ವ ಅಥವಾ "ಡೆಮಾಕ್ರಸಿ". ಅದೇ ಜವಾಬ್ದಾರಿ ಸರಕಾರ, ಅದೇ ಸ್ವರಾಜ್ಯ.

ಪ್ರಜಾಪ್ರಭುತ್ವವುಳ್ಳ- ಎಂದರೆ ಸ್ವರಾಜ್ಯವುಳ್ಳ -ಒಂದು ದೇಶದಲ್ಲಿ ಶಾಸನಸಂಸ್ಥೆಯು ತನ್ನ ಮಂತ್ರಿಸಂಪುಟವನ್ನು ಹೇಗೆ ನಿರ್ಮಾಣ ಮಾಡಬಹುದು ಮತ್ತು ಹೇಗೆ ಹದ್ದಿನಲ್ಲಿ ಇರಿಸಿಕೊಳ್ಳಬಹುದು -ಎಂಬ ವಿಚಾರಗಳಲ್ಲಿಯೂ ನಾಲ್ಕಾರು ಪದ್ಧತಿಗಳುಂಟು. ಇದರಲ್ಲಿ ಇಂಗ್ಲೆಂಡಿನ ಪದ್ಧತಿಯೇ ಒಂದು, ಅಮೆರಿಕದ್ದು ಬೇರೊಂದು, ಫ್ರಾನ್ಸಿನದು ಇನ್ನೊಂದು, ರಷ್ಯಾದ್ದು ಮತ್ತೊಂದು. ಆಯಾ ದೇಶದ ಸಂದರ್ಭಗಳಂತೆ ಆಯಾ ಸರಕಾರದ ರಚನೆ. ಆದರೆ ಪ್ರಜಾಶಕ್ತಿ ಮಾತ್ರ ಎಲ್ಲಕಡೆಯೂ ಮೇಲ್ಪಟ್ಟಿರತಕ್ಕದ್ದೇ.

ಸಮಸ್ತ ಇಂಡಿಯಕ್ಕೂ ಇಂಥ ಸರಕಾರದ ಕ್ರಮ ಅನ್ವಯಿಸಿದಲ್ಲಿ ಅದು ಸರ್ವಜನೀನ ಸ್ವರಾಜ್ಯ. ಮದರಾಸು ಅಧಿಪತ್ಯ, ಬೊಂಬಾಯಿ ಆಧಿಪತ್ಯ ಅಥವಾ ಮೈಸೂರು ಸಂಸ್ಥಾನ, ಹೈದರಾಬಾದು ಸಂಸ್ಥಾನ, ಇಂಥಾ ಭಾರತ ವಿಭಾಗಗಳಿಗೆ ಅದೇ ಪದ್ಧತಿ ಕೂಡಿದಷ್ಟು ಮಟ್ಟಿಗೆ ಅನ್ವಯಿಸಿದಾಗ ಅದು ಪ್ರಾದೇಶಿಕ ಸ್ವರಾಜ್ಯವೆನ್ನಿಸುತ್ತದೆ. ಒಂದೊಂದು ಜಿಲ್ಲೆಗೋ, ತಾಲ್ಲೂಕಿಗೋ ಅಥವಾ ಒಂದು ಪಟ್ಟಣಕ್ಕೋ, ಗ್ರಾಮಕ್ಕೋ ಅದೇ ಪದ್ಧತಿ ತಕ್ಕಮಟ್ಟಿಗೆ ಅನ್ವಯಿಸಿದರೆ ಅದು ಡಿಸ್ಟ್ರಿಕ್ಟುಬೋರ್ಡು, ಮುನಿಸಿಪಾಲಿಟಿ ಮುಂತಾದ (ಲೋಕಲ್ ಸೆಲ್ಫ್-ಗವರ್ನ್‌ಮೆಂಟ್) ಸ್ಥಳೀಯ ಸ್ವರಾಜ್ಯ ಎನ್ನಿಸಿಕೊಳ್ಳುತ್ತದೆ.

ಒಟ್ಟಿನ ಮೇಲೆ, ಪ್ರಜಾಜನರ ಅಭಿಪ್ರಾಯದಂತೆ,ಅವರ ಕ್ಷೇಮಕ್ಕೆ ಒಳಪಟ್ಟು, ಪ್ರತಿನಿಧಿಗಳ ಮೂಲಕ, ಆ ಪ್ರತಿನಿಧಿಮಂಡಲದ ಆಜ್ಞೆ ವಿಚಾರಣೆಗಳಲ್ಲಿ, ಉತ್ತರ ನಿರ್ಬಂಧ (ಜವಾಬ್ದಾರಿ) ವುಳ್ಳ ಕ್ರಮದಲ್ಲಿ ನಡೆಯುವ ಸರಕಾರವೇ ಸ್ವರಾಜ್ಯ.

# ಪ್ರಜಾರಾಜ್ಯಕ್ಕಿರುವ ಅಪಾಯಗಳು
# ಇಂಡಿಯಕ್ಕೆ ಅದು ಹೊಂದೀತೆ?

ಪ್ರಜಾರಾಜ್ಯ ಪದ್ಧತಿ ಇಂಡಿಯಾಕ್ಕೆ ಹೊಂದಲಾರದೆಂಬ ಸಂದೇಹ ಕೆಲವರಿಗೆ ಉಂಟು.ಆಂಗ್ಲೇಯ ರಾಜ್ಯ ವಿಚಾರಗಳಲ್ಲಿ ಮಹಾಪ್ರಾಜ್ಞನೆಂದು ಪ್ರಸಿದ್ಧನಾಗಿದ್ದ ಲಾರ್ಡ್ ಮಾರ್ಲೇ ಮಂತ್ರಿಯು ಈಗ್ಗೆ ಅರ್ಧ ಶತಮಾನದಷ್ಟು ಹಿಂದೆ- "ಕೆನಡಾ ದೇಶದ ಶೈತ್ಯದಲ್ಲಿ ಹಿತವಾಗುವ ತುಪ್ಪಟದ ಅಂಗರೇಖೆಯು ಇಂಡಿಯದ ಸುಡುಬಿಸಿಲಿನಲ್ಲಿ ಕೆಲಸಕ್ಕೆ ಬಾರದು" ಎಂಬ ಉಪಮಾನದಿಂದ ಇಂಡಿಯಕ್ಕೆ ಪ್ರಜಾರಾಜ್ಯ ಪದ್ಧತಿ ಹೊಂದಿಕೊಳ್ಳಲಾರದೆಂಬ ಸಂದೇಹವನ್ನು ವ್ಯಕ್ತಪಡಿಸಿದ್ದನು. ಮಹಮ್ಮದ್ ಆಲಿ ಜಿನ್ನಾ ಸಾಹೇಬರು ಅಂಥ ಸಂದೇಹವನ್ನು ಹಿಂದೂ ಜನಾಂಗದ ವಿಷಯದಲ್ಲಿ ಸೂಚಿಸಿದ್ದರು. ಆ ಬಗೆಯ ಸಂದೇಹವನ್ನು ಇಟ್ಟುಕೊಂಡವರು ಇನ್ನೂ ಅನೇಕರಿದ್ದಾರೆ. ಅದನ್ನು ನಾವು ಒಪ್ಪದಿದ್ದರೂ ಅದು ತೀರ ನಿಷ್ಕಾರಣವಾದ ಶಂಕೆಯೆಂದು ಹೇಳುವಂತಿಲ್ಲ.

ಪ್ರಜಾರಾಜ್ಯವೆಂಬುದು ಸಾರಾಂಶದಲ್ಲಿ ಒಂದು ಸಂಸ್ಥೆಯ ಹೆಸರಲ್ಲ; ಅದು ಒಂದು ವ್ಯವಸ್ಥಾಕ್ರಮದ ಹೆಸರಲ್ಲ; ಅದು ಒಂದು ಮನೋವೃತ್ತಿಯ ಹೆಸರು. ಅದು ಒಂದು ನೀತಿ ಭಾವನೆ, ಒಂದು ಬಗೆಯ ಜೀವನನಯ. ಆ ಮನೋಧರ್ಮ, ಆ ನಯದ ಭಾವನೆ, ಆ ಚಾಲು, – ಜನದಲ್ಲಿ ಸ್ವಾಭಾವಿಕವಾಗಿ ಇಲ್ಲದೆ ಹೋದರೆ ಪ್ರಜಾಪ್ರಾತಿನಿಧ್ಯದ ಸಂಸ್ಥೆ ಸಂಕೇತಗಳು ಎಷ್ಟೇ ಆಡಂಬರದವಾಗಿದ್ದರೂ ತಮ್ಮ ಉದ್ದೇಶವನ್ನು ನೆರವೇರಿಸಲಾರವು. ಅವು ತಿರುಳಿಲ್ಲದ ಕಾಯಂತೆ ಆಕಾರಮಾತ್ರದವಾಗಿ ರುಚಿಕರಗಳಾಗದೆ ನಿಂತಿರುತ್ತವೆ.

ನಮ್ಮ ಪ್ರತಿವಾದಿಗಳ ತರ್ಕ ಹೀಗೆ : ಪ್ರಜಾಪ್ರಾಧಾನ್ಯದ ಭಾವನೆ ಇಂಡಿಯದಲ್ಲಿ ಹುಟ್ಟಿ ಬೆಳೆದದ್ದಲ್ಲ. ಅದು ಇಲ್ಲಿಗೆ ಯೂರೋಪಿನಿಂದ ಬಂದದ್ದು. ಆ ಭಾವನೆಗೆ ಮೂಲವಾದದ್ದು ಪ್ರಜಾಜನದ ಐಕಮತ್ಯ ಮತ್ತು ಸರ್ವಸಮತ್ವ. ಹಿಂದೂ ಜನದಲ್ಲಾದರೋ ಮತಭೇದಗಳು, ಜಾತಿಭೇದಗಳು, ಭಾಷಾಭೇದಗಳು, ಕುಲಾಚಾರ ಭೇದಗಳು – ಈ ನಾನಾ ಭೇದಗಳ ಕಾರಣಗಳಿಂದ ಜನದಲ್ಲಿ ಐಕ್ಯಭಾವವಿಲ್ಲ; ಸಮಾಜವು ಹಳ್ಳ ತಿಟ್ಟುಗಳಿಂದ ವಿಷಮತಲವಾಗಿದೆ. ಇಂಥ ಸಮಾಜಕ್ಕೆ ತಕ್ಕದ್ದು ಏಕರಾಜಪ್ರಭುತ್ವ ಅಥವಾ ಏಕ ನಾಯಕಪ್ರಭುತ್ವ. ಈ ಜನ ದಂಡಸಾಧ್ಯರೇ ಹೊರತು ಪರಸ್ಪರ ಅನುನಯದ ಮಾರ್ಗಕ್ಕೆ ಯೋಗ್ಯರಲ್ಲ – ಈ ರೀತಿಯದು ಆಕ್ಷೇಪಣೆ. ಅದಕ್ಕೆ ನಮ್ಮ ಪ್ರತ್ಯುತ್ತರ ಹೀಗಿರುತ್ತದೆ:

1) ಇಂಗ್ಲೆಂಡಿನಲ್ಲಿ ಪ್ರಜಾಪ್ರಭುತ್ವದ ಸಂಪ್ರದಾಯ ಐನೂರು ಆರುನೂರು ವರ್ಷಗಳ ಹಿಂದಿನಿಂದ ಅನುಸ್ಯೂತವಾಗಿ ಬೆಳೆದುಕೊಂಡು ಬಂದಿರುವುದು ನಿಜ. ನಮ್ಮಲ್ಲಿ ಈಗ ಅದು ಹೊಸದೆಂಬುದೂ ನಿಜ. ಆದರೂ ಹೊಸದನ್ನು ಕಲಿತು ಸ್ವಂತ ಮಾಡಿಕೊಳ್ಳುವ ಶಕ್ತಿ ನಮಗಿಲ್ಲದಿಲ್ಲ. ಇಂಗ್ಲೆಂಡಿನಿಂದ ನಾವು ಆಧುನಿಕ (ಸಯನ್ಸ್) ವಿಜ್ಞಾನಶಾಸ್ತ್ರಗಳನ್ನೂ ಯಂತ್ರಶಿಲ್ಪವನ್ನೂ ವೈದ್ಯವಿದ್ಯೆಯನ್ನೂ ಆಂಗ್ಲಭಾಷಾಜ್ಞಾನವನ್ನೂ ಸಂಪಾದಿಸಿಕೊಂಡಿದ್ದೇವೆ. ಇವೊಂದೂ ನಮಗೆ ಹಿಂದಿನಿಂದ ಬಂದವಲ್ಲ. ಆದರೂ ನಮ್ಮ ವ್ಯಾಸಂಗ ಶ್ರದ್ಧೆಯಿಂದ ಅವನ್ನೆಲ್ಲ ನಮ್ಮವನ್ನಾಗಿ ಮಾಡಿಕೊಂಡಿದ್ದೇವೆ. ರೈಲು, ಮೋಟಾರು, ವಾಯುವಿಮಾನಗಳನ್ನೂ ವ್ಯಾಧಿಗೆ ಶಸ್ತ್ರ ಚಿಕಿತ್ಸೆಯನ್ನೂ ಈಗ ನಾವು ಅನ್ಯ ಸಹಾಯವಿಲ್ಲದೆಯೇ ನಡೆಸಿಕೊಳ್ಳಬಲ್ಲವರಾಗಿದ್ದೇವೆ. ಇಂಗ್ಲೆಂಡಿನ ರಾಜಕೀಯವೂ ಹಾಗೆಯೇ ನಮ್ಮ ಅಭ್ಯಾಸಕ್ಕೆ ಸಾಧ್ಯವಾಗತಕ್ಕದ್ದು.

2) ಪ್ರಜಾಪ್ರಭುತ್ವ ಪದ್ಧತಿಯಲ್ಲಿ ಭೂಗುಣಕ್ಕಾಗಲಿ ವಾಯುಗುಣಕ್ಕಾಗಲಿ ವಂಶ ಗುಣಕ್ಕಾಗಲಿ ರಕ್ತಗುಣಕ್ಕಾಗಲಿ ಸೇರಿದ ಅಂಶವೊಂದೂ ಇಲ್ಲ. ಅದು ಅಪೇಕ್ಷಿಸುವ ಗುಣ ಸಂಸ್ಕಾರವು ಸಮಸ್ತ ಮಾನವಲೋಕಕ್ಕೂ ಸಾಮಾನ್ಯವಾಗಿ ಆಗಬಹುದಾದದ್ದು. ಸುಖ-ದುಃಖ, ಸತ್ಯ-ಅಸತ್ಯ ಐಶ್ವರ್ಯ-ದಾರಿದ್ರ್ಯ, ರೋಗ-ಆರೋಗ್ಯ ಇವು ಹೇಗೆ ದೇಶ ಭೇದಕ್ಕೂ ವಂಶಭೇದಕ್ಕೂ ಒಳಪಡದೆ ಸರ್ವಸಾಧಾರಣವಾಗಿರುತ್ತವೆಯೋ ಪ್ರಜೆಯ ಅಧಿಕಾರಾಸಕ್ತಿಯೂ ಹಾಗೆಯೇ ಇರತಕ್ಕದ್ದು.ರಾಜ್ಯಾಸಕ್ತಿಯು ಮನುಷ್ಯ ಹೃದಯದಲ್ಲಿ ಪ್ರಕೃತಿಯು ನೆಟ್ಟಿರುವ ಬೀಜಗಳಿಂದ ಉದ್ಭವಿಸತಕ್ಕದ್ದು. ಆ ಬೀಜಗಳು ಕೆಲವು ಕಡೆ ಮೊದಲು ಮೊಳೆತಿರಬಹುದು, ಇನ್ನು ಕೆಲವು ಕಡೆ ಸ್ವಲ್ಪ ಕಾಲಾನಂತರ ಮೊಳೆಯ ಬಹುದು.ಮೊಳೆತ ಮೇಲೆ ಅದು ವಾತಾವರಣ ಪ್ರಭಾವದಿಂದ ಆಕಾರ ವ್ಯತ್ಯಾಸವನ್ನೂ ಪಡೆಯಬಹುದು. ಆದರೆ ಈ ಕ್ಷೇತ್ರವು ತಕ್ಕದ್ದಲ್ಲವೆನ್ನಲು ಕಾರಣವಿಲ್ಲ.

3) ಪ್ರಜಾಪ್ರಭುತ್ವದ ಮನೋಧರ್ಮ ನಮ್ಮಲ್ಲಿ ಅಪರೂಪವಾದದ್ದೂ ಅಲ್ಲ. ಹೀಗೆಂಬುದಕ್ಕೆ ನಾಲ್ಕು ದೊಡ್ಡ ನಿದರ್ಶನಗಳನ್ನು ತೋರಿಸಬಹುದು:

i) ಇಂಡಿಯಾದ ಮುಖ್ಯ ಕಸಬು ಭೂವ್ಯವಸಾಯ. ಬೇಸಾಯಕ್ಕೆ ಮುಖ್ಯವಾದದ್ದು ರೈತರಲ್ಲಿ ಪರಸ್ಪರ ಸಹಾಯಬುದ್ಧಿ. ನೆರೆಹೊರೆಯ ಸಹಾಯವಿಲ್ಲದೆ ಯಾವ ಬೇಸಾಯಗಾರನೂ ಒಂದು ದಿನವೂ ಬದುಕು ನಡೆಸಲಾರ. ಬಿತ್ತನೆಗೆ, ಕೊಯಿಲ್ಗೆ, ಕಳೆ ಕೀಳುವುದಕ್ಕೆ, ಬೆಳೆ ಶೇಖರಿಸುವುದಕ್ಕೆ ಅವನಿಗೆ ನಾಲ್ಕು ಮುಂದಿಯ ಒತ್ತಾಸೆ ಬೇಕೇ ಬೇಕು. ಈ ಅನ್ಯೋನ್ಯ ಆಶ್ರಯದ ನೀತಿಯ ಅಂಗೀಕಾರವೇ ಪ್ರಜಾರಾಜ್ಯದ ಮೂಲಗುಣ.

ii) ಸಂಮಿಳಿತ ಕುಟುಂಬದ ಪದ್ಧತಿ ಪ್ರಜಾರಾಜ್ಯದ ಮನೋಧರ್ಮಕ್ಕೆ ಪ್ರೋತ್ಸಾಹಕವಾದದ್ದು. ನಾಲ್ಕಾರು ಮಂದಿ ಅಣ್ಣ ತಮ್ಮಂದಿರುಗಳೂ ಅವರ ಮಕ್ಕಳು ಮೊಮ್ಮಕ್ಕಳುಗಳೂ ಒಂದೇ ಹೊಲದಲ್ಲಿ ದುಡಿದು, ಅಡಿಗೆಯುಂಡು, ಒಂದೇ ಮಾಳಿಗೆಯ ನೆರಳಿನಲ್ಲಿ ಬದುಕಬೇಕಾಗಿರುವ ಸಂದರ್ಭದಲ್ಲಿ ಅವರ ಅನ್ಯೋನ್ಯ ಮಮತೆಯೂ ಸಮತೆಯ ಅಭ್ಯಾಸವೂ ದೃಢಪಡುತ್ತವೆ. ಚಳಿಬಿಸಿಲುಗಳನ್ನೂ ಉಪವಾಸ ಔತಣಗಳನ್ನೂ ಚಿಂತೆ ಸಮ್ಮುದಿಗಳನ್ನೂ ಅವರು ಸಮಸಮವಾಗಿ ಹಂಚಿಕೊಳ್ಳಬೇಕಾಗುತ್ತದೆ. ಒಬ್ಬರು ಇನ್ನೊಬ್ಬರ ಕಷ್ಟದಲ್ಲಿ ಭಾಗ ತೆಗೆದುಕೊಳ್ಳುವ ಮನೋಭಾವ ಬೆಳೆಯುತ್ತದೆ. ಈ ಮನೋಭಾವವೇ ಪ್ರಜಾರಾಜ್ಯದ ಮೂಲ. ವ್ಯವಸಾಯವು ಅವಿಭಕ್ತ ಕುಟುಂಬ ಪದ್ಧತಿಯನ್ನು ಪೋಷಿಸುತ್ತದೆ; ಅವಿಭಕ್ತ ಕುಟುಂಬದ ಆತ್ಮ ಸಂಯಮಾಭ್ಯಾಸವು ಪ್ರಜಾರಾಜ್ಯವನ್ನು ಪೋಷಿಸಬಲ್ಲದು.

iii) ಪಂಚಾಯತಿ ಪದ್ಧತಿ ನಮ್ಮ ದೇಶದಲ್ಲಿ ಆರ್ಷೇಯವಾಗಿ, ಅನೂಚಾನವಾಗಿ ಬಂದದ್ದು. ಇದು ಪ್ರಜಾರಾಜ್ಯದ ಸ್ವಾಭಾವಿಕವಾದ ಮೂಲರೂಪ. ಊರೊಟ್ಟಿನ ಕೆಲಸಗಳು,ಗ್ರಾಮಕೃತ್ಯದ ವ್ಯವಹಾರಗಳು, ಕುಲಾಚಾರದ ಕಲಹಗಳು, ಗುಡಿ ಛತ್ರಗಳ ಆಡಳಿತಗಳು— ಇವೆಲ್ಲ ಪಂಚಾಯತಿಯಿಂದ ತೀರ್ಮಾನವಾಗುವುದು ಸಾವಿರಾರು ವರ್ಷಗಳಿಂದ ನಮಗೆ ರೂಢಿಯಾಗಿರುವ ಪದ್ಧತಿ. ಇಂಡಿಯಾದ ಈ ಪದ್ಧತಿಯನ್ನು ನೋಡಿ ಪಾಶ್ಚಾತ್ಯರು ಬೆರಗುಪಟ್ಟು, ಭೂಪ್ರಪಂಚದಲ್ಲೆಲ್ಲ ಇಂಡಿಯವೇ ಬಹು ಹಳೆಯ ಜನತಾ ರಾಜ್ಯವೆಂದು ಹೇಳಿದ್ದಾರೆ. ಪಂಚಾಯತಿಯೆಂದರೆ ಊರಿನಲ್ಲಿ ದೊಡ್ಡವರೆನಿಸಿಕೊಂಡ ನಾಲ್ಕು ಮಂದಿಯ ಮಾತಿಗೆ ಎಲ್ಲರೂ ತಲೆಬಾಗುವುದು ಎಂದರ್ಥ. ಪಾರ್ಲಿಮೆಂಟೆಂಬುದೂ ವಾಸ್ತವವಾಗಿ ಅಷ್ಟೇ ತಾನೇ?

iv) ಧರ್ಮ ಸಂದೇಹಗಳನ್ನು ವಿದ್ವತ್ಪರಿಷತ್ತು ನಿರ್ಣಯಮಾಡಬೇಕೆಂಬುದು ವೇದಸ್ಮೃತಿಗಳ ಕಾಲದಿಂದ ಬಂದಿರುವ ಅಭಿಪ್ರಾಯ. ಆ ಪರಿಷತ್ತಿನಲ್ಲಿ ಎಂಥವರಿರಬೇಕು, ಅದು ಹೇಗೆ ಕೆಲಸಮಾಡಬೇಕು ಎಂಬ ನಿಯಮಗಳನ್ನು ಧರ್ಮಶಾಸ್ತ್ರಗಳು ಹೇಳಿವೆ. ಸಮರ್ಥರಾದ ಮಹಾಜನರ ವಾಕ್ಯವು ಸರ್ವರಿಗೂ ಮಾನ್ಯವೆಂಬುದು ಇದರಿಂದಲೂ ದೃಢಪಡುತ್ತದೆ. ಪ್ರತಿನಿಧಿವರಣ, ಪಾರ್ಲಿಮೆಂಟಿನ ನಿರ್ಣಯ–ಎಂಬ ಪ್ರಜಾ ರಾಜ್ಯಸೂತ್ರಗಳ ತಾತ್ಪರ್ಯ ಅದೇ ಅಲ್ಲವೇ?

4) ಈಗಿನ ಇಂಡಿಯದ ರಾಜ್ಯವು ಕೇವಲ ಲೌಕಿಕ (ಸೆಕ್ಯುಲರ್) ರಾಜ್ಯವಾದದ್ದರಿಂದ ಮತಭೇದ, ಜಾತಿಭೇದಗಳ ಪ್ರಸಕ್ತಿ ಅದಕ್ಕೆ ಬೇಕಾದದ್ದಲ್ಲ. ಈ ರಾಜ್ಯವು ಮತಕ್ಕಾಗಲಿ ಜಾತಿಗಾಗಲಿ ವಿರೋಧಿಯಲ್ಲ, ಅಭಿಮಾನಿಯೂ ಅಲ್ಲ. ಈ ರಾಜ್ಯವು ಕೇವಲ

ರಾಜಕೀಯ ವಿಚಾರಗಳಲ್ಲಿ ಕುಲ ಮತ ಜಾತಿಗಳ ಬಗೆಗೆ ತಟಸ್ಥವಾಗಿರತಕ್ಕದ್ದು. ಕುಲ ಮತ ಜಾತಿಗಳು ಏನಿದ್ದರೂ ಖಾಸಗೀ ವಿಷಯಗಳು. ಪ್ರತಿಯೊಬ್ಬ ವ್ಯಕ್ತಿಯೂ ಅವನ ಖಾಸಗಿ ಇಷ್ಟದಂತೆ ಕುಲ ಮತ ಜಾತಿಗಳನ್ನಿಟ್ಟುಕೊಳ್ಳುವುದಕ್ಕೂ ಬಿಟ್ಟುಬಿಡುವುದಕ್ಕೂ ಸ್ವತಂತ್ರನಿರುತ್ತಾನೆ. ವ್ಯಕ್ತಿಯ ಈ ಸ್ವಾತಂತ್ರ್ಯವನ್ನು - ವ್ಯಕ್ತಿಸಮೂಹಗಳ ಇಂಥ ಸ್ವಾತಂತ್ರ್ಯವನ್ನು - ಕಾಪಾಡಿಕೊಳ್ಳುವಷ್ಟರಮಟ್ಟಿಗೆ ರಾಜ್ಯವು ಬಾಧ್ಯಪಟ್ಟಿರುತ್ತದೆ. ಸಾರ್ವಜನಿಕ ನೀತಿಗೂ ನೆಮ್ಮದಿಗೂ ಭಂಗಬಾರದಂತೆ ವ್ಯಕ್ತಿಗಳ ಕುಲ ಮತ ಜಾತಿ ಸ್ವಾತಂತ್ರ್ಯವನ್ನು ಉಳಿಸುವುದರ ಹೊರತು ಈ ವಿಚಾರದಲ್ಲಿ ರಾಜ್ಯಕ್ಕೆ, ಎಂದರೆ ಸರಕಾರಕ್ಕೆ ಬೇರೆ ಕರ್ತವ್ಯವಿಲ್ಲ. ಇಂಥ ಶುದ್ಧ ಲೌಕಿಕ ರಾಜ್ಯದಲ್ಲಿ - ಶುದ್ಧ ರಾಜಕೀಯ ವಿಚಾರಗಳಲ್ಲಿ - ಸಮಸ್ತ ವ್ಯಕ್ತಿ ಜನರೂ ತಮ್ಮ ತಮ್ಮ ಕುಲ ಮತ ಜಾತಿ ಭೇದಗಳನ್ನು ಮನೆಯೊಳಗಿರಿಸಿ, ಸಾರ್ವಜನಿಕ ಕ್ಷೇತ್ರದಲ್ಲಿ ಏಕಭಾವದಿಂದಲೂ ಸಮಭಾವದಿಂದಲೂ ನಡೆದುಕೊಳ್ಳುವುದು ಕಷ್ಟವೇನೂ ಅಲ್ಲ.

ಹೀಗೆ ಭಾರತೀಯ ಜನದ ಮನೋವೃತ್ತಿಗೂ ಪ್ರಜಾರಾಜ್ಯದ ಪದ್ಧತಿಗೂ ಪರಸ್ಪರ ವಿರೋಧವಾದ ಸಂಗತಿ ನೈಜವಾಗಿ ಯಾವುದೂ ಕಾಣುವುದಿಲ್ಲ.

ಆದರೆ ಬ್ರಿಟಿಷರ ಕಾಲದಿಂದೀಚೆಗೆ ಹುಟ್ಟಿಕೊಂಡ ಕೆಲವು ಸಂದರ್ಭಗಳ ದೆಸೆಯಿಂದ ನಮ್ಮ ಜನದ ಮನಸ್ಸು ಹಿಂದೆ ಒಂದಾಗಿದ್ದದ್ದು ಈಗ ನಾಲ್ಕಾಗಿ ಒಡೆದಿದೆ. ಜಾತಿ ಮತ ವೈಷಮ್ಯಗಳೂ ತತ್ಸಂಬಂಧದ ದ್ವೇಷಾಸೂಯೆಗಳೂ ಪಟಕೃತ್ರಿಮಗಳೂ ಬೆಳೆದುಕೊಂಡಿವೆ. ರಾಜಾಸ್ಥಾನಗಳಲ್ಲಿಯೂ ಹೊಗಳಾಯಿ ದರ್ಬಾರುಗಳಲ್ಲಿಯೂ ಅಧಿಕಾರಾನುಗ್ರಹ ಸಂಪಾದನೆಗಾಗಿ ನಡೆಯುತ್ತಿದ್ದ ಮುಖಸ್ತುತಿ ಕಪಟಕೋಟೋಪಾಯಗಳ ಅಭ್ಯಾಸ ನಮ್ಮ ಜನದಲ್ಲಿ ಪ್ರಬಲಿಸಿದೆ. ಈ ಕಾರಣಗಳಿಂದ ಪ್ರಜಾರಾಜ್ಯಕ್ಕೆ ಬೇಕಾದ ಮನಸ್ಸಿದ್ಧತೆ ನಮಗೆ ಈಗ ಸಾಲದೆ ಹೋಗಿದೆ.

ಪ್ರಜಾರಾಜ್ಯ ಪದ್ಧತಿ ಎಲ್ಲಾ ರಾಜ್ಯ ಪದ್ಧತಿಗಳಿಗಿಂತಲೂ ಕಷ್ಟವಾದದ್ದು. ಅದನ್ನು ಚೆನ್ನಾಗಿ ನಿರ್ವಹಿಸಲು ಜನಕ್ಕೆ ಒಂದು ವಿಶೇಷವಾದ ನೀತಿ ಸಂಸ್ಕಾರವೂ ಬುದ್ಧಿ ಸಂಸ್ಕಾರವೂ ಅವಶ್ಯ. ಪ್ರಜಾರಾಜ್ಯ ಪದ್ಧತಿ ಕಷ್ಟದ ಪದ್ಧತಿಯಾಗಿರುವುದು ಅದಕ್ಕೆ ಹೊಸಬರಾದ ನಮಗೆ ಮಾತ್ರವೇ ಅಲ್ಲ.ಪ್ರಪಂಚದಲ್ಲಿ ಎಲ್ಲೆಲ್ಲಿಯೂ ಅದು ಕಷ್ಟವಾದದ್ದೇ. ಇಂಗ್ಲೆಂಡನ್ನು ಬಿಟ್ಟರೆ ಯೂರೋಪ್ ಖಂಡದಲ್ಲಿ ಎಲ್ಲಿಯೂ ಅದು ಹೆಚ್ಚು ಯಶಸ್ವಿಯಾಗಿಲ್ಲ. ಅದು ಯಶಸ್ವಿಯಾಗಬೇಕಾದರೆ ಇಂಗ್ಲಿಷ್ ಜನದ ಕೆಲವು ದೊಡ್ಡ ಗುಣಗಳನ್ನು ನಾವು ಅನುಸಂಧಾನಮಾಡಬೇಕು. ಅವುಗಳಲ್ಲಿ ಮುಖ್ಯವಾದವು ಇವು:

1.ಸಾರ್ವಜನಿಕದೃಷ್ಟಿ. 2.ಭಿನ್ನಾಭಿಪ್ರಾಯಸಹನ 3.ಯಾವುದರಲ್ಲೂ ಅತ್ಯರ್ಥವಾದಕ್ಕೂ ವೀರಸಾಹಸಕ್ಕೂ ಹೋಗದೆ ಕೂಡಿದಮಟ್ಟಿಗೂ ಮಧ್ಯಮಮಾರ್ಗದಲ್ಲಿರುವುದು 4.ಪ್ರಕೃತತತ್ಪರವಾದ ಬುದ್ಧಿ. ಈ ನಾಲ್ಕರಲ್ಲಿ ಯಾವ ಒಂದು ಕುಂದಾದರೂ ಪ್ರಜಾರಾಜ್ಯದ ಹದ ಕೆಟ್ಟು ಹೋದೀತು.

ಪ್ರಜಾಪ್ರಭುತ್ವವೆಂಬುದು ದೊಂಬಿಯ ದವಲತ್ತಾಗಬಾರದಷ್ಟೇ?

ಮನುಷ್ಯನ ಪ್ರತಿಯೊಂದು ಕಾರ್ಯಯೋಜನೆಯಲ್ಲಿಯೂ ಅದಕ್ಕೆ ಪೋಷಕವಾದ ಕಾರಣಗಳು ಅಡಗಿಕೊಂಡಿರುವಂತೆ ನಾಶನ ಕಾರಣಗಳೂ ಅಡಗಿಕೊಂಡಿರುತ್ತವೆ. ಶರೀರಕ್ಕೆ ಬಲಕಾರಿಯಾದ ರಕ್ತದ ಉತ್ಪತ್ತಿಯಾಗುವ ಜಠರಕೋಶದಲ್ಲಿಯೇ ದುರ್ಬಲಕಾರಿಯಾದ ಮಲದ ಉತ್ಪತ್ತಿಯೂ ಆಗುತ್ತದೆ. ಈ ದುರ್ಲಕ್ಷಣವು ರಾಷ್ಟ್ರ ಶರೀರಕ್ಕೂ ತಪ್ಪಿದ್ದಲ್ಲ-ಪ್ರಜಾರಾಜ್ಯವನ್ನು ಕೂಡ ಅದು ಬಿಟ್ಟಿದ್ದಲ್ಲ.

ರಾಜಾಧಿಕಾರವು ದೈವದತ್ತವೆಂಬ ಇಂಗ್ಲಿಷ್ ದೊರೆಗಳ ವಾದವನ್ನು ಲೋಕ ಒಪ್ಪಿಕೊಳ್ಳಲಿಲ್ಲ. ಪ್ರಜಾಧಿಕಾರವಾದರೂ ದೈವದತ್ತವೆಂದು ಒಪ್ಪಿಕೊಳ್ಳಬೇಕಾದದ್ದಿಲ್ಲ. ಜನ ವಾಕ್ಯವೇ ದೈವವಾಕ್ಯವೆಂಬ ವಾದವೂ ಯೂರೋಪಿನಲ್ಲಿ – ವಿಶೇಷವಾಗಿ ಫ್ರಾನ್ಸಿನಲ್ಲಿ-ಒಂದು ಕಾಲದಲ್ಲಿ ಎದ್ದಿತ್ತು. ಆದರೆ ರಾಜವಾಕ್ಯದಲ್ಲಿಯೂ ಅವಿವೇಕ ಪ್ರಮಾದಗಳಿರಬಹುದೆಂಬುದನ್ನು ಚರಿತ್ರೆ ತೋರಿಸಿಕೊಟ್ಟಿದೆ. (Vox populi vox Dei) ಪ್ರಜಾಮುಖವು ರಾಜಮುಖಕ್ಕಿಂತ ಹೆಚ್ಚು ಪವಿತ್ರವೆಂಬ ಭರವಸೆಯೇನೂ ಇಲ್ಲ.

## ಸಾಕ್ರಟೀಸನ ಗತಿಯ ನೀತಿಪಾಠ

ಸುಮಾರು 2,400 ವರ್ಷಗಳ ಹಿಂದೆ ಗ್ರೀಸ್ ದೇಶದ ಅಥೆನ್ಸ್ ನಗರವು ಪ್ರಜಾರಾಜ್ಯವಾಗಿತ್ತು. ಆಗ ಅಲ್ಲಿ ಲೋಕಪ್ರಸಿದ್ಧನಾದ ತತ್ತ್ವವಿಚಾರಿ ಸಾಕ್ರಟೀಸನು ಬದುಕಿದ್ದನು. ಪ್ರಜಾರಾಜ್ಯದ ಮುಖ್ಯ ಕಾರ್ಯಸ್ಥಾನವು ರಾಷ್ಟ್ರಕಜನ ಸಭೆಯಷ್ಟೆ? ಆ ಸಭೆಯಲ್ಲಿ ಪರಿಣಾಮಕಾರಿಗಳಾಗುವ ಶಕ್ತಿಗಳು ವಾಗ್ಧೋರಣೆ ಮತ್ತು ವಾದಚಮತ್ಕಾರ. ಆದಕಾರಣ ಈ ಶಕ್ತಿಗಳನ್ನು ಸಂಪಾದಿಸಿಕೊಳ್ಳಲು ಅಥೆನ್ಸಿಗರು ಬಹುಮಂದಿ ಆಶೆಪಡುತ್ತಿದ್ದರು. ಅವರ ಆ ಆಶೆಯನ್ನು ಪೂರೈಸಿಕೊಡುವುದಾಗಿ ಹೇಳಿ ಅದರಿಂದ ಜೀವನ ಸಂಪಾದಿಸಿಕೊಳ್ಳಲು ಪಂಡಿತ ವೇಷಧಾರಿಗಳಾದ ವಿದ್ಯಾವಣಿಕ್ಕರು ಅಲ್ಲಿ ತಕ್ಕಷ್ಟು ಮಂದಿ ಇದ್ದರು. ಈ ಜ್ಞಾನಾಭಾಸ ವಿಕ್ರಯಿಗಳಿಗೆ "ಸೋಫಿಸ್ಟ್" ಎಂದು ಹೆಸರು. ಸಾಕ್ರಟೀಸನು ಸತ್ಯವಂತನಾದ ಜಿಜ್ಞಾಸುವಾಗಿದ್ದ ಕಾರಣ ಅವನು ಆ ಜ್ಞಾನನಟರಿದ್ದ ಸ್ಥಳಗಳಿಗೆ ಹೋಗಿ ಅವರ ವಾಗಾಡಂಬರದ ನೀರ್ಗುಳ್ಳೆಗಳನ್ನು ತನ್ನ ವಿಮರ್ಶನೆಯ ಕೋಲ್ಮೊನೆಯಿಂದ ಚುಚ್ಚುತ್ತಿದ್ದನು. ಇದರಿಂದ ಅವರು ಮುಚ್ಚಿಟ್ಟುಕೊಂಡಿದ್ದ ಅಜ್ಞಾನ ಬಯಲಿಗೆ ಬಿದ್ದು, ಅವರ ಹೆಮ್ಮೆ ಮುರಿದು, ಅವರ ಅನ್ನಕ್ಕೆ ಸೊನ್ನೆ ಬೀಳುವಂತೆ ತೋರುತ್ತಿತ್ತು. ಈ ಶತ್ರುವನ್ನು ಹೇಗಾದರೂ ಮುರಿಯಬೇಕೆಂದು ಆ

ಕೃತರ್ಕವಿದ್ವಾಂಸರು ಸಂಚು ನಡೆಸಿ, ಸಾಕ್ರಟೀಸನ ಮೇಲೆ ಅವನು ದೈವದೂಷಕನೆಂದೂ ದೋಷ ಪ್ರಚಾರಿಯೆಂದೂ ನ್ಯಾಯಸ್ಥಾನದಲ್ಲಿ ಅಪರಾಧವನ್ನಾರೋಪಣೆಮಾಡಿಸಿದರು. ಆ ನ್ಯಾಯಸ್ಥಾನವೂ ಪ್ರಜಾಸಭೆಯೇ.ಆ ಸಭೆ ವಿಚಾರಣೆ ನಡೆಸಿ ಸಾಕ್ರಟೀಸನಿಗೆ ಮರಣದಂಡನೆಯನ್ನು ವಿಧಿಸಿತು. ಆ ವಿಚಾರಣೆಯಲ್ಲಿ ಸಾಕ್ರಟೀಸನು ಕೊಟ್ಟ ಹೇಳಿಕೆಯನ್ನು ಅರ್ಥಮಾಡಿಕೊಳ್ಳುವ ಶಕ್ತಿ ಆ ಸಭೆಗೆ ಇಲ್ಲದೆಹೋಯಿತು. ಪೂರ್ವಾಭಿಮಾನಗಳಿಗೂ ಪೂರ್ವಾಗ್ರಹಗಳಿಗೂ ವಶರಾಗಿದ್ದ ಆ ಬಹುಮಂದಿಯ ಅಜ್ಞಾನವು ಜ್ಞಾನಿಯಾದೊಬ್ಬನನ್ನು ಕೊಂದುಹಾಕಿತು. ಕೈ ಮಿಂಚಿಹೋದ ಮೇಲೆ ಲೋಕವು ತನಗೆ ತಾನು ಮಾಡಿಕೊಂಡಿದ್ದ ನಷ್ಟವನ್ನು ಕಂಡುಕೊಂಡು, ಅಂದಿನಿಂದ ದುಃಖಿಸುತ್ತಿದೆ. ಇದು ಪ್ರಜಾ ರಾಜ್ಯ ಪ್ರೇಮಿಗಳಿಗೆ ಎದೆ ಚುಚ್ಚುವ ಎಚ್ಚರಿಕೆ. ಪ್ರಜಾರಾಜ್ಯವೇನೂ ಸಾಧುಸಂತರ ರಾಜ್ಯವಲ್ಲ.

ಸೋಫಿಸ್ಟರ ಪ್ರಾಬಲ್ಯದಿಂದ ಅಥೆನ್ಸಿನ ಜನದ ಬುದ್ಧಿಯೆ ವಕ್ರವಾಗಿತ್ತು. ಜ್ಞಾನ ವರ್ತಕರ ಕುತರ್ಕವಿತಂಡಗಳೂ ಅರ್ಥಹೀನವಾದ ಶಬ್ದಜಾಲವೂ ಅಥೆನ್ಸಿನ ಜನಕ್ಕೆ ಅಭ್ಯಾಸವಾಗಿಬಿಟ್ಟದ್ದರಿಂದ ರಾಷ್ಟ್ರಕ ಸಭೆಯಲ್ಲಿ ವಿಚಾರ ಕ್ರಮವು ಕೆಟ್ಟು, ಭಾವೋನ್ನತಿ ತಪ್ಪಿಹೋಗಿ, ಅದರ ನಿರ್ಣಯಗಳು ರಾಜ್ಯಕ್ಕೆ ಹಿತಕಾರಿಯಾಗದೆಹೋದವು. ಸಾಕ್ರಟೀಸನಿಗೆ ಆದ ಗತಿಯು ರಾಜ್ಯಶರೀರದಲ್ಲೆಲ್ಲ ವ್ಯಾಪಿಸಿದ್ದ ಅಂತರಂಗವ್ಯಾಧಿಯ ಒಂದು ಹೆಗ್ಗುರುತು ಮಾತ್ರ. ಮನಸ್ಸಿನ ಪ್ರಮಾದಪರವಶತೆಯೇ ಆ ವ್ಯಾಧಿ.

ಗತಾನುಗತಿಕೋ ಲೋಕಃ
ನ ಲೋಕಃ ಪಾರಮಾರ್ಥಿಕಃ।

(ಜನಸಾಮಾನ್ಯವು ಹಿಂದಿನಂತೆ ನುಗ್ಗುತ್ತದೆ; ಅದು ಬುದ್ಧಿಮುಟ್ಟಿ ಆಲೋಚಿಸಿ ತತ್ತ್ವವನ್ನು ಕಾಣಬಲ್ಲದ್ದಲ್ಲ.)

ಇದನ್ನು ಸಾಕ್ರಟೀಸನ ಶಿಷ್ಯ ಪ್ಲೇಟೋ ಕಂಡುಕೊಂಡಿದ್ದನು. ಆ ಅನುಭವದ ನೋವಿನಿಂದಲೇ ಅವನು ಒಂದು ಆದರ್ಶರಾಜ್ಯದ ವ್ಯವಸ್ಥೆ ಎಂಥಾದ್ದೆಂದು ನಿರೂಪಿಸುವ ಯೋಚನೆ ಮಾಡಿ, ಆ ಉದ್ದೇಶಕ್ಕೆ ತನ್ನ ಲೋಕೋತ್ತರವಾದ ಪ್ರತಿಭೆಯನ್ನು ವಿನಿಯೋಗಿಸಿದನು. ಆ ಪ್ಲೇಟೋವಿನ ಶಿಷ್ಯ ಅರಿಸ್ಟೋಟಲನು ಅದೇ ಉದ್ದೇಶವನ್ನೇ ಮುಂದುವರಿಸಿ, ಒಳ್ಳೆಯ ರಾಜ್ಯ ವ್ಯವಸ್ಥೆ ಎಂಥದೆಂಬುದನ್ನು ತೋರಿಸಿಕೊಡಲು ಹೊರಟನು. ಅವನೂ ಕೇವಲ ಪ್ರಜಾವಾದಿಯಲ್ಲ. ರಾಜಕೀಯದಲ್ಲಿ ಜ್ಞಾನಸಂಸ್ಕಾರ ಪಡೆಯ ಬೇಕೆನ್ನುವವರಿಗೆ ಪ್ಲೇಟೋ-ಅರಿಸ್ಟೋಟಲ್‌ಗಳ ಗ್ರಂಥಗಳಿಗಿಂತ ಉತ್ತಮವಾದ ಮಾರ್ಗದೀಪಿಕೆಯಿಲ್ಲ.

ಪಂಗಡದ ಕೈಗೆ ಸಿಕ್ಕಿ ಹೋಗುವಂತಾಗಬಹುದು. ಇದು ಒಂದೆರಡು ಗುಂಪುಗಳವರು ಒಟ್ಟು ಕೂಡಿ ನಡೆಸುವ ಸಂಚುಕೂಟದ ಸರ್ವಾಧಿಕಾರದ ಮೂಲಕವಾದರೂ ಆಗಬಹುದು; ಅಥವಾ ಧನಬಲ, ಪ್ರಭಾವಬಲಗಳ ಮೂಲಕವಾದರೂ ಆಗಬಹುದು.

5) ಸ್ವೇಚ್ಛಾಹಸ್ತಕ್ಷೇಪ: ರಾಜ್ಯವು ಸ್ವಸ್ಥ ರಾಜ್ಯ (ವೆಲ್ ಫೇರ್ ಸ್ಟೇಟ್, Welfare State) ಎಂಬ ಹೆಸರನ್ನಿಟ್ಟುಕೊಂಡು ತನಗೆ ಅವಶ್ಯ ಸಂಬಂಧವಿಲ್ಲದ ವ್ಯಕ್ತಿ ಜೀವನದ ವಿಚಾರಗಳಿಗೆ ಪ್ರವೇಶಿಸಬಹುದು. ಇದು ಮುಂದಿನ ಹೇರೊತ್ತಾಯವು ಜನ ಮನುಷ್ಯನನ್ನು ಅದುಮಿಡಬಹುದು. ಆದ್ದರಿಂದ ಜನರ ವ್ಯಕ್ತಿಸ್ವಾತಂತ್ರ್ಯಗಳು ಇಂಗಿ ಬತ್ತಿಹೋಗಬಹುದು.

6) ಅತ್ಯಧಿಕಾರ ಸ್ಥಾಪನೆ: ಶಾಸನಸಂಸ್ಥೆಯು ತನ್ನ ಪರಿಪಾಲನೆಗೆ ಒಪ್ಪಿಸಿರುವವನ್ನು ದೊಡ್ಡ ದೊಡ್ಡ ಅಧಿಕಾರಸ್ಥಾನಗಳನ್ನು ಕಾರ್ಯಾಂಗಕ್ಕೆ (ಎಕ್ಸಿಕ್ಯುಟಿವ್) ಎಂದರೆ ಮಂತ್ರಿಸಂಸ್ಥೆಗೆ ಒಪ್ಪಿಸಿಬಿಡಬಹುದು. ಹಾಗಾದಾಗ ಆಡಳಿತದ ಸೂಕ್ಷ್ಮ ವಿಚಾರಣೆಗಳು ಶಾಸನಸಂಸ್ಥೆಯಿಂದ ಸಾಂಗವಾಗಿ ನಡೆಯದೆಹೋಗಿ, ಸರಕಾರವು ಉತ್ತರಬಂಧನ (ಜವಾಬ್ದಾರಿ) ಸೂತ್ರದಿಂದ ಸುಲಭವಾಗಿ ತಪ್ಪಿಸಿಕೊಂಡು, ವಾಸ್ತವವಾಗಿ ನಿರಂಕುಶವಾಗಬಹುದು.

7) ಪಕ್ಷ ಕಲಹ ಮನೋವೃತ್ತಿ: ಜಗಳಗಂಟತನವೂ ಜಂಭಗಾರಿಕೆಯೂ ಕೆಲವರಿಗೆ ಹುಟ್ಟುಗುಣಗಳಾಗಿ ಬಂದಿರುತ್ತವೆ. ಇಂಥವರು ರಾಜಕೀಯಕ್ಕೆ ಬಂದರೆ ಪಕ್ಷಮತ್ಸರ ಮೂರ್ತಿಭವವಾಗುತ್ತದೆ. ಅವರು ಎಲ್ಲೆಲ್ಲಿಯೂ ವಿರೋಧ ಕಾರಣಗಳನ್ನೇ ಹುಡುಕುತ್ತಿರುತ್ತಾರೆ, ಭೇದಾವಕಾಶಗಳನ್ನೇ ಬೆಳೆಸುತ್ತಿರುತ್ತಾರೆ. ಉತ್ತರಬದ್ಧರಾಜ್ಯಕ್ಕೆ ಪಕ್ಷಘಟನೆ ಅವಶ್ಯವೆಂಬುದನ್ನು ನೋಡಿದ್ದೇವೆ. ಆದರೆ ಆ ಪಕ್ಷಶಕ್ತಿ ಪ್ರವರ್ತನೆಗೂ ಒಂದು ಮಿತಿಯಿರಬೇಕು, ಅದು ವಿಪರೀತವಾಗಬಾರದು. ಪಕ್ಷಪಾತದಿಂದ ಜನತೆಯ ಜನಮತಕ್ಕೆ ಹಾನಿ ತರುವಷ್ಟರಮಟ್ಟಿಗೆ ಇರಬಾರದು; ಏಕೆಂದರೆ "ರಾಜ್ಯ" ಶಬ್ದದ ಅರ್ಥವಿವರಣೆಯಲ್ಲಿ ಪ್ರಜೆಯ ಒಳ್ಳಿತೇ ರಾಜ್ಯಕ್ಕೆ ಕಳಸವು ಎಂಬುದನ್ನು ನೋಡಿದ್ದೇವೆ. ಈ ಒಳ್ಳಿತಿಗೆ ಹಾನಿಬಾರದಂತೆ ಪಕ್ಷಶಕ್ತಿಗಳು ನಡೆಯಬೇಕಾದರೆ—

i) ಅವು ಸಂಖ್ಯೆಯಲ್ಲಿ ಎರಡಕ್ಕೆ ಕಡಿಮೆಯಾಗದೆ ಮೂರುನಾಲ್ಕಕ್ಕೆ ಹೆಚ್ಚಾಗದೆ ಇರಬೇಕು. ಪಕ್ಷಗಳು ಎಂಟು ಹತ್ತು ಆದರೆ, ರಾಷ್ಟ್ರಕರ ಮನಸ್ಸು ಛಿನ್ನ ಭಿನ್ನವಾಗಿ, ಪ್ರತಿನಿಧಿವರಣದಲ್ಲಿ ಇಷ್ಟಾಂಶದ ಪಕ್ಷಗಳು ಚದರಿಹೋಗಿ, ಯಾವ ಒಂದು ಪಕ್ಷವೂ ಬಲವುಳ್ಳದ್ದಾಗದೆ, ಯಾವ ಒಂದೂ ದೃಢವಾಗಿ ನಿಲ್ಲಲಾರದೆ, ರಾಜ್ಯಗಳಲ್ಲಿ ಛಿದ್ರಬಾಹುಳ್ಯದ ಈ ಅನರ್ಥಗಳು ಕಾಣುತ್ತವೆ.

ii) ಪಕ್ಷಗಳು ಎರಡೇ ಇದ್ದಾಗ್ಗೂ ಅವು ಕೂಡ ಪಕ್ಷಾತೀತ ಸಂದರ್ಭಗಳಲ್ಲಿ –ಸರ್ವ ಜನಪದೀಯ ಸಂದರ್ಭಗಳಲ್ಲಿ–ತಮ್ಮ ಪಕ್ಷ ಭೇದಗಳನ್ನು ಮರೆತು ಏಕೀಭವಿಸಿ ನಡೆಯುವ ಮರ್ಯಾದೆಯನ್ನಿಟ್ಟುಕೊಂಡಿರಬೇಕು. ಯುದ್ಧ, ಕ್ಷಾಮ, ಉತ್ಪಾತ ಮೊದಲಾದ ದೇಶೋಪದ್ರವ ಕಾಲಗಳಲ್ಲಿಯೂ ಕಲೆ, ಸಾಹಿತ್ಯ, ದೇಶವೀರ ಗೌರವ, ಜನಪದೋತ್ಸವ ಮುಂತಾದ ರಾಜಕೀಯಾತೀತ ವಿಷಯಗಳಲ್ಲಿಯೂ ನಾನಾಪಕ್ಷಗಳು ಒಟ್ಟುಗೂಡಿಕೊಳ್ಳಲು ಎಲ್ಲ ಪಕ್ಷಗಳವರೂ ಅನುಕೂಲವಾಗಬೇಕು.

ರಾಜಕೀಯದಲ್ಲಿ ಭೇದೋತ್ಪತ್ತಿಯೂ ಕಲಹ ಪ್ರವೃತ್ತಿಯೂ ಸ್ವಾಭಾವಿಕವಾಗಿ ಆಗುತ್ತವೆ. ಅವುಗಳನ್ನು ಮಿತಿಮೀರಿಸದೆ ಸ್ವಾಧೀನದಲ್ಲಿರಿಸಿಕೊಳ್ಳುವಷ್ಟರ ಐಕಮತ್ಯ ಸೌಜನ್ಯಪ್ರೀತಿಗಳು ರಾಷ್ಟ್ರಕಜನದಲ್ಲಿರಬೇಕು.

**೬) ಕಾರ್ಯದೃಷ್ಟಿ ವಿಹೀನತೆ:** ನಮ್ಮ ದೇಶದಲ್ಲಿ ಪ್ರಜಾರಾಜ್ಯಕ್ಕೆ ಇರುವ ಶತ್ರುಗಳಲ್ಲಿ ಮುಖ್ಯವಾದದ್ದು ಅತಿಭಾಷಿತೆಯೊಂದು. ಸಭೆಯೆಂದರೆ ದೀರ್ಘವಾದ ಉಪನ್ಯಾಸಗಳೆಂದೇ ನಮ್ಮ ಜನರ ತಿಳಿವಳಿಕೆ. ಆದದ್ದರಿಂದಲೇ ನಮ್ಮ ಸಭೆಗಳು ಕಾಲನಷ್ಟಕ್ಕೂ ಬೇಸರಕ್ಕೂ ಹೆಸರುವಾಸಿಯಾಗಿವೆ. ರಾಜಕೀಯದ ಸಭೆಗಳು ಕಾರ್ಯೈಕದೃಷ್ಟಿಯಿರಬೇಕಾದವು. ಆ ಸಭೆಗಳು ವಾಗ್ವಿಜೃಂಭಣೆಗೂ ವಿದ್ವತ್ಪ್ರದರ್ಶನಕ್ಕೂ ತಕ್ಕ ಸ್ಥಳಗಳಲ್ಲ. ಪ್ರಜಾ ರಾಜ್ಯದ ದೊಡ್ಡ ದೊಡ್ಡ ಕೆಲಸಗಳೆಲ್ಲ ವಾಸ್ತವವಾಗಿ ಸಣ್ಣ ಸಣ್ಣ ಸಮಿತಿ ಉಪಸಮಿತಿಗಳಲ್ಲಿ ತೀರ್ಮಾನವಾಗಬೇಕಾದವು. ಅಲ್ಲಿ ಪ್ರಕೃತವೆಷ್ಟೋ ಅಷ್ಟೇ ಇರಬೇಕು ಮಾತು. ಬ್ಯಾಂಕರುಗಳು, ಕಾರ್ಖಾನೆಗಳ ಮಾಲೀಕರು ಮೊದಲಾದ (ಬಿಸಿನೆಸ್) ಕಾರ್ಯವಂತ ಜನರು ತಮ್ಮ ತಮ್ಮ ವ್ಯಾಪಾರ ಸಂಘಗಳಲ್ಲಿ ಸೇರಿದಾಗ ಲಕ್ಷಾಂತರ ಹಣ ಬಾಳುವ ವಿಚಾರಗಳನ್ನು ನಾಲ್ಕಾರು ನಿಮಿಷಗಳೊಳಗಾಗಿ ಹೆಚ್ಚು ಮಾತಿಲ್ಲದೆ ತೀರ್ಮಾನಪಡಿಸುತ್ತಾರೆ. ಈ ಮಿತಭಾಷಣದ ಅಭ್ಯಾಸ ರಾಜಕೀಯಕ್ಕೂ ಆವಶ್ಯವಾದದ್ದು. ಸ್ವಿಟ್ಸರ್ಲೆಂಡ್ ದೇಶದಲ್ಲಿ ಪ್ರಜಾರಾಜ್ಯ ಪದ್ಧತಿಯು ಯಶಸ್ವಿಯಾಗಿರುವಂತೆ ಇನ್ನೆಲ್ಲಿಯೂ ಆಗಿಲ್ಲವೆಂದು ನೋಡಿದವರು ಹೇಳುತ್ತಾರೆ.ಅದಕ್ಕೆ ಕಾರಣ ಅಲ್ಲಿಯ ರಾಜಕೀಯಸ್ಥರ ಮಿತಭಾಷಿತೆ ಮತ್ತು ಕಾಲಕ್ಲುಪ್ತತೆ. ಅವರು ಸಾಮಾನ್ಯವಾಗಿ ವ್ಯಾಪಾರ ಕಾರ್ಯವಂತರು. ಚಚ್ಚೌಕವಾಗಿ ಮಾತನ್ನು ಬೆಳೆಸುವುಕ್ಕೂ ಅವಲಂಬಿಸಿದ ವ್ಯಾಖ್ಯಾನಗಳನ್ನು ಕೇಳುವುದಕ್ಕೂ ಅವರಿಗೆ ಪುರಸತ್ತಿರುವುದಿಲ್ಲ. ಅಮೆರಿಕದಲ್ಲಿಯೂ ರಾಜಕೀಯ ಭಾಷಣಗಳು ಸಂಗ್ರಹವಾಗಿ ಕಾರ್ಯೈಕತತ್ಪರವಾಗಿರುತ್ತವೆ. ಇಂಗ್ಲೆಂಡಿನಲ್ಲಿ ವಿಸ್ತಾರ ಭಾಷಣಗಳ ಕಾಲ ನೂರು ವರ್ಷಗಳ ಹಿಂದೆ ಇತ್ತು. ಈಗ ಅಲ್ಲಿಯೂ ರಾಜಕೀಯ ಭಾಷಣಗಳು ಮಿತ ಪ್ರಮಾಣದವಾಗಿ ಸುಲಭಗ್ರಾಹ್ಯವಾಗಿರುತ್ತ ಬೇಗ ಬೇಗ ಮುಗಿಯುತ್ತವೆ.

ಸಾರ್ವಜನಿಕ ಕಾಲಕ್ಕೆ ಬೆಲೆಯುಂಟು, ಅದನ್ನು ಮಿಗಿಸುವುದೇ ದೇಶಕ್ಕೆ ಒಂದು ಲಾಭ. ಎರಡನೆಯದಾಗಿ, ಪ್ರಸಕ್ತಿಪರಿಮಿತವಾದ ಚರ್ಚೆಯಿಂದ ಸಿದ್ಧಾಂತವು ವಿಶದವಾಗಿ ಫಲಿಸುತ್ತದೆ. ಅಪ್ರಸಕ್ತ ವಿಷಯಕ್ಕೆ ಹೋದ ಚರ್ಚೆಯು ಬೊಂತೆಬೊಂತೆಯಾಗಿ ಬೆಳೆದು ಮನಸ್ಸನ್ನು ಮತ್ತಷ್ಟು ಗಲಿಬಿಲಿಮಾಡುತ್ತದೆ. ಮಾತಿನಲ್ಲಿಯೂ ಕಾಲನಿಯಮದಲ್ಲಿಯೂ ಕರಾರುವಾಕ್ಕಾಗಿರುವುದು ಪ್ರಜಾರಾಜ್ಯದ ಯಶಸ್ಸಿಗೆ ಬೇಕಾದ ಸಂಗತಿ.

**9) ವರಣಕ್ರಮದ ಅಪಾತ್ರಪ್ರಯೋಗ:** ಯಾವೆಡೆ ವರಣ (Election) ಸ್ಪರ್ಧೆ ಅನವಶ್ಯವೋ, ಅನುಚಿತವೋ, ಅಲ್ಲಿ ಅದಕ್ಕೆಡೆ ದೊರೆತು, ಆ ಅಧಿಕಾರಸ್ಥಾನವು ಸಮರ್ಪಕವಾಗಿ ಭರ್ತಿಯಾಗುವುದು ತಪ್ಪಿಹೋಗಿ, ಅದರ ಜೊತೆಗೆ ಕಕ್ಷಿ ವೈಷಮ್ಯಗಳು ಹುಟ್ಟಬಹುದು. ವರಣ (ಚುನಾವಣೆ) ಪದ್ಧತಿ ಎಲ್ಲ ಸಂಸ್ಥೆಗಳಿಗೂ ಏಕಪ್ರಕಾರವಾಗಿ ಅನ್ವಯವಾಗಲಾರದು. ವರಣಾಂಕನವೆಂದರೆ ಸಂಖ್ಯಾಧಿಕ್ಯದ ತೀರ್ಮಾನ. ಈ ತೀರ್ಮಾನ ಎಷ್ಟೋ ಸಂದರ್ಭಗಳಲ್ಲಿ ಯುಕ್ತವಾಗದು; ಅದು ಏನಿದ್ದರೂ ಕೆಲವು ಸಾಮಾನ್ಯಮಟ್ಟದ ಮುಖ್ಯತೆಯುಳ್ಳವೂ ಸಾಮಾನ್ಯ ಅವಸರದವೂ ಆದ ವಿಚಾರಗಳಿಗೆ ಮಾತ್ರ ತಕ್ಕದ್ದೇ ಹೊರತು ಎಷ್ಟೋ ವಿಶೇಷತರದ ಪ್ರಶ್ನೆಗಳಿಗೆ ಅದು ಅನುಗುಣವಾದದ್ದಲ್ಲವೆಂಬುದನ್ನು ಈ ಕೆಳಗೆ ನೋಡಲಾಗುತ್ತದೆ. ವೋಟಿನ ಕಟ್ಟಾ ತೀರ್ಮಾನಕ್ಕೆ ಒಳಪಡಲು ಕೆಲವು ಬಗೆಯ ಸೂಕ್ಷ್ಮ ಮನೋಧರ್ಮವುಳ್ಳ ಸಂಭಾವಿತ ಜನರು ಮುಂದೆ ಬಾರರು. ಚುನಾವಣೆಯ ಗದ್ದಲ ಗುದ್ದಾಟಗಳು ಅವರಿಗೆ ಬೇಡ. ಸ್ವಪ್ರಶಂಸೆ ಪರ ಗರ್ಹಣೆಗಳಿಂದ ಅವರ ಮನಸ್ಸು ಹಿಂಜರಿಯುತ್ತದೆ. ಆದರೆ ಅವರು ಮಹಾವಿದ್ವಾಂಸರಾಗಿರಬಹುದು, ಕಾರ್ಯದಕ್ಷರಾಗಿರಬಹುದು, ಪ್ರತಿಭಾಸಮನ್ವಿತರಾಗಿರಬಹುದು. ಅಂಥವರ ಪ್ರಯೋಜನವನ್ನು ಸಂಸ್ಥೆಗೆ ದೊರಕಿಸಲು ಅವರನ್ನು ವರಣಾಂಕನ ದ್ವಾರದಿಂದ ಬರಹೇಳಿದರೆ ಆಗದು.ವಿದ್ವತ್ಸಂಸ್ಥೆಗಳು ಭಾರೀ ವ್ಯಾಪಾರ ಸಂಸ್ಥೆಗಳು ಉಪಕಾರ ಸಂಘಗಳು ಮೊದಲಾದವು ವರಣಾಂಕನ ಪದ್ಧತಿಯನ್ನು ಬಿಟ್ಟು ಬಿಟ್ಟು-ಅಥವಾ ನಾಮಮಾತ್ರಕ್ಕಿರಿಸಿಕೊಂಡು-ಆಚರಣೆಯಲ್ಲಿ ಸದಸ್ಯ ಸಭೆಯ ಏಕವಾಕ್ಯದಿಂದಲೇ ಅರ್ಹ ಜನರನ್ನು ಅಧ್ಯಕ್ಷಪೀಠ ಮೊದಲಾದ ಅಧಿಕಾರಸ್ಥಾನಗಳಿಗೆ ಆಹ್ವಾನಿಸುವುದು ಇಂಗ್ಲೆಂಡು ಮುಂತಾದ ದೇಶಗಳಲ್ಲಿರುವ ಮರ್ಯಾದೆ. ಚುನಾವಣೆಯೆಂದರೆ ವೈಷ್ಯೋಟ, ಸಂಸ್ಥೆಯ ಇಭ್ಭಾಗ. ಆಗ ಸದಸ್ಯರಲ್ಲಿ ಹುಟ್ಟಿದ ವೈಮನಸ್ಯವು ವರಣಕಾರ್ಯದೊಡನೆ ಮುಗಿದು ಹೋಗುವುದಿಲ್ಲ.ಅದರ ಕಿಲುಬಿನಿಂದ ಸಂಸ್ಥೆಯ ಉದ್ದೇಶಗಳಿಗೇ ಹಾನಿ. ಹೀಗೆ ಕೆಲವು ಸಂಸ್ಥೆಗಳಲ್ಲಂತೂ- ಕೆಲವು ಸಂದರ್ಭಗಳಲ್ಲಂತೂ ಸಂಸ್ಥೆಗೆ ಅಪಾಯ. ವರಣ ಸ್ಪರ್ಧೆಯಲ್ಲಿ ಗುಣಕ್ಕಿಂತ ಅವಗುಣವೇ ಹೆಚ್ಚು. ಸಂಸ್ಥೆಗಳ ವಿಷಯದಲ್ಲಿ ಮಾತ್ರವೇ ಅಲ್ಲ; ಎಷ್ಟೋ ಇತರ

5750 - 5

ಅಧಿಕಾರಿ ಪದವಿಗಳ ವಿಷಯದಲ್ಲಿಯೂ ಈ ಮಾತು ಸರಿಯಾಗುತ್ತದೆ. ಒಟ್ಟಿನಲ್ಲಿ ಸಾರ್ವಜನಿಕ ಪದವಿಯನ್ನು ಭರ್ತಿಮಾಡುವಲ್ಲಿ ಉಮೇದುವಾರಿಕೆಯನ್ನೂ ಪೈಪೋಟಿಗಾರಿಕೆಯನ್ನೂ ಕೂಡಿದಮಟ್ಟಿಗೂ ಕಡಿಮೆಮಾಡಿ, ಸ್ನೇಹ ಸಮ್ಮತಿಯ (Consensus) ವಿಧಾನವನ್ನು ಅವಲಂಬಿಸುವುದು ಯುಕ್ತ. ಅಂಥಾ ಸಂದರ್ಭದಲ್ಲಿ ಸಂಬಂಧಪಟ್ಟ ಪ್ರಮುಖರು ಪೂರ್ವಭಾವಿಯಾಗಿ ಕಲೆತು ಸ್ನೇಹಸಮಾಲೋಚನೆ ನಡೆಸಿ, ಏಕಕಂಠದಿಂದ ನಿಶ್ಚಯಕ್ಕೆ ಬರುವುದು ಎಲ್ಲ ದೃಷ್ಟಿಗಳಿಂದಲೂ ಕ್ಷೇಮಕರ.* ನಮ್ಮ ಜನ ಈ ಸೂಕ್ಷ್ಮವನ್ನು ಮರೆತು, ಮತಗಣನೆಯ ಪದ್ಧತಿಯಲ್ಲಿ ಅತಿಯಾಗಿ ವಿಶ್ವಾಸವಿಟ್ಟು, ಪಾತ್ರಾಪಾತ್ರ ವಿವೇಚನೆಯಿಲ್ಲದೆ ಆ ಪದ್ಧತಿಯನ್ನು ದುರುಪಯೋಗಮಾಡಬಹುದು; ಆದರಿಂದ ರಾಜ್ಯ ಕಾರ್ಯಗಳು ಕೆಡಬಹುದು.

(10) **ಆಡಳಿತದಲ್ಲಿ ಅವ್ಯವಸ್ಥೆ:** ತತ್ತ್ವದ ತರ್ಕದಲ್ಲಿ ಸರ್ವೋತ್ತಮ ರಾಜ್ಯಪದ್ಧತಿಯೆಂದು ತೋರುವ ಪ್ರಜಾಪ್ರಭುತ್ವವು ಕಾರ್ಯಾನುಭವದಲ್ಲಿ ಸಮರ್ಥವೆನಿಸುವಷ್ಟು ಕೆಟ್ಟದ್ದಾಗುವುದುಂಟು. ಕಾರ್ಯನಿರ್ವಹಣೆಯ ರಾಜಕೀಯದಲ್ಲಿ ಒಳಗೆಲ್ಲ, ಈ ವಿಷಯದಲ್ಲಿ ಏಕನಾಯಕಪ್ರಭುತ್ವವೂ (ಡಿಕ್ಟೇಟರ್‌ಷಿಪ್) ಕಾರುಬಾರೀ ಪ್ರಭುತ್ವವೂ (ಬ್ಯುರೋಕ್ರೆಸಿ), ಪ್ರಜಾಪ್ರಭುತ್ವಕ್ಕಿಂತ ಹೆಚ್ಚು ಯಶಸ್ವಿಗಳಾದಾವು. ನಿರಂಕುಶನಾಯಕನ ಬಾಯಿಂದ ಹೊರಟ ಮಾತು ಕೂಡಲೆ ಕಾರ್ಯವಾಗುತ್ತದೆ. ಏಕನಾಯಕನ ಜೀವಾಳವೇ ಕಾರ್ಯವೇಗ. ಅವನ ಮಾತು ನಡೆಯುವುದಂತೂ ಅವನು ಸತ್ತಾತ. ಕಾರುಬಾರೀ ಕ್ರಮವಾದರೋ ಒಂದು ಭಾರೀ ಯಂತ್ರ ಕೆಲಸ ಮಾಡುವಂತೆ ಸಾಂಗವಾಗಿ, ಸಾವಧಾನವಾಗಿ, ಖಂಡಿತವಾಗಿ ಕೆಲಸ ನಡೆಸಬಲ್ಲದ್ದು. ವೇಗದ ವಿಷಯದಲ್ಲಿಯೂ ಸಾಂಗಪೂರ್ಣತೆಯ ವಿಷಯದಲ್ಲಿಯೂ ಈ ಇತರ ಪ್ರಭುತ್ವ ಕ್ರಮಗಳು ಕೊಡುವಷ್ಟು ತೃಪ್ತಿಯನ್ನು ಪ್ರಜಾಪ್ರಭುತ್ವ ಕೊಡಲಾರದೆಂಬುದು ಅನುಭವದಿಂದ ಗೊತ್ತಾಗಿರುವ ಮಾತು.

ಈ ಹತ್ತಾರು ಬಗೆಯ ಅಪಾಯಗಳಲ್ಲಿ ಕೆಲವನ್ನು ಕುರಿತು ಕಡೆಗೆ ಪ್ರಸ್ತಾಪಿಸಿದೆ. ಪ್ರಜಾವ್ಯಕ್ತಿಗೆ ಸಂತತವಾದ ಜಾಗರೂಕತೆಯೂ ಕರ್ತವ್ಯನಿಷ್ಠೆಯೂ ಎಷ್ಟು ಅವಶ್ಯಕವೆಂಬುದನ್ನು ಹೇಳಿದೆ; ಮತ್ತು ಪಕ್ಷಕಕ್ಷಿಗಳೂ ಅವುಗಳ ಪ್ರಚಾರ ಧೋರಣೆಗಳೂ ಮತ್ತು ವಾರ್ತಾಪತ್ರಿಕೆಗಳ ಏಕಪಕ್ಷೀಯ ಪ್ರಕಟನೆಗಳೂ ಹೇಗೆ ರಾಷ್ಟ್ರವನ್ನು ಭ್ರಾಂತವನ್ನಾಗಿಯೂ ಪ್ರಮಾದಿಯನ್ನಾಗಿಯೂ ಮಾಡಬಹುದೆಂಬುದನ್ನೂ ತೋರಿಸಿದೆ. ಕೆಲವು ದೊಡ್ಡ ಅಪಾಯಗಳನ್ನು ಕುರಿತು ಈಗ ಆಲೋಚಿಸೋಣ:

---

* ಇಂಗ್ಲೆಂಡಿನ ಹೌಸ್ - ಆಫ್ - ಕಾಮನ್ಸ್ ಸಭೆಯ(ಸ್ಪೀಕರ್) ಅಧ್ಯಕ್ಷ ಪದವಿಯನ್ನು ಭರ್ತಿ ಮಾಡುವುದರಲ್ಲಿ ಇಂಥ ಸಂಕೇತವುಂಟು. ಆ ಸ್ಥಾನಕ್ಕಾಗಿ ಸ್ಪರ್ಧೆಯಾದದ್ದು ಬಹುಕಾಲದ ಹಿಂದೆ. ಅದು ಈಚೆಗೆ ಸರ್ವಪಕ್ಷ ಸ್ನೇಹ ನೇಮಕ.

# ಸಂಖ್ಯಾಪ್ರಭುತ್ವ

ಪ್ರಜಾರಾಜ್ಯವೆಂಬ ವ್ಯವಸ್ಥೆಗೆ ನಾಲ್ಕಾರು ರೀತಿಗಳಲ್ಲಿ ಲಕ್ಷಣ-ನಿರ್ದೇಶ ಹೇಳುವುದುಂಟು.

1) ಅದು ಪ್ರಜಾಭಿಪ್ರಾಯದಿಂದ ನಡೆಯುವ ಸರಕಾರ

2) ಅದು ಪ್ರಜಾನಿಯೋಜಿತರಿಂದ ನಡೆಯುವ ಸರಕಾರ.

3) ಅದು ಪ್ರಜೆ ವಿಧಿಸುವ ನಿಯಮಗಳಿಗೊಳಪಟ್ಟ ಸರಕಾರ.

4) ಅದು ಚರ್ಚೆಯಿಂದ ಮತ್ತು ಅನುನಯಮಾರ್ಗದಿಂದ ನಡೆಯುವ ಸರಕಾರ.

5) ಅದು ದೇಶದಲ್ಲಿ ಪ್ರಬಲ ಪಕ್ಷದಿಂದ ಚಾಲಿತವಾದ ಸರಕಾರ.

6) ಅದು ಅಧಿಕಸಂಖ್ಯೆಯ ಜನರ ತೀರ್ಮಾನದಂತೆ ನಡೆಯುವ ಸರಕಾರ.

ಈ ನಾನಾ ಲಕ್ಷಣನಿರ್ದೇಶನಗಳಲ್ಲಿ ಒಂದರಿಂದೊಂದಕ್ಕೆ ವ್ಯತ್ಯಾಸವಿರುವುದು ವಿಷಯದ ಒಳತಿರುಳಿನಲ್ಲಲ್ಲ; ಆ ತಿರುಳಿನೊಳಗಿನ ಅಂತರಂಶಗಳ ಅನ್ಯೋನ್ಯ ಪರಿಮಾಣದಲ್ಲಿ. ಮೇಲಣ ಆರು ವಾಕ್ಯಗಳ ಪೈಕಿ ಒಂದೊಂದರಲ್ಲಿ ಒಂದೊಂದಂಶದ ಒತ್ತಾಯ ಹೆಚ್ಚು. ಯಾವ ವಿವರಣೆಯನ್ನು ತೆಗೆದುಕೊಂಡರೂ ಅದರಲ್ಲಿ ಮುಖ್ಯವಾದ ಭಾಗ-ಸಭೆಯಲ್ಲಿ ಪ್ರಸ್ತುತದ ಪ್ರಶ್ನೆ ನಿರ್ಧಾರಕ್ಕೆ ಬರುವುದು ಹೇಗೆ?-ಎಂಬುದು. ಇದಕ್ಕೆ ಉತ್ತರ ಮೇಲಣ(6) ನೆಯದು--ಎಂದರೆ (ಮೆಜಾರಿಟಿ) ಅಧಿಕಸಂಖ್ಯೆಯ ಮತದಂತೆ ಕಡೆಯ ತೀರ್ಮಾನ ಎಂಬುದು.

ಈ ಸಂಖ್ಯಾಪ್ರಭುತ್ವದ ಕಾರಣಗಳನ್ನು ವಿಚಾರಮಾಡುವುದು ಅವಶ್ಯಕ. ಒಂದು ಗುಂಪಿನಲ್ಲಿ ಅಥವಾ ಒಂದು ಸಭೆಯಲ್ಲಿ ಸೇರಿರತಕ್ಕ ಜನರೆಲ್ಲ ಬುದ್ಧಿ ಸಾಮರ್ಥ್ಯದಲ್ಲಿಯೂ ನೀತಿಯೋಗ್ಯತೆಯಲ್ಲಿಯೂ ಒಬ್ಬರಿಗೊಬ್ಬರು ಸರಿಸಮಾನವಾಗಿದ್ದಲ್ಲಿ, ಆಗ ಅವರಲ್ಲಿಯ ಅಭಿಪ್ರಾಯ ವಿಭೇದಗಳನ್ನು ಎಣಿಕೆಮಾಡಿ, ಅದರಲ್ಲಿ ಬಹುಪಕ್ಷ ಒಂದು ಕಡೆಯೂ ಸ್ವಲ್ಪಪಕ್ಷ ಇನ್ನೊಂದು ಕಡೆಯೂ ಬಂದದ್ದಾದರೆ, ಆಗ ಬಹುತೇಯ ಪಕ್ಷವನ್ನು ಅಂಗೀಕರಿಸುವುದು ಯುಕ್ತವಾಗುತ್ತದೆ. ಆದರೆ ಅಂಥ ಸರ್ವಸಮಾನರ ಗುಂಪು ಎಲ್ಲಿಯೂ ಇರುವುದಿಲ್ಲ. ಸೃಷ್ಟಿಯೇ ತನ್ನ ರಚನೆಯಲ್ಲಿ ಒಬ್ಬ ವ್ಯಕ್ತಿಗೂ ಇನ್ನೊಬ್ಬ ವ್ಯಕ್ತಿಗೂ ಗುಣದಲ್ಲಿಯೂ ಶಕ್ತಿಯಲ್ಲಿಯೂ ಭೇದಗಳನ್ನಿರಿಸಿರುತ್ತಾಳೆ. ಅಸಮಾನತೆ ಸ್ವಭಾವಸಿದ್ಧವಾದದ್ದು. ಆದದ್ದರಿಂದ ಸಭೆ ಸಂಘಗಳಲ್ಲಿ

ಸೇರುವ ಸದಸ್ಯರು ಅರ್ಹತೆಯಲ್ಲಿ ಸರಿಸಮನಾಗಿರುವುದು ಅಪರೂಪ. ಅವರನ್ನು ಆರಿಸಿ ಪ್ರತಿನಿಧಿಪಟ್ಟ ಕಟ್ಟಿ ಅಲ್ಲಿ ಕಳುಹಿಸುವ ದೇಶದ ಪ್ರಜಾವರ್ಗವೇ ನಾನಾ ಮಟ್ಟಗಳದು. ಪಂಡಿತರೂ ಪಾಮರರೂ ಧನಿಕರೂ ತಿರುಕರೂ ಅಭೇದವಾಗಿ ಶಾಸನರಚನೆಯಲ್ಲಿ ಭಾಗವುಳ್ಳವರಾಗುತ್ತಾರೆ. ಪ್ರತಿನಿಧಿ ವರಣದಲ್ಲಿ ವಸಿಷ್ಠರು ಕೊಡುವ ವರಣಪತ್ರವೂ "ಒಂದು", ವೆಂಕಣ್ಣನು ಕೊಡುವ ವರಣಪತ್ರವೂ "ಒಂದು". ಕೃಷ್ಣನು ಕೊಟ್ಟಿದ್ದೂ ಒಂದೇ ಕುಚೇಲನು ಕೊಟ್ಟಿದ್ದೂ ಒಂದೇ ಆ ಲೆಕ್ಕದಲ್ಲಿ. "ಒಬ್ಬ ಮನುಷ್ಯ ಒಂದು ವರಣಾಂಕ" (One Man-One Vote) ಇದು ಸಾರ್ವತ್ರಿಕ ನಿಯಮ. ಪ್ರತಿನಿಧಿವರಣದ ಸೂತ್ರ ಹೀಗಿರುವಲ್ಲಿ ಸಮಾಜದೊಳಗೆ ವಸಿಷ್ಠ ಕೃಷ್ಣರುಗಳ ಸಂಖ್ಯೆ ವೆಂಕಣ್ಣ ಕುಚೇಲರುಗಳ ಸಂಖ್ಯೆಗಿಂತ ಹೆಚ್ಚಿನದಾಗಿದ್ದಿದ್ದರೆ ಆ ಸೂತ್ರದಿಂದ ಒಳ್ಳೆಯದೇ ಆಗಿರುತ್ತಿತ್ತು. ಆದರೆ ಅಂಥ ಸಮಾಜ ಭೂಲೋಕದಲ್ಲಿ ಯಾವ ದೇಶದಲ್ಲಿಯೂ ಇರುವಂತಿಲ್ಲ. ಎಲ್ಲ ಕಡೆಯೂ ಸುಸಂಸ್ಕೃತ ಜನಸಂಖ್ಯೆಗಿಂತ ಅಸಂಸ್ಕೃತ ಜನಸಂಖ್ಯೆಯೂ, ಅನುಕೂಲಸ್ಥರ ಸಂಖ್ಯೆಗಿಂತ ಅಸಮಾಧಾನಸ್ಥರ ಸಂಖ್ಯೆಯೂ, ಬಹು ಹೆಚ್ಚಾಗಿಯೇ ಇದೆ. ಹೀಗೆ ಪ್ರಜಾವರ್ಗದಲ್ಲಿಯೇ ಅಸಮಾನತೆಯಿರುವ ಕಾಲದಲ್ಲಿ ಅವರು ಕೊಡುವ ವರಣಾಂಕ (ವೋಟ್) ಗಳಿಗೆ–ಪ್ರತಿಯೊಂದೂ "ಒಂದು" ಎಂದು ಸಮಾನವಾಗಿ ಬೆಲೆ ಕಟ್ಟುವುದಾದರೆ ಬಹುಸಂಖ್ಯೆಯಾದ ಅವಿದ್ವತ್ಪಕ್ಷದ ಮತ್ತು ಅಸಮಾಧಾನಸ್ಥ ಪಕ್ಷದ ಅಭಿಮತಗಳೇ ಮೇಲ್ಮೈಯಾಗುವುದು ಸ್ವತಸ್ಸಿದ್ಧವಾಗಿದೆ. ಇಂಥವರಿಂದ ಪ್ರಣೀತರಾಗಿ ಶಾಸನಸಭೆಗೆ ಬರುವ ಪ್ರತಿನಿಧಿಗಳ ಯೋಗ್ಯತೆಗಳು ಹೇಗೆ ತಾನೆ ಸರ್ವಸಮಾನವಾಗಿದ್ದಾವು? ಅಂಥ ನಾನಾ ತರಗತಿಗಳ, ನಾನಾ ವಿವೇಕ ಅವಿವೇಕಗಳ, ನಾನಾ ಯೋಗ್ಯತೆ ಅಯೋಗ್ಯತೆಗಳ ರಾಶಿಯಲ್ಲಿ ಸಂಖ್ಯೆ ಹೆಚ್ಚಾಗಿರುವುದು ಸಾಧಾರಣವಾಗಿ ಉತ್ತಮ ತರಗತಿಗಲ್ಲ. ಆದದ್ದರಿಂದ ಶಾಸನಸಂಸ್ಥೆಯಲ್ಲಿ ಅಭಿಮತಗಳನ್ನು ಗಣನೆ ಮಾಡಿದಾಗ ಬಹು ಬಲ ದೊರೆಯುವುದು ಸಭೆಯ ಮಧ್ಯಮಾಧಮ ಪಕ್ಷಗಳಿಗೇ ಹೊರತು ಉತ್ತಮ ಪಕ್ಷಕ್ಕಾಗಲಾರದು. ಹೀಗೆ ಪ್ರಜಾಪ್ರತಿನಿಧಿವರಣ (ಚುನಾವಣೆ) ಎಂಬ ವರಣಾಂಕದ ಪತ್ರಗಳ ಸಾದರಿಯಲ್ಲಿ ವ್ಯಕ್ತಿಯೋಗ್ಯತೆಯ ಕಾಳುಗಳನ್ನು ಹಾಕಿ ಜಲ್ಲಡಿಹಿಡಿದರೆ ಮೇಲೆಯೇ ನಿಂತುಬಿಡುವುದು ಗಟ್ಟಿಯಾದ ಉಂಡೆಕಾಳು; ಕೆಳಕ್ಕಿಳಿಯುವುದು ನುಚ್ಚು. ಈ ನುಚ್ಚಿನಿಂದ ಜೀವಿಸಬೇಕಾಗಿರುವುದು ಪ್ರಜಾರಾಜ್ಯ.

ವರಣ ಪದ್ಧತಿಯ ಮೂಲಕ ಸಂಖ್ಯಾಸೂತ್ರದಿಂದ ಹೊರಪಡುವ ವ್ಯಕ್ತಿಯೋಗ್ಯತೆಗಳು ಹೀಗೆ ಕೀಳುಮಟ್ಟದಾಗಿರುವ ಪಕ್ಷದಲ್ಲಿ ಅಂಥಾ ಸಂಖ್ಯಾಸೂತ್ರವನ್ನು ನಾವು ಏಕೆ ಅಂಗೀಕಾರ ಮಾಡಬೇಕು? ಇದು ನ್ಯಾಯವಾಗಿ ಹುಟ್ಟುವ ಪ್ರಶ್ನೆ. ಅದಕ್ಕೆ

ನ್ಯಾಯುವಾದ ಸಮಾಧಾನವೂ ಉಂಟು. ರಾಷ್ಟ್ರದ ಶರೀರವೆಂದೂ, ಪ್ರಜಾ ಶಕ್ತಿಯೇ ರಾಷ್ಟ್ರಶಕ್ತಿಯೆಂದೂ, ಈ ಕಾರಣದಿಂದ ಪ್ರಜಾಭಿಪ್ರಾಯದಂತೆಯೇ ಸರಕಾರ ನಡೆಯುವುದು ನ್ಯಾಯವೆಂದೂ ನಾವು ಅಂಗೀಕಾರ ಮಾಡಿದ ಬಳಿಕ, ಅನೇಕಾಗ್ರವಾದ ಪ್ರಜಾಭಿಪ್ರಾಯವನ್ನು ಏಕಾಗ್ರವಾಗಿಸುವುದು ಹೇಗೆ ಎಂಬ ಪ್ರಶ್ನೆ ಅನಿವಾರ್ಯವಾಗುತ್ತದೆ. ಪ್ರಜಾಭಿಪ್ರಾಯವು ಸಾವಿರ ಮಂದಿ ಇರುವ ಕಡೆ ಸಾವಿರ ತೆರನಾಗಿರುತ್ತದೆಯಾದದ್ದರಿಂದ, ಆ ಸಾವಿರ ಮುಖಗಳನ್ನು ಒಮ್ಮುಖವಾಗಿ ಮಾರ್ಪಡಿಸಿದಲ್ಲದೆ ಕಾರ್ಯ ಸಾಗದು. ಕಾರ್ಯಕರ್ತರಿಗೆ ಅವಶ್ಯವಾದ ಆಜ್ಞಾವಾಕ್ಯವು ಐಕಕಂಠದ್ದಾಗಬೇಕು. ಆ ಏಕಕಂಠತೆಯನ್ನು ಉಂಟುಮಾಡಲು ಬೇರೆ ಯಾವ ಉಪಾಯ ಸಾಧನವೂ ಕಾಣದೆ ಹೋದಲ್ಲಿ, ಯಾವ ಮಾರ್ಗವನ್ನನುಸರಿಸಿದರೆ ರಾಷ್ಟ್ರಶರೀರದ ಅಧಿಕ ಭಾಗಕ್ಕಾದರೂ ತೃಪ್ತಿಯಾದೀತೋ ಅಂಥಾ ಉಪಾಯವನ್ನು ಅಂಗೀಕರಿಸಬೇಕೆಂಬುದು ಯುಕ್ತವಾಗಿಯೇ ಇದೆ. ಹಾಗೆ ಹುಟ್ಟಿದ್ದು ಈ ಸಂಖ್ಯಾಧಿಕ್ಯ ಸೂತ್ರ (ಮೆಜಾರಿಟಿ ರೂಲ್ Majority rule).

ಸಂಖ್ಯಾಧಿಕ್ಯದಲ್ಲಿ ಇತರ ಸಂದರ್ಭದಲ್ಲಿಲ್ಲದ ಪಾವಿತ್ರ್ಯವಾಗಲಿ ಪ್ರಾಮಾಣ್ಯವಾಗಲಿ ಯಾವುದೂ ಇಲ್ಲ. ಬಹುಮಂದಿಯ ಕೈ ತೋರಿಕೆಯಲ್ಲಿ ಪ್ರಾಜ್ಞತೆಯೆಂದೂ, ಕೊಂಚ ಮಂದಿಯ ಕೈತೋರಿಕೆ ಅಜ್ಞತೆಯೆಂದೂ ಯಾರೂ ವಾದಿಸಲಾರರು. ಆದರೆ ರಾಜ್ಯ ಕಾರ್ಯಕರ್ತರಿಗೆ ಒಂದು ಸ್ಪಷ್ಟವೂ ಅಸಂದಿಗ್ಧವೂ ಆದ ನಿರ್ದೇಶ ಬೇಕು. ಸಭೆ ಅಥವಾ ಗುಂಪು ತನ್ನಲ್ಲಿರುವ ನಾನಾ ಅಭಿಪ್ರಾಯಗಳನ್ನೆಲ್ಲ ವಿಮರ್ಶಿಸಿ, ಚರ್ಚಿಸಿ, ಅದರ ಪರಿಣಾಮವಾಗಿ ಸಂಪೂರ್ಣ ಐಕ್ಯಮತ್ಯಕ್ಕೆ ಬರುವವರೆಗೂ ಪ್ರಸಕ್ತ ಪ್ರಶ್ನೆ ತೀರ್ಮಾನವಾಗದೆ ಹಾಗೆಯೇ ಉಳಿದುಕೊಂಡಿರಬೇಕೆನ್ನುವುದಾದರೆ, ಕಾರ್ಯಕರ್ತನು ವರ್ಷಗಟ್ಟಲೆ ಕಾದಿರಬೇಕಾದೀತು. ದೇಶಕಾರ್ಯಗಳು ಅಷ್ಟುಕಾಲ ಕಾದಿರಲಾರವು. ರಾಜ್ಯವಿಚಾರಗಳು ಜನತೆಯ ಕ್ಷಣ ಕ್ಷಣದ ಜೀವನಕ್ಕೆ ಸಂಬಂಧಪಟ್ಟವು. ಅವು ಕೂಡಿದಷ್ಟುಮಟ್ಟಿಗೆ ಆಯಾ ಕ್ಷಣದಲ್ಲಿಯೇ ಇತ್ಯರ್ಥಕ್ಕೆ ಬಂದು ಮುಗಿಯಬೇಕಾದವು. ಆದದ್ದರಿಂದ ಸರಕಾರಕ್ಕೆ ಮೊದಲು ಅವಶ್ಯವಾದದ್ದು ದೇಶಪ್ರಶ್ನೆಗಳ ತೀವ್ರದ ತೀರ್ಮಾನ. ತೀರ್ಮಾನವಿಲ್ಲದಿದ್ದರೆ ಸರಕಾರವಿಲ್ಲ. ತೀರ್ಮಾನ ಬೇಗ ಆಗಬೇಕಾದರೆ ಸುಲಭದ ಮಾರ್ಗ ಸಂಖ್ಯಾಧಿಕ್ಯದ್ದು.

ಈ ಸಂಖ್ಯಾ ಪ್ರಭುತ್ವದಲ್ಲಿ ಮೂರು ಗುಣಗಳುಂಟು:

1. ಅಧಿಕ ಮತಾಂಗೀಕಾರದಿಂದ ಸಭೆಯ ಮುಂದಿನ ಪ್ರಶ್ನೆ ಒಂದು ಕ್ಲುಪ್ತ ಕಾಲದೊಳಗಾಗಿ ನಿರ್ಧಾರಕ್ಕೆ ಬರುತ್ತದೆ.

2. ಪ್ರಜಾವರ್ಗದಲ್ಲಿ ಕೊಂಚ ಭಾಗಕ್ಕೆ ಆ ನಿರ್ಧಾರವು ಅತೃಪ್ತಿಯನ್ನುಂಟುಮಾಡಿದರೂ ಅಧಿಕ ಭಾಗಕ್ಕೆ ಅದು ಸಮಾಧಾನಕರವಾಗಿರುತ್ತದೆ. ಇದು ಸಮಾಜದ ಶಾಂತಿಗೆ ಹೆಚ್ಚು ಅಪೇಕ್ಷಣೀಯ.

3 ಆ ನಿರ್ಧಾರಕ್ಕೆ ಅಧಿಕ ಮತದ ಬೆಂಬಲವಿರುವುದರಿಂದ ಆ ತೀರ್ಮಾನವನ್ನು ಸರಕಾರವು ಕಾರ್ಯರೂಪಕ್ಕೆ ತರುವಾಗ ಬಹುಜನದ ಸಹಕಾರವು ಅದಕ್ಕೆ ದೊರಕುತ್ತದೆ. ಹೀಗೆ ಕಾರ್ಯದೃಷ್ಟಿಯಿಂದಲೂ ಸಂಖ್ಯಾಧಿಕ್ಯವು ಉಪಯುಕ್ತವಾಗುತ್ತದೆ.

ಅಧಿಕ ಸಂಖ್ಯೆಯ ತೀರ್ಮಾನವು ಪ್ರಮಾದಾದಿ ದೋಷದುಷ್ಟವಾಗಿರಬಹುದೆಂಬುದು ನಿಜ. ಗುಂಪಿನ ಮನಸ್ಸು ಸಾಮಾನ್ಯವಾಗಿ ಸಾವಧಾನ ವಿಚಾರಣೆ ಮಾಡಬಲ್ಲದ್ದಲ್ಲ.ಅದಕ್ಕೆ ಆವೇಶವೂ ಆತುರವೂ ಹೆಚ್ಚು. ವಿವಿಧ ಪ್ರಚಾರಕರ್ತರೂ ಉದ್ವೇಗಭಾಷಿಗಳೂ ಅವರ ಮನಸ್ಸನ್ನು ಕಲಕಿ ಕೆದರಿ ಛಿದ್ರ ಛಿದ್ರ ಮಾಡುತ್ತಾರೆ. ಇಂಥ ಕಾರಣಗಳಿಂದ ಬಹುಸಂಖ್ಯಾ ನಿರ್ಣಯವು ಎಷ್ಟೋ ಸಂದರ್ಭಗಳಲ್ಲಿ ಭ್ರಾಂತಿದುಷ್ಟವಾಗುತ್ತದೆ.ಅದು ಹಾಗಾದಾಗ ಸಮಾಜದ ಗತಿಯೇನು? ಇದಕ್ಕೆ ಎರಡು ಉತ್ತರಗಳುಂಟು:

## ಚರ್ಚೆ ಪುನರ್ವಿಮರ್ಶೆಗಳ ಆವಶ್ಯಕತೆ

**1) ಚರ್ಚೆ:** ದೇಶದ ಸಾರ್ವಜನಿಕ ಸ್ಥಾನಗಳಲ್ಲಿಯೂ ಶಾಸನಸಂಸ್ಥೆಯಲ್ಲಿಯೂ ನಡೆಯುವ ಬಹುಮುಖವೂ ಸ್ವತಂತ್ರವೂ ಆದ ಚರ್ಚೆಯಲ್ಲಿ ನಾನಾ ವಾದ ವಿವಾದಗಳಲ್ಲಿರುವ ಅಸತ್ಯತೆಗಳೂ ಅಸಾಧುಭಾವನೆಗಳೂ ಹೊರಪಟ್ಟು, ಖಂಡನೆಗೆ ಗುರಿಯಾಗಿ ನ್ಯಾಯಾಂಶವು ಸ್ಪಷ್ಟಗೊಂಡು ಸ್ಥಿರಪಡುತ್ತದೆ. ಹೀಗೆ ಬಹಿರಂಗ ಸ್ಥಳದ ಸ್ವತಂತ್ರ ಚರ್ಚೆಯಿಂದ ಜನಾಭಿಪ್ರಾಯವು ಪರಿಶೋಧಿತವಾಗಿ ಅದರ ದೋಷಗಳು ಬಹುಮಟ್ಟಿಗೆ ಕಡಿಮೆಯಾಗುತ್ತವೆ.

**2) ಪುನಃ ಪರಿಷ್ಕರಣೆ:** ಎಷ್ಟೇ ಚರ್ಚೆ ಶೋಧನೆ ನಡೆದಿದ್ದರೂ ಕಡೆಗೂ ದೋಷಭಾಗ ಅಷ್ಟೋ ಇಷ್ಟೋ ಉಳಿದುಕೊಂಡೇ ಇರುವುದು ಅಸಂಭವವೇನೂ ಅಲ್ಲ. ಇಂಥಾ ದೋಷಶೇಷದ ಪರಿಹಾರವಾದರೋ, ಜನಕ್ಕೆ ಕಾಲಕ್ರಮದಲ್ಲಿ ಆಗುವ ಅನುಭವದ ಮೂಲಕ ನಡೆದೀತು. ಅಧಿಕ ಪಕ್ಷದ ಅಭಿಪ್ರಾಯವನ್ನು ಸರಕಾರವು ಕಾರ್ಯಕ್ಕೆ ತಿರುಗಿಸಿದಮೇಲೆ, ಆ ಅಭಿಪ್ರಾಯದ ಫಲಾಫಲಗಳು ಜನದ ಅನುಭವಕ್ಕೆ ಬಂದೇ ಬರುತ್ತವೆ. ಅದರ ಮೇಲೆ ಅವರು ತಮ್ಮ

ಅಭಿಪ್ರಾಯಗಳನ್ನು ತಿದ್ದಿಕೊಳ್ಳುತ್ತಾರೆ; ಆ ಬಳಿಕ ಹಿಂದೆ ಅವರು ಮಾಡಿದ ಶಾಸನವು ಪುನಃ ಪರಿಷ್ಕೃತವಾಗುತ್ತದೆ. ಹೀಗೆ-"ತಪ್ಪು ತಿದ್ದು; ತಪ್ಪು, ತಿದ್ದು" (ಟ್ರಯಲ್-ಆಂಡ್-ಎರರ್) ಎಂಬುದೇ ಮನುಷ್ಯನಿಗೆ ಗೊತ್ತಾಗಿರುವ ಪ್ರಗತಿಸೂತ್ರ.

ಈ ಕಡೆಯ ಭರವಸೆಯ ಮಾತು ಮನುಷ್ಯ ಬುದ್ಧಿಗೆ ಅಷ್ಟೇನೂ ಪ್ರಶಂಸಾಕರವಾಗಿಲ್ಲ. ಸಂಖ್ಯಾಪ್ರಭುತ್ವದಿಂದ ಮನುಷ್ಯನ ಕಷ್ಟಗಳಿಗೆ ಪೂರ್ಣಪರಿಹಾರವೆಂದು ಹೇಳುವ ಹಾಗಿಲ್ಲ. ಸಂಖ್ಯಾಬಲದ ಅಂಗೀಕಾರಕ್ಕೆ ಇರುವ ಮುಖ್ಯ ಕಾರಣ ಅದರ ಕಾರ್ಯ ಸೌಲಭ್ಯವೇ ಹೊರತು ಅದರ ವಿವೇಕಾಂಶವಾಗಲಿ ನ್ಯಾಯಾಂಶವಾಗಲಿ ಅಲ್ಲ.

ಸಂಖ್ಯೆಯ ತೀರ್ಮಾನ ಒಂದು ಅವಸರದ ತೀರ್ಮಾನ: "ಕ್ರಯ ತೂಕ. ಬಾಯ ಬಣ್ಣ"- ಎಂಬ ಹಾಗೆ. ಹೇಗೋ ಒಂದು ರೀತಿ ಕೆಲಸ ತೂಗಿಸಬೇಕು. ಸಮಯ ದಾಟಿಸಬೇಕು -ಎಂಬುದಷ್ಟೇ ಅದರ ತಾತ್ಪರ್ಯ.

ಈ ಒರಟು ಸೂತ್ರವು ಒರಟು ವ್ಯಾಪಾರಗಳಲ್ಲಿ ಸಮ್ಮತವಾಗಬಹುದು. ರಾಜಕೀಯದ ಮುಕ್ಕಾಲು ಭಾಗ ಒರಟು ವ್ಯಾಪಾರವಲ್ಲದೆ ಮತ್ತೇನು? ಆದರೆ ಅದರಲ್ಲಿ ಉಳಿದ ಕಾಲುಭಾಗ ನಯವಾದದ್ದು; ಅದರ ಸೂಕ್ಷ್ಮ ವಿಚಾರಕ್ಕೆ ಕೈಗಳನ್ನೆಣಿಕೆ ಮಾಡುವ ದಾರಿಗಿಂತ ಸಪ್ರಮಾಣದ ದಾರಿ ಅವಶ್ಯವಾಗುತ್ತದೆ. ಈ ನಯವಸ್ತುಗಳ ಸಣ್ಣ ಕ್ಷೇತ್ರದಲ್ಲಿ ಹೆಚ್ಚು ಕೆಡುಕುಗಳಾದರೆ ಅದರ ಅನರ್ಥವು ಮಿಕ್ಕ ದೊಡ್ಡ ಕ್ಷೇತ್ರಕ್ಕೆಲ್ಲ ವ್ಯಾಪಿಸಿ ಒಟ್ಟು ರಾಜ್ಯ ಜೀವನವನ್ನೇ ಕೇಡಿಗೆ ಇಳಿಸೀತು. ಆದಕಾರಣ ಪ್ರಜಾರಾಜ್ಯದಲ್ಲಿ ಸಂಖ್ಯಾಬಲಸೂತ್ರವನ್ನು ಎಲ್ಲಿ ಅನ್ವಯಿಸಬಹುದು ಎಲ್ಲಿ ಅನ್ವಯಿಸತಕ್ಕದ್ದಲ್ಲ- ಎಂಬ ಔಚಿತ್ಯ ವಿವೇಚನೆ ಜಾಗರೂಕತೆಯಿಂದ ನಡೆಯಬೇಕು.

ನಮ್ಮ ಜೀವನಕ್ಕೆ ಬೆಲೆಯುಳ್ಳದ್ದಾಗಿ, ಆದರೂ (ವೋಟ್) ಮತಗಣನ ಯಂತ್ರಕ್ಕೆ ಎಟುಕಲಾರದಿರುವ ರಾಜಕೀಯಾಂಶಗಳು ಲೆಕ್ಕವಿಲ್ಲದಷ್ಟಿರುತ್ತವೆ. ಸಂಖ್ಯಾಬಲಕ್ಕಿಂತ ಮೇಲಾದ ಬಲಗಳೂ ಗುಂಪಿನ ಧ್ಯೇಯಗಳಿಗಿಂತ ಮಿಗಿಲಾದ ಧ್ಯೇಯಗಳೂ ಮನುಷ್ಯನಲ್ಲಿರುತ್ತವೆ. ಇದನ್ನು ನಾವು ಮನಸಾರಗ್ರಹಿಸಬೇಕು. ಜೀವನಕ್ಕೆ ಸಂಬಂಧಪಟ್ಟ ನೂರು ವಿಚಾರಗಳಲ್ಲಿ ಎಂಬತ್ತು ತೊಂಬತ್ತು ವಿಚಾರಗಳು ಸರ್ವಸಾಧಾರಣವಾದವು. ಅಲ್ಲಿ ಸಂಖ್ಯಾಧಿಕ್ಯದ ನಿರ್ಣಯ ಉಪಯುಕ್ತವಾಗಬಹುದು. ಆದರೆ ಮಿಕ್ಕ ಹತ್ತಿಪ್ಪತ್ತು ವಿಚಾರಗಳು ವಿಶೇಷವಾದವು. ಅಲ್ಲಿ ಈ ಸಂಖ್ಯಾಸೂತ್ರ ಅಸಂಗತವಾಗುತ್ತದೆ. ಸಂಖ್ಯಾಸೂತ್ರಕ್ಕಿರುವ ಈ ಮಿತಿಯನ್ನು ಪ್ರಜಾರಾಜ್ಯ ಹಿತೈಷಿಗಳು ಗಮನದಲ್ಲಿರಿಸಿಕೊಳ್ಳಬೇಕು. ಗುಂಪು ಗೊಂದಲಗಳ ಶಬ್ದಬಾಧೆಗೆ ತಕ್ಕದ್ದಲ್ಲದ ಕಡೆ ಅದಕ್ಕೆ ಎಡೆಕೊಡುವುದರಿಂದ ವಿಪರೀತ ಪರಿಣಾಮವೇ ಆದೀತು. ಆದದ್ದರಿಂದ

ಸಂಖ್ಯಾಪ್ರಭುತ್ವಕ್ಕೆ ತಕ್ಕ ಕ್ಷೇತ್ರವಾವುದು, ಅದಕ್ಕೆ ತಕ್ಕದ್ದಲ್ಲದ ಕ್ಷೇತ್ರವಾವುದು-ಎಂಬುದನ್ನು ಆಗಾಗ್ಗೆ ಆಲೋಚಿಸುತ್ತಿರಬೇಕು. ಕೆಲವು ದೃಷ್ಟಾಂತಗಳನ್ನು ನೋಡೋಣ:

1) ಒಬ್ಬ ಪ್ರಯಾಣಿಕನು ಒಂದು ನಿರ್ಜನ ಪ್ರದೇಶದಲ್ಲಿ ಏಕಾಕಿಯಾಗಿ ನಡೆಯುತ್ತಿರುತ್ತಾನೆ.ಆಗ ಹಠಾತ್ತಾಗಿ ನಾಲ್ವರು ಪುಂಡರು ಬಂದು ಅವನನ್ನು ಮುತ್ತಿಕೊಂಡು ಮೂಟೆಯನ್ನು ಕೊಡೆನ್ನುತ್ತಾರೆ. ಆಗ ವಿವಾದ ಹುಟ್ಟಿ, ಅವರಲ್ಲೊಬ್ಬ ಉಪಾಯಗಾರ 'ಸಂಖ್ಯಾಬಲದಂತೆ ನಾವೆಲ್ಲರೂ ನಡೆದುಕೊಳ್ಳೋಣ'' ಎನ್ನುತ್ತಾನೆ. ಅದು ನ್ಯಾಯವಾದೀತೆ?

2) ನಮ್ಮ ದೇಶದಲ್ಲಿ ಶೈವ, ವೈಷ್ಣವ, ಕ್ರೈಸ್ತ, ಮುಸಲ್ಮಾನ ಮೊದಲಾದ ನಾಲ್ಕಾರು ಬೇರೆ ಬೇರೆ ಮತಧರ್ಮಗಳಿವೆ. ಮತಭೇದದಿಂದ ಐಕಮತ್ಯಕ್ಕೆ ಹಾನಿಯೆಂದು ವಾದಿಸುವವರು-ಯಾವ ಮತಸ್ಥರ ಸಂಖ್ಯೆ ದೇಶದಲ್ಲಿ ಹೆಚ್ಚಾಗಿದೆಯೋ ಆ ಒಂದು ಮತವೇ ಸರಿಯಾದದ್ದು; ಮಿಕ್ಕ ಮತಗಳವರು ಆ ಒಂದು ಮತವನ್ನೇ ಅವಲಂಬಿಸೋಣ – ಎಂದು ವಾದಿಸಬಹುದೆ? ಅಥವಾ ಎಲ್ಲ ಮತಗಳನ್ನೂ ತೊಡೆದುಹಾಕೋಣ-ಎನ್ನಬಹುದೆ?

3) ನಮ್ಮ ದೇಶದಲ್ಲಿ ಕನ್ನಡ, ತಮಿಳು, ತೆಲಗು, ಹಿಂದಿ, ಮರಾಠಿ, ಗುಜರಾತಿ ಮೊದಲಾದ ಭಾಷೆಗಳು ಹದಿನೈದು ಇಪ್ಪತ್ತಿವೆ. ಮೇಲೆ ಮತದ ವಿಷಯದಲ್ಲಿ ಹೇಳಿದಂತೆ ಭಾಷೆಗಳ ವಿಷಯದಲ್ಲೂ ವಾದಿಸಿ, ಸ್ವಲ್ಪ ಸಂಖ್ಯಾವಂತವಾದ ಭಾಷೆಗಳು ಆತ್ಮ ಹತ್ಯೆ ಮಾಡಿಕೊಳ್ಳಬೇಕೆಂದರೆ ಒಪ್ಪಲಾದೀತ್ತೆ?

4) ನಮ್ಮ ದೇಶದ ಸಂಗೀತ "ಹಿಂದೂಸ್ತಾನಿ" ಎಂದೂ "ಕರ್ನಾಟಕ" ಎಂದೂ ಎರಡು ಪ್ರಕಾರವಾಗಿದೆಯಷ್ಟೆ? ಇದರಲ್ಲಿ ಔತ್ತರೇಯರ ಸಂಖ್ಯೆ ಹೆಚ್ಚಿನದೋ ದಾಕ್ಷಿಣಾತ್ಯರದು ಹೆಚ್ಚಿನದೋ ಎಣಿಕೆಮಾಡಿಸಿ, ಕಡಮೆ ಸಂಖ್ಯೆಯದಕ್ಕೆ ಬಹಿಷ್ಕಾರ ಹಾಕಬೇಕೆನ್ನಬಹುದೆ?

5) ದೇಶದಲ್ಲಿ ನಿತ್ಯಸ್ನಾನದ ಅಭ್ಯಾಸವಿರುವ ಜನರಿಗಿಂತ ಆ ಅಭ್ಯಾಸವಿಲ್ಲದವರು ಹೆಚ್ಚು ಸಂಖ್ಯೆಯವರಾಗಿದ್ದರೆ, ಆಗ ಅವರು ಯಾರೂ ಮೈ ತೊಳೆಯಕೂಡದೆಂದು ಕಟ್ಟು ಮಾಡಬಹುದೆ?

ಹೀಗೆ ದೃಷ್ಟಾಂತಗಳನ್ನು ಎಷ್ಟು ಬೇಕಾದರೂ ಕೊಡಬಹುದು. ಇರುವ ಅಂತಸ್ಸತ್ವವಿಷ್ಟೆ: ನಮ್ಮ ಜೀವನಕ್ಷೇತ್ರದಲ್ಲಿ ಸಂಖ್ಯೆಯ ಆಳಿಕೆಗೆ ಒಳಪಡಲೊಪ್ಪದ, ಒಳಪಡಿಸಬಾರದುವಾದ, ಭಾಗಗಳು ಎಷ್ಟೋ-ಲೆಕ್ಕಕ್ಕೆ ಸಿಕ್ಕದಷ್ಟು-ಇರುತ್ತವೆ. ಜೀವನದ ಸ್ವಾರಸ್ಯವಿರುವುದು ಅಂಥಾ ಆಂತರಿಕಾನುಭವ ಭಾಗಗಳಲ್ಲಿ. ಅವು ಹೃದಯಾಂತರಾಳದ ಗೂಢ ಗಭೀರಪ್ರಾಂತಗಳು. ಆ ಆಪ್ತ ವಿಚಾರಗಳಲ್ಲಿ ಸಂಖ್ಯಾಧಿಕ್ಯ ಸೂತ್ರವು ಅನರ್ಥಕಾರಿ.

ಸಂಚಾರದ ದೃಷ್ಟಿಯಿಂದ ಮನುಷ್ಯನ ಜೀವನಕ್ಷೇತ್ರದ ಸಂಖ್ಯಾಧಿಕ್ಯ ಸೂತ್ರವು ಮೂರು ವಿಭಾಗಗಳುಳ್ಳದ್ದು:

1) ಸಾರ್ವಜನಿಕ,-ಸಾಧಾರಣ ಭಾಗ.

2) ಸಾರ್ವಜನಿಕ,-ವಿಶೇಷ ಭಾಗ.

3) ಕೇವಲ ವೈಯಕ್ತಿಕ ಭಾಗ.

ಈಗಿನ ಪ್ರಪಂಚದಲ್ಲಿ ರಾಜ್ಯಕಾರ್ಯಕ್ಷೇತ್ರದಲ್ಲಿ (2ನೆಯ) "ವಿಶೇಷ" ಜಾತಿಯ ವಿಚಾರಗಳ ಪರಿಮಾಣ ಹೆಚ್ಚಾಗುತ್ತಿದೆ. ಇವು ನಾನಾ ವಿಜ್ಞಾನ (ಸಯನ್ಸ್) ಶಾಸ್ತ್ರಗಳಿಗೆ ಸಂಬಂಧಪಟ್ಟವು. ಕೆಮಿಸ್ಟ್ರಿ (ರಸಾಯನ ಶಾಸ್ತ್ರ), ವಿದ್ಯುಚ್ಛಕ್ತಿ (ಎಲೆಕ್ಟ್ರಿಸಿಟಿ), ಯಂತ್ರಶಿಲ್ಪ (ಮೆಕ್ಯಾನಿಕ್ಸ್), ವಾಸ್ತು ಶಿಲ್ಪ (ಎಂಜಿನಿಯರಿಂಗ್), ಜಿಯಾಲಜಿ(ಭೂಗರ್ಭಶಾಸ್ತ್ರ), ಬಾಟನಿ (ವನಸ್ಪತಿ ಶಾಸ್ತ್ರ) ಜುಆಲಜಿ (ಪ್ರಾಣಿಶಾಸ್ತ್ರ) - ಇವೇ ಮೊದಲಾದ ಪ್ರಕೃತಿ ವಿಜ್ಞಾನ ಶಾಸ್ತ್ರಗಳು ದೇಶದ ಕಾರ್ಖಾನೆ ಕೈಗಾರಿಕೆಗಳ ಸಂಬಂಧದಲ್ಲಿಯೂ ವ್ಯಾಪಾರ ಸಂಬಂಧದಲ್ಲಿಯೂ ಪ್ರಸಕ್ತವಾಗಿ, ಶಾಸನವಿಧಿಗಳ ದ್ವಾರಾ ಸರಕಾರದ ಕೈಗೆ ಒದಗಿಬರಬೇಕಾಗಿವೆ. ಹಾಗೆಯೇ ಅರ್ಥಶಾಸ್ತ್ರ, ನಾಣ್ಯವಿನಿಮಯ (ಎಕ್ಸ್‌ಚೇಂಜ್) ವಿಜ್ಞಾನ, ಸಂಖ್ಯಾಪರಿಮಾಣಶಾಸ್ತ್ರ (ಸ್ಟ್ಯಾಟಿಸ್ಟಿಕ್ಸ್), ಮನಶಾಸ್ತ್ರ (ಸೈಕಾಲಜಿ) -ಇವೇ ಮೊದಲಾದ ಸಮಾಜ ವಿಜ್ಞಾನಶಾಸ್ತ್ರಗಳು ಸಹ ಶಾಸನರಚನೆಯ ಕಾರ್ಯದಲ್ಲಿ ಸಂಪೃಕ್ತವಾಗಿರುತ್ತವೆ. ಈ ವಿಜ್ಞಾನಶಾಸ್ತ್ರಗಳಾದರೊ ಒಂದೊಂದೂ ಶಾಖೋಪ ಶಾಖೆಗಳಾಗಿ ಕವಲೊಡೆದು ಹರಡಿರುತ್ತವೆ. ಆ ಕವಲುಗಳೆಲ್ಲವನ್ನೂ ಯಾವ ಒಬ್ಬ ಸಾಮಾನ್ಯ ಮನುಷ್ಯನೂ ಪೂರ್ತಿಯಾಗಿ ತಿಳಿದುಕೊಂಡಿರುವುದು ಸಾಧ್ಯವಿಲ್ಲ. ಆದದ್ದರಿಂದ ಈ ವೈಜ್ಞಾನಿಕ ಪಾರಿಶ್ರಾಮಿಕ ವಾಣಿಜ್ಯ ವಿಚಾರಗಳು ಶಾಸನ ಸಭೆಯ ಸಂಖ್ಯಾ ಪ್ರಭುತ್ವಕ್ಕೆ ಒಳಪಡಲಾರವು. ಈ ತತ್ತ್ವವನ್ನು ಸಾಮಾನ್ಯವಾಗಿ ಎಲ್ಲ ದೇಶಗಳೂ ಅಂಗೀಕರಿಸಿವೆ. ಆದದ್ದರಿಂದಲೇ ಅಂಥ ವಿಶೇಷ ವಿಷಯಗಳನ್ನು ಕುರಿತು ರಾಜ್ಯಕಾರ್ಯ ನಡೆಸಬೇಕಾದಾಗ ಆ ಬಗ್ಗೆ ನಿಷ್ಪಕ್ಷಪಾತಿಗಳಾದ ತಜ್ಞಪ್ರವೀಣರ (ಎಕ್ಸ್‌ಪರ್ಟ್ಸ್) ಸಮಿತಿಗಳನ್ನು ನಿಯಮಿಸಿ, ಅವರ ಸಲಹೆಗಳಂತೆ ಕೆಲಸ ನಡೆಸತಕ್ಕದ್ದೆಂದು ಒಪ್ಪುವುದು ವಾಡಿಕೆಯಾಗಿದೆ. ಇಂಥ ವಿಚಾರಗಳಲ್ಲಿ ಶಾಸನಸಂಸ್ಥೆಯು ಅಧಿಪರೀಕ್ಷೆ ಪರಿಷ್ಕರಣೆಗಳ ಅಧಿಕಾರವನ್ನು ಉಳಿಸಿಕೊಂಡಿರುತ್ತದೆ. ಆದರೆ ಅದು ಆಕಾರಮಾತ್ರದ್ದು; ಸಾಮಾನ್ಯವಾಗಿ ಪ್ರಯೋಗವಾಗುವುದಲ್ಲ. ಹೀಗೆ ಸಾರ್ವಜನಿಕ ಕ್ಷೇತ್ರದಲ್ಲಿ ವಿಶೇಷ ಜ್ಞಾನಾಪೇಕ್ಷಿಯಾದ ಭಾಗ ಯಾವುದುಂಟೋ ಅದು ಸಂಖ್ಯಾಪ್ರಭುತ್ವದ ವ್ಯಾಪನೆಯಿಂದ ಹೊರಗೆ ನಿಂತಿರುತ್ತದೆ.

ಸ್ವಕರ್ತವ್ಯಜ್ಞಾನವುಳ್ಳ ಪ್ರಜಾಪ್ರತಿನಿಧಿಸಂಸ್ಥೆಯು ನಿಷ್ಪಕ್ಷೀಯ ವಿಶೇಷಜ್ಞರಿಗೆ ಮಾತ್ರ ನಿರ್ಣಯ ಸಾಧ್ಯವಾದ ವಿಚಾರಗಳೊಳಕ್ಕೆ ತಾನು ಕೈಹಾಕಲಾರದು.

ಹಾಗೆಯೇ ಪ್ರಜಾವ್ಯಕ್ತಿಯ ಅಂತರಂಗಜೀವನಕ್ಕೆ ಸಂಬಂಧಪಟ್ಟ—ಸಂಸ್ಕೃತಿ, ದೈವ, ಮತ, ಕುಲಾಚಾರ, ಸಂಗೀತ ಸಾಹಿತ್ಯಾಭಿರುಚಿ ಮೊದಲಾದ—ವಿಚಾರಗಳಿಗೆ ಸಂಖ್ಯಾಪ್ರಭುತ್ವದಿಂದ ವಿನಾಯಿತಿ ಸಲ್ಲಬೇಕಾಗುತ್ತದೆ. ಯಾವ ಯಾವ ಜೀವನವಿಚಾರವು ರಾಜ್ಯದ ಕರ್ತವ್ಯಗಳಿಗೆ ಅವಶ್ಯಸಂಬಂಧವುಳ್ಳದ್ದಲ್ಲವೋ— ಯಾವ ವಿಚಾರಗಳನ್ನು ಮುಟ್ಟದೆ ಬಿಡುವುದರಿಂದ ಸರಕಾರಕ್ಕೆ ಕರ್ತವ್ಯ ಲೋಪವಾಗಲಾರದೋ,—ಅಂಥ ಎಲ್ಲ ವಿಚಾರಗಳಿಂದಲೂ ಶಾಸನಸಂಸ್ಥೆಯೂ ಸರಕಾರವೂ ದೂರ ನಿಲ್ಲಬೇಕು.

ಸಂಖ್ಯಾಧಿಕ್ಯನಿರ್ಣಯವು ಎಲ್ಲೆಲ್ಲಿ ಯುಕ್ತವಾಗಲಾರದೋ, ಅಂಥ ಕಡೆಯಲ್ಲೆಲ್ಲಾ ಆ ಸೂತ್ರವನ್ನು ಅಂಧಶ್ರದ್ಧೆಯಿಂದ ಅನ್ವಯಿಸುವುದು ಶಾಸ್ತ್ರ ವ್ಯಭಿಚಾರವಾದೀತು. ಗಂಡುಮಗನ ಚೌಲಕ್ಕೆ ಜೋಯಿಸನು ಹೇಳಿದ್ದ ಕುರ್ವೀತ ಬುಧಸೋಮಯೋಃ ಸೂತ್ರವನ್ನು ಸೊಸೆಯ ಸೀಮಂತೋತ್ಸವಕ್ಕೆ ಅನ್ವಯಿಸತಕ್ಕದ್ದಲ್ಲ. ಎರಡೂ ತಲೆಗೆ ಸಂಬಂಧಪಟ್ಟ ಶುಭಕಾರ್ಯಗಳೇ ಆಗಿದ್ದರೂ ಪಾತ್ರಾಪಾತ್ರವಿಚಾರವನ್ನು ಮರೆತರೆ ಅನಿಷ್ಟವೇ ಆದೀತು.

## ಉಭಯ ಪಕ್ಷ ಸಮ್ಮತಿ

ಇನ್ನೊಂದು ಎಚ್ಚರಿಕೆಯ ಮಾತು: ಶಾಸನಸಂಸ್ಥೆಯಲ್ಲಿ ಪ್ರಶ್ನೆ ನಿರ್ಣಯಕ್ಕೆ ಬರುವಾಗ ಸದಸ್ಯರು ಅಧಿಕಸಂಖ್ಯಾ ಪಕ್ಷ, ಅಲ್ಪ ಸಂಖ್ಯಾ ಪಕ್ಷ, ಎಂದು ಎರಡು ಭಾಗಗಳಾಗಿ ಒಡೆದು, ಜಯವು ಅಧಿಕ ಪಕ್ಷಕ್ಕೇ ದೊರೆತರೂ, ಪ್ರಜಾಸಂಸ್ಥಾ (Parliamentary—ಪಾರ್ಲಿಮೆಂಟರಿ) ಪ್ರಭುತ್ವ ಪದ್ಧತಿಯಲ್ಲಿ ಆ ಅಧಿಕ ಪಕ್ಷದ ವಿಜಯವನ್ನು ಏಕಪಕ್ಷ ನಿರ್ಣಯವೆಂದು ಪರಿಗಣಿಸುವುದಿಲ್ಲ; ಅದು ಉಭಯ ಪಕ್ಷಗಳ ಸಂಧಿಸಮ್ಮತಿಯೆಂದೇ ಗಣನೆ. ಏಕೆಂದರೆ ಯಾವ ಒಂದು ಪಕ್ಷವೇ ಆಗಲಿ, ಅದು ಇನ್ನೊಂದು ಪಕ್ಷದ ಮೇಲೆ ತನ್ನ ಭಾರವನ್ನು ನಿರ್ಬಂಧವಾಗಿ ಹೇರಿತೆಂಬ ಭಾವನೆ ಇರುವುದು ರಾಜ್ಯಕ್ಕೆ ಕ್ಷೇಮಕರವಲ್ಲ, ತಾನು ನಿಷ್ಕಾರಣವಾಗಿ ಅಂಧಬಲಕ್ಕೆ ಒಳಪಡಬೇಕಾಯಿತೆಂಬ ನೋವು ಯಾವ ವರ್ಗದಲ್ಲಿಯೂ, ಯಾವೊಬ್ಬರ ಮನಸ್ಸಿನಲ್ಲಿಯೂ, ನೆಲಸಲು ಅವಕಾಶವಿರಬಾರದು. ಈ ಕಾರಣದಿಂದ ಇಂಗ್ಲೆಂಡಿನ ಪಾರ್ಲಿಮೆಂಟಿನಲ್ಲಿ ಅಧಿಕಾರ ಪಕ್ಷವು ಎಲ್ಲ ವಿಚಾರಗಳಲ್ಲಿಯೂ ಕೂಡಿದ ಮಟ್ಟಿಗೂ ಪ್ರತಿಪಕ್ಷವನ್ನು ಒಡಂಬಡಿಸಿಕೊಳ್ಳಲು ಶ್ರದ್ಧೆಯಿಂದ ಪ್ರಯತ್ನಮಾಡುತ್ತದೆ. ಶಾಸನ ಗ್ರಂಥದ

ಪ್ರಥಮ ಲೇಖವನ್ನು (ಮುಸೂದೆ. ಡ್ರಾಫ್ಟ್) ಪರಿಷ್ಕಾರಮಾಡಲು ಪಾರ್ಲಿಮೆಂಟ್ ಸಭೆ ನಿಯಮಿಸುವ ಎಲ್ಲ ಸಮಿತಿಗಳಲ್ಲಿಯೂ, ಇತರ ವಿಶೇಷ ಸಮಿತಿಗಳಲ್ಲಿಯೂ ಎಲ್ಲ ಪಕ್ಷಪಕ್ಷಗಳ ಪ್ರಮುಖರನ್ನೂ ಒಬ್ಬರಿಬ್ಬರನ್ನಾದರೂ ಆರಿಸಿ ಸೇರಿಸಿಕೊಳ್ಳುವುದು ಅಲ್ಲಿಯ ಪದ್ಧತಿ. ಸಭಾಕಾರ್ಯಗಳಲ್ಲಿ ಯಾವ ಪಕ್ಷವೂ ಪ್ರತಿ ಪಕ್ಷವನ್ನು ಹೊರಹಾಕುವುದಿಲ್ಲ; ದೂರದಲ್ಲಿರಬಿಡುವುದಿಲ್ಲ. ಅಲ್ಲಿ ಯಾವ ಒಂದು ಪಕ್ಷಕ್ಕೂ ಅಧಿಕಾರಸ್ಥಾನವು ಶಾಶ್ವತವಲ್ಲದ್ದರಿಂದ ಪ್ರತಿಯೊಂದು ಪಕ್ಷವೂ ಇತರ ಪಕ್ಷಗಳ ವಿಷಯದಲ್ಲಿ ಸ್ನೇಹದ ಸಂಪ್ರದಾಯ ಮರ್ಯಾದೆಯನ್ನು ನಡೆಸುತ್ತದೆ. ಸಭೆಯಲ್ಲಿ ನಡೆಯುವ ಚರ್ಚೆವಿವರಣೆಗಳಿಂದ ಪಕ್ಷಪ್ರತಿಪಕ್ಷಗಳ ಅಭಿಪ್ರಾಯಭೇದಗಳು ಕೂಡಿದ ಮಟ್ಟಿಗೂ ಕಳೆದುಹೋಗಿ, ಯಾವ ಭೇದಗಳನ್ನು ಹಾಗೆ ಅಳಿಸಿಹಾಕುವುದು ಸಂಪೂರ್ಣವಾಗಿ ಅಸಾಧ್ಯವೋ ಅಂಥವು ಮಾತ್ರ ಕಡೆಗೆ ಉಳಿದುಕೊಳ್ಳುತ್ತವೆ. ಹೀಗೆ ಅನಿವಾರ್ಯವಾಗಿ ಉಳಿದುಕೊಂಡ ಭೇದಾಂಶಗಳಲ್ಲಿ ಮಾತ್ರ ಅಧಿಕ ಸಂಖ್ಯೆಯ ಬಲಕ್ಕೆ ಗೌರವ ತೋರಲು ಅಲ್ಪ ಸಂಖ್ಯೆಯವರೂ ಒಪ್ಪಿಕೊಳ್ಳುತ್ತಾರೆ. ಅಧಿಕ ಸಂಖ್ಯಾಬಲದ ಸೂತ್ರವು ಎಲ್ಲ ಪಕ್ಷಗಳಿಂದಲೂ ಏಕಪ್ರಕಾರವಾಗಿ ಅಂಗೀಕೃತವಾಗಿರುವ ಸೂತ್ರ. ಅಲ್ಪ ಸಂಖ್ಯಾ ಪಕ್ಷದವರೂ ಅದಕ್ಕೆ ಸ್ವತಃ ಬದ್ಧರಾಗಿರುವ ಕಾರಣದಿಂದ–ನ್ಯಾಯವಾಗಿ ಆಡಿದ ಆಟದಲ್ಲಿ ಬಂದ ಸೋಲು ಗೆಲವುಗಳನ್ನು ಸ್ವೀಕರಿಸುವಂತೆ, ಅಂಥಾ ಸಮಚಿತ್ತತೆಯಿಂದ–ಅವರು ಸಭಾನಿರ್ಣಯವನ್ನು ಅಂಗೀಕರಿಸುತ್ತಾರೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶ ಯಾವುದೆಂದರೆ, ಸಭೆಯಲ್ಲಿ ಇತ್ಯರ್ಥಣೆಗೆ ಪೂರ್ವಭಾವಿಯಾಗಿ ಭೇದ ನಿವಾರಣೆಯ ಪ್ರಯತ್ನವು ಸಾಧ್ಯವಾದ ಮಟ್ಟಿಗೂ ನಡೆದಿರುತ್ತದೆಂಬುದು. ಹೀಗೆ ಪಾರ್ಲಿಮೆಂಟಿನ ನಿರ್ಣಯವು ಏಕಪಕ್ಷದ ಆಜ್ಞೆಯಲ್ಲ, ಉಭಯಪಕ್ಷಗಳ ಒಡಂಬಡಿಕೆ (Majority-Minority pact)). ನಮ್ಮ ಶಾಸನಸಂಸ್ಥೆಗಳವರು ಈ ಮರ್ಯಾದೆಯನ್ನು ಸರ್ವದಾ ಜ್ಞಾಪಕದಲ್ಲಿರಿಸಿಕೊಂಡು ಸಂಖ್ಯಾಬಲವನ್ನು ಸಂಖ್ಯಾದುರ್ಬಲರ ಮೇಲೆ ಹೇರ ಹೊರಡುವ ಮನೋಭಾವವನ್ನು ಹದ್ದಿನಲ್ಲಿರಿಸಿಕೊಳ್ಳಬೇಕು. ಸರ್ವಪಕ್ಷ ಸರ್ವವರ್ಗ ಸಮ್ಮತಿಯೇ ರಾಜ್ಯಕ್ಕೆ ಬೆಂಬಲ,ಮತ್ತು ಶಾಸನಕಾರ್ಯಕ್ಕೆ ಸಹಾಯಸಾಧನ.

ಸ್ವಾಸ್ಥ್ಯ ಸಾಧಕ ರಾಜ್ಯವೆಂಬ (ವೆಲ್‌ಫೇರ್‌ಸ್ಟೇಟ್) ನೆಪದಲ್ಲಿ ಪ್ರಜಾಸಮಷ್ಟಿಯ ಅಧಿಕಾರವನ್ನು ಪ್ರಜಾವ್ಯಷ್ಟಿ ಕ್ಷೇತ್ರದಲ್ಲಿ ಪ್ರಯೋಗಿಸುವುದು ಅನ್ಯಾಯವಾಗುತ್ತದೆ.

## ಪ್ರಜಾಪ್ರತ್ಯಕ್ಷ ಶಾಸನ

ಶಾಸನ ಸಂಸ್ಥೆಯು ರಾಜ್ಯದ ಕಾರ್ಯಸಂಸ್ಥೆಯಾದ ಮಂತ್ರಿಸಂಪುಟಕ್ಕೆ ವಹಿಸಿಕೊಡುವ ಕಾರ್ಯಾಧಿಕಾರಗಳ ಪ್ರಯೋಗಗಳನ್ನು ಶಾಸನಸಂಸ್ಥೆಯು ದಕ್ಷತೆಯಿಂದ ತನ್ನ ಮೇಲ್ವಿಚಾರಣೆಗೆ ಒಳಪಡಿಸಿಕೊಳ್ಳಲು ಶಕ್ತಿಸಾಲದ್ದಾದಲ್ಲಿ ಉತ್ತರಬದ್ಧ ರಾಜ್ಯವೆಂಬುದು ಕೇವಲ ನಾಮಮಾತ್ರದ್ದಾಗಿ ಅನುಭವಕ್ಕೆ ಅಲಭ್ಯವಾದೀತು. ಶಾಸನಸಭೆಯು ಇಂಥ ಲೋಪವುಳ್ಳದ್ದಾದಲ್ಲಿ ಅದನ್ನು ಸರಿಪಡಿಸಬೇಕಾದವರು ದೇಶದ ಮಹಾಜನ. ವೈದ್ಯನು ತಾನೇ ಅಪಥ್ಯಮಾಡಿ ರೋಗತಂದುಕೊಂಡಾಗ, ಅವನಿಗೆ ಚಿಕಿತ್ಸೆ ನಡೆಸಬೇಕಾದವರು ಅವನ ಸುತ್ತಮುತ್ತಲಿನ ಆರೋಗ್ಯಸ್ಥರು. ಇಂಥಾದ್ದು ರಾಷ್ಟ್ರಕಪ್ರಜೆಯ ವಿಶೇಷಕರ್ತವ್ಯ. ಈ ಕಾರಣದ ದೃಷ್ಟಿಯಿಂದಲೇ ಕೆಲವು ದೇಶಗಳಲ್ಲಿ ರಾಷ್ಟ್ರಕಪ್ರಜೆಯಿಂದ-ಪ್ರತಿನಿಧಿಮೂಲಕವಲ್ಲದೆ, ಸಾಕ್ಷಾತ್ತಾಗಿ ಅಭಿಪ್ರಾಯ ಗ್ರಹಣಮಾಡಿ, ಅದರಂತೆ ರಾಜ್ಯವನ್ನು ನಡೆಸಬೇಕೆಂಬ ವ್ಯವಸ್ಥೆಯನ್ನಿಟ್ಟುಕೊಂಡಿರುತ್ತಾರೆ. ಆ ರೀತಿಯ ಶಾಸನರಚನೆಯು ಪ್ರಜಾ ನಿರ್ದೇಶ (Initiative, ಇನಿಷಿಯೇಟಿವ್) ಎಂದೂ ಪ್ರಜಾನಿರ್ಧಾರ (Referendum ರೆಫರೆಂಡಮ್) ಎಂದೂ ಎರಡು ಪ್ರಕಾರದ್ದಾಗಿರುತ್ತದೆ.ಜನಹಿತಕ್ಕೆ ಅವಶ್ಯವಾದ ಯಾವ ಏರ್ಪಾಟನ್ನಾದರೂ ಶಾಸನಸಂಸ್ಥೆ ಕೈಕೊಳ್ಳದೆ ತಪ್ಪಿದಲ್ಲಿ ಆ ಬಗ್ಗೆ ಶಾಸನ ವಿಧಿಯನ್ನು ರಚಿಸಲು ಪ್ರಾರಂಭ ಸೂಚನೆಯ "ನಿರ್ದೇಶವನ್ನು" ಕೊಡುವ ಅಧಿಕಾರವೂ, ಯಾವುದಾದರೊಂದು ವಿಷಯವು ಹೆಚ್ಚಿನ ಮಹತ್ವದ್ದಾಗಿ ಅದರ ತೀರ್ಮಾನವು ಶಾಸನ ಸಂಸ್ಥೆಯ ಯೋಗ್ಯತೆಗೆ ಮೀರಿದ್ದೆಂದು ಜನಕ್ಕೆ ಕಂಡುಬಂದಲ್ಲಿ ಅಂಥಾ ವಿಷಯವನ್ನು ಕುರಿತು ಮುಕ್ತಾಯದ "ನಿರ್ಧಾರ"ವನ್ನು ಸೂಚಿಸುವ ಅಧಿಕಾರವೂ ಶಾಸನ ಸಂಸ್ಥೆಯ ಹೊರಗಿರುವ (ಪ್ರತಿನಿಧಿವರಣಕರ್ತರಾದ) ರಾಷ್ಟ್ರಕಮಹಾಜನರಿಗೆ ಇರುತ್ತದೆ. ಅಷ್ಟೇ ಅಲ್ಲದೆ ಶಾಸನ ವಿಷಯವಲ್ಲದಿದ್ದರೂ ದೇಶಕ್ಕೆ ಮುಖ್ಯವಾದ ಎಲ್ಲ ರಾಜಕೀಯ ವಿಚಾರಗಳಲ್ಲಿಯೂ ದೇಶಾಭಿಪ್ರಾಯವನ್ನು ತಿಳಿದುಕೊಂಡು ಅದರಂತೆ ಸರಕಾರ ನಡೆಯತಕ್ಕದ್ದೆಂಬ ವಿಧಿಯೂ ಇರುವುದುಂಟು. ಇದಕ್ಕೆ "ಪ್ಲೆಬಿಸೈಟ್" (Plebiscite) 'ಪ್ರಜಾನುಜ್ಞೆ' ಎಂದು ಹೆಸರು. ಇದರ ಜೊತೆಗೆ ರಾಷ್ಟ್ರಕ ಜನರಿಂದ ವೃಣೀತರಾದ ಪ್ರತಿನಿಧಿಗಳು ರಾಷ್ಟ್ರಕರಿಗೆ ತೃಪ್ತಿಯಾಗುವಂತೆ ಕೆಲಸ ಮಾಡುತ್ತಿಲ್ಲವೆಂದು ರಾಷ್ಟ್ರಕರಿಗೆ ಕಂಡು ಬಂದಲ್ಲಿ ಆಗ ಅವರು ಆ ಪ್ರತಿನಿಧಿಗಳನ್ನು ಪದವಿಯಿಂದ ವಾಪಸ್ಸು ಕರೆಯುವ ಅಧಿಕಾರವನ್ನೂ ಪಡೆದುಕೊಂಡಿರುವುದುಂಟು. ಇದಕ್ಕೆ "ರಿ-ಕಾಲ್" (Recall) ಹಿಂಗರೆ, "ಪರಾವರ್ತನಾಜ್ಞೆ" ಎಂದು ಹೆಸರು. ಹೀಗೆ ಸಾಮಾನ್ಯವಾಗಿ ಪ್ರಜಾಪ್ರತಿನಿಧಿ ಪ್ರಭುತ್ವವಿರುವ ದೇಶದಲ್ಲಿ ಕೆಲವು ವಿಶೇಷ ಸಂದರ್ಭಗಳೊದಗಿದಾಗ (ಪ್ರತಿನಿಧಿಗಳ ಮೇಲೆ) ಪ್ರಜೆಗೆ ಪ್ರತ್ಯಕ್ಷಾಧಿಕಾರವಿರುವುದೂ ಉಂಟು.

ನಮ್ಮ ದೇಶದಲ್ಲಿ ಪ್ರಜಾಪ್ರತಿನಿಧಿ ಸಮಾವಿಷ್ಟವಾದ ಶಾಸನಸಂಸ್ಥೆಗಳ ಅನುಭವವು ಈಗ ತಾನೆ ಪ್ರಾರಂಭವಾಗುತ್ತಿದೆ. ಅವು ಕೆಲವು ಕಾಲ ಕೆಲಸ ನಡೆಸಿದ್ದಾದಮೇಲೆ ಪ್ರಜಾನಿರ್ದೇಶ, ಪ್ರಜಾನಿರ್ಧಾರ, ಪ್ರಜಾನುಜ್ಞೆ, ಪ್ರತಿನಿಧಿ ಪರಾವರ್ತನ ಇತ್ಯಾದಿ ಪದ್ಧತಿಗಳು ಇಲ್ಲಿಯೂ ಅವಶ್ಯವಾದಾವೇನೋ ಎಂಬುದು ನಮಗೆ ಕಾಣಬಂದೀತು.

# ಸರಕೊಪ್ಪಿಸುವವರು ಯಾರು?

ಇಂಗ್ಲಿಷಿನಲ್ಲಿ ಈಚೆಗೆ "ಸರಕು ತಲುಪಿಸುವುದು" ಎಂಬ ಒಂದು ವಾಕ್ಪ್ರಯೋಗ ರೂಢಿಯಾಗಿದೆ (Delivering the goods, ಡೆಲಿವರಿಂಗ್ ದಿ ಗುಡ್ಸ್). ಹಾಗೆಂದರೆ "ಒಪ್ಪಂದ ನೆರವೇರಿಸುವುದು" ಎಂದರ್ಥ. ಒಬ್ಬ ವ್ಯಾಪಾರಗಾರನು ಮತ್ತೊಬ್ಬನಿಗೆ ಇಂಥ ದಿವಸ ಇಷ್ಟು ಹೊತ್ತಿಗೆ ಇಂಥಿಂಥ ಸಾಮಾನುಗಳನ್ನು ಒದಗಿಸತಕ್ಕವನೆಂದು ಒಡಂಬಡಿಕೆ ಮಾಡಿಕೊಂಡ ಮೇಲೆ ಅವನು ಅದರಂತೆ ಗೊತ್ತಾದ ವೇಳೆಗೆ ಗೊತ್ತಾದ ಸಾಮಾನನ್ನು ಗೊತ್ತಾದ ಬೆಲೆಗೆ ತಲುಪಿಸಬೇಕಷ್ಟೆ? ಪ್ರಜಾರಾಜ್ಯದಲ್ಲಿ ರಾಷ್ಟ್ರಕನೊಡನೆ ಒಪ್ಪಂದ ಮಾಡಿಕೊಳ್ಳುವವನು ಪ್ರತಿನಿಧಿ; ಆದರೆ ಆ ಸರಕನ್ನು ತಂದೊಪ್ಪಿಸುವವನು ಪ್ರತಿನಿಧಿಯಲ್ಲ; ಸಂಬಳಕ್ಕಿರುವ ಆಡಳಿತಗಾರ. ಅದು ಎಂಥ ಪ್ರಜಾಸರಕಾರವೇ ಆಗಿರಲಿ ಅದರ ಮೈಯೊಳಗಡೆ ಗಟ್ಟಿ ಮೂಳೆಯಾಗಿ ಕಾರಭಾರಿ ವರ್ಗವೊಂದು ಇದ್ದೇ ತೀರಬೇಕು. ಕಾರಭಾರೀ (ಬ್ಯುರಾಕ್ರಸಿ) ಬೆಂಬಲವಿಲ್ಲದಲ್ಲಿ ಪ್ರಜಾರಾಜ್ಯ (ಡೆಮಾಕ್ರಸಿ) ಕುಸಿದುಬಿದ್ದೀತು.

ಸರಕಾರದಲ್ಲಿ ಶಾಸನಕರ್ತ, ಮಂತ್ರಿ, ಆಡಳಿತಗಾರ-ಈ ಮೂರು ಮಂದಿಯೂ ಸೇರಿಕೊಂಡಿರುತ್ತಾರೆ. ಆ ಮೂವರ ಮನಸ್ಸುಗಳೂ ಮೂರು ಬೇರೆ ಬೇರೆ ರೀತಿಗಳಲ್ಲಿ ಕೆಲಸಮಾಡತಕ್ಕವು; ಏಕೆಂದರೆ ಅವರ ಜವಾಬ್ದಾರಿಯ ರೀತಿಗಳು ಬೇರೆ ಬೇರೆಯಾದವು. ಶಾಸಕನು ಆಲೋಚನೆ ವಿಮರ್ಶನೆಗಳಿಂದ ವಿಧಿನಿರ್ಣಯಗಳನ್ನು ಗೊತ್ತು ಮಾಡಬೇಕಾದವನು. ಮಂತ್ರಿಯು ಹಾಗೆ ಅದಕ್ಕಿಂತ ಕೊಂಚ ಹೆಚ್ಚಿನದು; ಅವನು ಶಾಸನ ನಿರ್ಣಯಗಳಿಗೆ ಮೊದಲು ಪ್ರೇರಣೆಕೊಟ್ಟು, ಆ ಬಳಿಕ ಉಪಕರಣ ಅಧಿವಿಚಾರಣೆಗಳನ್ನು ಒದಗಿಸಬೇಕಾದವನು. ಆಡಳಿತಗಾರನ ಹೊರೆಯಾದರೋ ಬೇರೆ ಬಗೆಯದು. ಅವನು ಆ ಗೊತ್ತಾದ ನಿರ್ಣಯಗಳಿಗೆ ಆ ಗೊತ್ತಾದ ಉಪಕರಣಗಳನ್ನು ಹೊಂದಿಸಿ ಮಂತ್ರಿಗಳ ಕೈ ಕೆಳಗೆ ಕೆಲಸನಡೆಸಬೇಕಾದವನು. ಮಂತ್ರಿ ಶಾಸಕರ ಕಿವಿ ಕಣ್ಣುಗಳು ಮಹಾಜನರ ಕೈ ಚಪ್ಪಾಳೆಯ ಮೇಲೂ, ವೃತ್ತ ಪತ್ರಿಕೆಗಳ ಮೇಲೂ, ಮತಪತ್ರ (ವೋಟು) ಗಳ ಮೇಲೂ ಇರುತ್ತವೆ. ಆಡಳಿಗಾರನ ದೃಷ್ಟಿ ಆ ಕಡೆ ಹೋಗಲೇಬಾರದು. ಅವನು ಪ್ರಸಿದ್ಧಿಯನ್ನಪೇಕ್ಷಿಸುವವನಾಗಬಾರದು. ಸದ್ದುಗದ್ದಲವಿಲ್ಲದೆ ತನ್ನ ದಿನದಿನದ ನಿರಾಡಂಬರದ ಕರ್ತವ್ಯಗಳನ್ನು ತದೇಕದೃಷ್ಟಿಯಿಂದಲೂ ನಿರ್ವಂಚನೆಯಿಂದಲೂ ನಡೆಸಬೇಕಾದವನು ಅವನು. ಮತಕ್ರಮದಿಂದ ಅಧಿಕಾರ ಸಂಪಾದಿಸುವ ಶಾಸನಸಭಾಸದಸ್ಯರು ಮತಕರ್ತರು, ಅವರ ಇಷ್ಟಮಿತ್ರರು, ಹಂಗು ದಾಕ್ಷಿಣ್ಯಗಳಿಗೆ

ಒಳಪಟ್ಟವನು. ಅವನಿಗೆ "ವೋಟು" ಕಳೆದುಹೋದೀತೆಂಬ ಭಯ ಸರ್ವದಾ ಇದ್ದೇ ಇರುತ್ತದೆ. ಆಡಳಿತಗಾರನಾದರೋ ಅಂಥಾ ಹಂಗು ದಾಕ್ಷಿಣ್ಯಗಳಿಗೆ ಒಳಗಾಗದೆ ನುಡಿಯಬೇಕಾದವನು. ಶಾಸನ ವಾಕ್ಯವು ತನಗಾಗಿ ಕಲ್ಪಿಸಿಕೊಟ್ಟಿರುವ ಅವಕಾಶದೊಳಗೆ ಮಂತ್ರಿಯನ್ನೊಪ್ಪಿಸಿಕೊಂಡು ನಿರ್ಭೀತ ಸ್ವಾತಂತ್ರ್ಯದಿಂದ ಆಡಳಿತಗಾರನು ಕಾರ್ಯ ನಡೆಸಿದಲ್ಲದೆ ಶಾಸನನಿರ್ಣಯಗಳು ಸಾರ್ಥಕವಹಲಾರವು. ರಾಜಕೀಯದಲ್ಲಿ ಪಕ್ಷಶಕ್ತಿಗಳ ಅವಾಂತರ ಹೆಚ್ಚಾಗಿರುವ ಕಾಲದಲ್ಲಿ ಖಾಯಂ ಕಾರ್ಯಭಾರಿಯ ನಿರ್ಭೀತ ನಿಷ್ಪಕ್ಷಪಾತತೆಯೇ ನ್ಯಾಯಕ್ಕಿರುವ ಸಂರಕ್ಷಣೆ.

ಮತ್ತೊಂದು ದೃಷ್ಟಿಯಿಂದಲೂ ಖಾಯಂ ಕಾರಭಾರಿಯ ಮುಖ್ಯತೆ ಗಣ್ಯವಾದದ್ದು. ಶಾಸಕರೂ ಮಂತ್ರಿಗಳೂ ಬಂದುಹೋಗುತ್ತಿರುವವರು, ಬದಲಾಯಿಸುತ್ತಿರುವವರು. ಸ್ಥಾಯಿಯಾಗಿ ನಿಂತು ಸಾರ್ವಜನಿಕ ಪ್ರಶ್ನೆಗಳ ಚರಿತ್ರೆಯನ್ನು ಆಮೂಲಾಗ್ರವಾಗಿ ಶೋಧಿಸಿ, ಅನುಭವದಿಂದ ಅದರ ಅರ್ಥವನ್ನು ಕಂಡುಕೊಂಡಿರುವವರು ಖಾಯಂ ಅಧಿಕಾರಿಗಳು. ಈ ಕಾರಣದಿಂದ ಶಾಸನ ಕಾರ್ಯದಲ್ಲಿ ಮಂತ್ರಿಗಳು ಮೊದಲು ಖಾಯಂ ಕಾರಭಾರಿಗಳ ಆಲೋಚನೆಯನ್ನು ತೆಗೆದುಕೊಳ್ಳುವುದು ಎಲ್ಲರಿಗೂ ಕ್ಷೇಮಕರ. ಶಾಸನ ವಿಧಿಗೆ ಆಡಳಿತದ ಅನುಭವದ ಆಧಾರವಿದ್ದಷ್ಟೂ ಕಾರ್ಯಸೌಲಭ್ಯ ಹೆಚ್ಚು.

ಖಾಯಂ ಕಾರಭಾರಿಗಳ ಮುಖ್ಯತೆಯನ್ನು ಮರೆಯುವುದು ಪ್ರಜಾಪ್ರಭುತ್ವದಲ್ಲಿ ಸಾಮಾನ್ಯವಾಗಿರುವ ದೋಷ. ಪ್ರಜಾಪ್ರತಿನಿಧಿಗಳು ತಾವು ಮೇಲ್ಪಟ್ಟವರೆಂಬ, ಮತ್ತು ಕಾರಭಾರಿಗಳು ತಮಗೆ ವಿಧೇಯರಾಗಿರಬೇಕಾದವರೆಂಬ, ಭಾವನೆಯನ್ನು ವಿಪರೀತ ಮಾಡಿಕೊಂಡು, ಕಾರ್ಯೋಪಕಾರಣ ದೃಷ್ಟಿಯೊಂದುಂಟೆಂಬುದನ್ನು ಮರೆಯುತ್ತಾರೆ. ಒಟ್ಟಿನಲ್ಲಿ ಸಾಮಾನ್ಯ ಮನುಷ್ಯನಿಗೆ ರಾಜ್ಯವೆಂದರೆ ಏನು? ಅನ್ನ, ಬಟ್ಟೆ, ಮನೆ ಉದ್ಯೋಗ-ಇಂಥ ದಿನದಿನದ ಪ್ರತ್ಯಕ್ಷ ಸೌಕರ್ಯಗಳೇ ಅವನಿಗೆ ಬೇಕಾದ ಸರಕಾರ. ಅವುಗಳನ್ನು ಪ್ರತ್ಯಕ್ಷಪಡಿಸಬಲ್ಲವರು ಶಾಸನ ಸದಸ್ಯರಲ್ಲ, ಹಳ್ಳಿ ಹಳ್ಳಿಯಲ್ಲೂ ಓಡಾಡುವ ಖಾಯಂ ಆಡಳಿತಗಾರರು - ಶಾನುಭೋಗ, ಪಟೇಲ, ಶೇಕದಾರ, ಅಮಲ್ದಾರ, ಪೋಲಿಸ್ ಇನ್‌ಸ್ಪೆಕ್ಟರು, ಮುನ್ಸೀಫ್, ಮ್ಯಾಜಿಸ್ಟ್ರೇಟು, ಡೆಪ್ಯುಟಿ ಕಮಿಷನರು ಇಂಥವರು. ಜನಕ್ಕೆ ಸರಕಾರವೆಂದರೆ ಈ ಸಾಮಾನ್ಯ ಕಾರ್ಯಾಧಿಕಾರಿಗಳು.

ರಾಜ್ಯನಿಬಂಧನೆಯು ಪುಸ್ತಕದಲ್ಲಿ ಎಷ್ಟು ಒಳ್ಳೆಯದಾಗಿ ಕಂಡುಬಂದರೂ ಅದರ ನಿಜವಾದ ಪರೀಕ್ಷೆ ನಡೆಯುವುದು ಜನಸಾಮಾನ್ಯರ ಅನುಭವದಿಂದ. ಆಡಳಿತದಲ್ಲಿ ಸೊಗಸಿಲ್ಲದಿದ್ದರೆ ಶಾಸನ ಗ್ರಂಥದ ಸೊಗಸು ಕಾಗದದ ಹೂವೇ ಸರಿ. ಶಾಸನಸಂಸ್ಥೆಯ ನಿರ್ಣಯಗಳಲ್ಲಿ ಗರ್ಭೀಕೃತವಾಗಿರುವ ಸದುದ್ದೇಶಗಳನ್ನು ಪ್ರತ್ಯಕ್ಷಪಡಿಸಬೇಕಾದವರು

ಊರೂರಲ್ಲಿಯೂ, ಹಳ್ಳಿ ಹಳ್ಳಿಯಲ್ಲಿಯೂ ಇರುವ ಸರಕಾರದ ಅಧಿಕಾರಿಗಳು, ಪಟೇಲ ಶಾನುಭೋಗರು ಮೊದಲುಗೊಂಡು, ಪೋಲಿಸ್ ಕಾನ್ಸ್‌ಟೆಬಲ್, ಮುನ್ಸಿಪಲ್ ಮೇಸ್ತ್ರಿ ಮೊದಲುಗೊಂಡು, ಮಂತ್ರಿಗಳ ಕಚೇರಿಯವರೆಗಿನ ನಾನಾದರ್ಜೆಗಳ ಎಲ್ಲ ಅಧಿಕಾರಿಗಳೂ ಅವರವರ ಕ್ಷೇತ್ರದಲ್ಲಿ, ಮತ್ತು ಗೊತ್ತಾದ ಸಮಯಾವಧಿಗಳಲ್ಲಿ, ಅವರವರ ಕರ್ತವ್ಯಗಳನ್ನು ನೆರವೇರಿಸುವವರಾಗಬೇಕು. ಹೀಗೆ ಉದ್ದೇಶಗಳು ಕಾರ್ಯಗತವಾದಲ್ಲದೆ ಪ್ರಜಾರಾಜ್ಯಕ್ಕೆ ಯಶಸ್ಸಿಲ್ಲ. ಕಾರ್ಯನಿರ್ವಾಹಕ್ಕಾಗಿ ಸರಕಾರ ನಿಯಮಿಸಿಕೊಂಡಿರುವ ಸಿಬ್ಬಂದಿಗಳು ಹತ್ತಾರು ಶಾಖೆಗಳಾಗಿ, ಹತ್ತಾರು ದರ್ಜೆಗಳಾಗಿ, ನೂರಾರು ಮಂದಿಯನ್ನು ಒಳಗೊಂಡಿರುತ್ತವೆ. ಈ ಬಗೆಬಗೆಯ ಉದ್ಯೋಗಿಗಳಿಗೆ ಕೆಲಸ ನಿಯಮಿಸುವುದೂ ಅವರು ಮಾಡಿದ ಕೆಲಸವನ್ನು ತನಿಖೆಮಾಡುವುದೂ, ತಿದ್ದುವುದೂ, ತಕರಾರುಗಳನ್ನು ಹೋಗಲಾಡಿಸುವುದೂ ಒಂದು ಮಹತ್ತರವಾದ ಜವಾಬ್ದಾರಿ. ಅದೇ ಆಳುವಿಕೆ. ಆಳುವಿಕೆಯಲ್ಲಿ ದಕ್ಷತೆ ಇರುವಂತೆ ನೋಡುವುದೇ ಪ್ರಜಾರಾಜ್ಯದ ಬಹು ಕಷ್ಟವಾದ ಜವಾಬ್ದಾರಿ.

ಇಂಗ್ಲೆಂಡಿನಲ್ಲಿಯೂ ಅಮೆರಿಕದಲ್ಲಿಯೂ ಸರಕಾರಿ ಸಿಬ್ಬಂದಿಗಳಲ್ಲಿ ನಿಜವಾದ ಕಾರ್ಯ ದಕ್ಷತೆಯನ್ನುಂಟುಮಾಡುವುದಕ್ಕಾಗಿ ಬಹು ವಿಧವಾದ ಏರ್ಪಾಟುಗಳನ್ನಿಟ್ಟಿರುತ್ತಾರೆ. ಸರಕಾರಿ ಚಾಕರಿಗೆ ಜನರನ್ನು ಆರಿಸಿಕೊಳ್ಳುವ ವಿಧಾನ, ಅವರನ್ನು ಆಗಾಗ ಪರೀಕ್ಷೆಗೆ ಒಳಪಡಿಸಿ ಯೋಗ್ಯತೆಯನ್ನು ಪ್ರೋತ್ಸಾಹ ಪಡಿಸುವ ರೀತಿ, ಅವರಿಗೆ ಬಡತಿ (ಪ್ರೊಮೋಶನ್) ಕೊಡುವ ನಿಯಮಗಳು, ಅವರ ಸಂಬಳ ಭತ್ಯ ರಜ ಮೊದಲಾದ ಉದ್ಯೋಗ ಸೌಕರ್ಯಗಳ ನಿಯಮಗಳು - ಇವನ್ನೆಲ್ಲ ವಿಶೇಷ ಸೂಕ್ಷ್ಮವಾಗಿ ಆಲೋಚಿಸಿ. ಆ ವ್ಯವಸ್ಥೆಗಳಲ್ಲಿ ಜಾಗರೂಕತೆ ತೋರಿಸುತ್ತಾರೆ. ಅಲ್ಲಿಯ ಕಾಲೇಜುಗಳಲ್ಲಿ "ಪಬ್ಲಿಕ್ ಅಡ್ಮಿನಿಸ್ಟ್ರೇಷನ್" - ಸಾರ್ವಜನಿಕ ಆಡಳಿತ ಎಂಬುದು ಒಂದು ಮುಖ್ಯವಾದ ಬೋಧನ ವಿಷಯವೂ ಪರೀಕ್ಷಾ ವಿಷಯವೂ ಆಗಿರುವುದುಂಟು. ವಿದ್ಯಾರ್ಥಿಗಳು ಡಾಕ್ಟರ್, ಇಂಜನಿಯರ್ ಮೊದಲಾದ ಜೀವನ ವೃತ್ತಿಗಳಿಗೆ ತರಬಿಯತ್ತು ಪಡೆಯುವಂತೆ ಸರಕಾರಿ ಚಾಕರಿಗೂ ಅಲ್ಲಿ ತಯಾರಿಪಡೆಯುತ್ತಾರೆ.

ಜನರು ಪ್ರತಿದಿನದ ಜೀವನದಲ್ಲಿಯೂ ಸರಕಾರದ ಯೋಗ್ಯತೆಯನ್ನು ಕಂಡುಕೊಳ್ಳುತ್ತಿರುತ್ತಾರೆ. ರಸ್ತೆಗಳ ಸ್ಥಿತಿ, ರೈಲು ಪೋಸ್ಟಾಫೀಸುಗಳ ಸಮಯಪಾಲನೆ, ಪೋಲಿಸ್ ಜನರ ಶಿಸ್ತು ಸಹಾನುಶೀಲತೆಗಳು, ಉಪಾಧ್ಯಾಯರ ಶ್ರದ್ಧೆ, ರೆವೆನ್ಯೂ ಫಾರೆಸ್ಟ್ ಅಧಿಕಾರಿಗಳ ಪ್ರಜಾಸಕ್ತಿ, ಮಾನ್ಯಮಂತ್ರಿಗಳವರ ಪ್ರಾಮಾಣಿಕತೆ,

ಕೋರ್ಟುಕಚೇರಿಗಳ ವಿಚಕ್ಷಣೆ - ಇವನ್ನು ಅನುಭವದಿಂದ ಕಂಡುಕೊಳ್ಳದ ಪ್ರಜೆ ಯಾವನೂ ಇರಲಾರ. ಇಂಥ ಅನುಭವದಲ್ಲಿ ಪ್ರಜಾರಾಜ್ಯದ ಉತ್ಕೃಷ್ಟತೆ ಕಾಣಬಾರದೆ ಹೋದಮೇಲೆ ಆ ರಾಜ್ಯಪದ್ಧತಿಯ ಮೇಲ್ಮೆ ಇನ್ನೆಲ್ಲಿದ್ದೀತು?

ಪ್ರಜಾರಾಜ್ಯದ ಮೇಲೆ ನಾಲ್ಕಾರು ದೂರುಗಳು ಹೊತ್ತಿರುತ್ತವೆ. ಅವುಗಳಲ್ಲೆಲ್ಲ ಅತ್ಯಂತ ಪ್ರಬಲವಾದ ದೂರು ಪ್ರಜಾ ಸರಕಾರಕ್ಕೆ ಕಾರ್ಯ ನಿರ್ವಾಹಕ ಶಕ್ತಿ ಸಾಲದೆಂಬುದು. ಪ್ರಜಾನಾಯಕರು ಮಾತನಾಡಬಲ್ಲರೇ ಹೊರತು ತಾವು ಕೊಟ್ಟ ಮಾತನ್ನು ನಡೆಸಿಕೊಡಲು ಬಲ್ಲವರಲ್ಲ. ಅದಕ್ಕೆ ಕಾರಣವೇನೆಂದರೆ ಕಾರ್ಯದ ವಿಧಾನ ಅವರಿಗೆ ಗೊತ್ತಿಲ್ಲ. ಆಡಳಿತವೆಂಬುದು ಅದೇ ಒಂದು ಪ್ರತ್ಯೇಕವಾದ ಕಲೆ. ಅದು ತನಗೆ ಸ್ವಾಧೀನವಾಗಬೇಕೆನ್ನುವವನು ಅದಕ್ಕಾಗಿಯೇ ಹೆಚ್ಚು ವ್ಯಾಸಂಗ ಮಾಡಬೇಕು. ದೇಶದಲ್ಲಿ ಆಡಳಿತದ ವ್ಯಾಸಂಗಿಗಳದೇ ಒಂದು ಬೇರೆ (ವೃತ್ತಿ) ಕಸಬು ಬೆಳೆಯಬೇಕು. ಇದೇ ಸಿವಿಲ್ ಸರ್ವಿಸ್ ಅಥವಾ ಅನುಪಾಲನೋದ್ಯೋಗ. ಆ ಉದ್ಯೋಗಕ್ಕೆ ಬೇಕಾದ ಸೌಕರ್ಯಗಳೂ ಸ್ವಾತಂತ್ರ್ಯಗಳೂ ಕೆಲವು ಪ್ರತ್ಯೇಕವಾಗಿರುತ್ತವೆ. ಅವುಗಳನ್ನು ಪ್ರಜಾರಾಜ್ಯವು ಸಿದ್ಧಪಡಿಸಿಕೊಡಬೇಕು.

ನಮ್ಮ ದೇಶದಲ್ಲಿ ಶಾಸನಕಾರ್ಯ ಹೆಚ್ಚಾಗಿ ನಡೆಯುತ್ತಿದೆ. ನಿರ್ವಾಹಕಕಾರ್ಯ ಕಡಿಮೆಯಾಗಿದೆ. ಕಾನೂನು ಅತಿಯಾಗಿದೆ, ಆಡಳಿತ ಅಲ್ಪವಾಗಿದೆ. ಪ್ರಜಾರಾಜ್ಯವು ಇನ್ನೂ ಹೊಸದಾಗಿರುವ ಕಡೆ ಇದು ಸಾಮಾನ್ಯವಾಗಿರುವ ಲಕ್ಷಣ. ಒಳ್ಳೆಯ ಮಾತನ್ನಾಡಿಬಿಟ್ಟರೆ ಎಲ್ಲ ಸಾಧನೆಯೂ ಆಯಿತೆಂಬುದು ಅಲ್ಲಿಯ ರಾಜಕೀಯಸ್ಥರ ತಿಳಿವಳಿಕೆ. ಈ ಭಾಷಣೋತ್ಸಾಹದ ಜೊತೆಗೆ ನಮ್ಮಲ್ಲಿ ಜಾತ್ಯಭಿಮಾನ ಮತಾಭಿಮಾನ ವರ್ಗಾಭಿಮಾನಗಳ ಅತಿರೇಕ ಸೇರಿಕೊಂಡಿದೆ. ಸರಕಾರದಲ್ಲಿಯ ಜವಾಬ್ದಾರಿಯ ಸ್ಥಾನಗಳಿಗೆ "ಈ ಕೋಮಿನವರನ್ನು ತರಬೇಕು" "ಆ ಗುಂಪಿನವರನ್ನು ಎತ್ತಬೇಕು," "ಈ ಒಂದು ಪಂಗಡದವರು ಬೇಡ, ಆ ಮತ್ತೊಂದು ಪಂಗಡದವರು ಬೇಕು" ಎಂಬೀ ಪಕ್ಷಾ-ಪಕ್ಷಗಳ ಗದ್ದಲದಲ್ಲಿ ಉದ್ಯೋಗಸ್ಥಾನಕ್ಕೆ ಬೇಕಾದ ದಕ್ಷತೆ ಸಾಮರ್ಥ್ಯಗಳೆಂಥವೆಂಬ ವಿಚಾರ ಮೂಲೆಗೆ ಹೋಗುತ್ತದೆ. ಹೀಗಾಗಿ ನಮ್ಮ ಆಡಳಿತದ ವರ್ಗಗಳ ಯೋಗ್ಯತೆ ಕೀಳ್ಪಟ್ಟಿಳಿಯುತ್ತದೆ. ಕೆಲವು ಕೋಮುಗಳ ಲಾಭವು ಮಹಾಜನರೆಲ್ಲರಿಗೂ ನಷ್ಟಕರವಾಗುತ್ತದೆ.

ಆಡಳಿತವು ಕೂಡಿದಮಟ್ಟಿಗೆ ಸಮರ್ಪಕವಾಗಿರಬೇಕಾದರೆ ಪ್ರಜಾರಾಜ್ಯವು ಎರಡು ನಿಯಮಗಳನ್ನು ಶ್ರದ್ಧೆಯಿಂದ ಅಂಗೀಕರಿಸಿ ಪರಿಪಾಲಿಸಬೇಕು:

1) **ಸಾಮರ್ಥ್ಯಕ್ಕೇ ಆದ್ಯಸ್ಥಾನ:** ಸರಕಾರೀ ಉದ್ಯೋಗಗಳಿಗೆ ಜನರನ್ನು ಆರಿಸಿಕೊಳ್ಳುವುದರಲ್ಲಿ ಯೋಗ್ಯತೆ ಸಾಮರ್ಥ್ಯಗಳಿಗೆ ಪ್ರಥಮ ಸ್ಥಾನವನ್ನು ಕೊಡಬೇಕು.

ಮಿಕ್ಕೆಲ್ಲ ಆಲೋಚನೆಗಳೂ ಆಮೇಲೆ ಬರಬಹುದು. ಹಿಂದುಳಿದ ವರ್ಗಗಳನ್ನು ಮುಂದಕ್ಕೆ ತರಬೇಂಬ ನ್ಯಾಯವು ಸಹ ಎರಡನೆಯ ಜಾಗದಲ್ಲಿರಬೇಕಾದದ್ದು. ಮೊದಲನೆಯ ಜಾಗ ಯೋಗ್ಯತೆಯದು. ಪ್ರೊಮೋಷನ್ (ಬಡ್ತಿ) ವಿಚಾರದಲ್ಲಿಯೂ ಹಾಗೆಯೇ ಇರಬೇಕು.

ii) ಕರ್ತವ್ಯ ಸ್ವಾತಂತ್ರ್ಯ: ಅಧಿಕಾರ ಪ್ರಯೋಗ ವಿಚಾರದಲ್ಲಿ ಶಾಸನ ಸಭಾ ಸದಸ್ಯರೂ ಇತರ ಪ್ರಜಾಪ್ರಮುಖರೂ ಪ್ರವೇಶ ಮಾಡದೆ, ಅಧಿಕಾರಿಯು ನಿರ್ಭೀತನಾಗಿ ಸ್ವಕರ್ತವ್ಯವನ್ನು ನೆರವೇರಿಸಲು ಅವನನ್ನು ಸ್ವಾತಂತ್ರನನ್ನಾಗಿ ಬಿಡಬೇಕು. ಅವನ ಮೇಲೆ ಕಕ್ಷಪಕ್ಷ ಪ್ರಮುಖರೂ ರಾಜಕೀಯ ಗಣ್ಯರೂ ಒತ್ತಾಯ ಹಾಕಬಾರದು. ಸರಕಾರೀ ನೌಕರರನ್ನು ಮಾತನಾಡಿಸಬೇಕಾದವರು ಆಯಾ ಇಲಾಖೆಗಳ ಅಧಿಕಾರಿಗಳು-ಅವರವರ ಅಂತಸ್ತಿನ ಕ್ರಮದಲ್ಲಿ; ಮತ್ತು ಆಯಾ ಅಧಿಕಾರ ನಾಳಿಕೆಯ ಮುಖಾಂತರವಾಗಿ ಅಧಿವಿಚಾರಣೆ ನಡೆಸುವ ಮಂತ್ರಿಗಳು. ಸಾರ್ವಜನಿಕರು ಶಾಸನ ಸಂಸ್ಥೆಯ ಮೂಲಕವಲ್ಲದೆ ಅವರ ಗೊಡವೆಗೆ ಹೋಗತಕ್ಕದ್ದಲ್ಲ.

## ವ್ಯಕ್ತಿ ಯೋಗ್ಯತೆ

ಈ ನಿಬಂಧನೆ ವ್ಯವಸ್ಥೆಗಳನ್ನು ಎಷ್ಟು [illegible] ಎಷ್ಟು ಪರಿಪೂರ್ಣಗೊಳಿಸಿದರೆ ತಾನೆ ಏನು - ಮನುಷ್ಯರ ಯೋಗ್ಯತೆ ಸರಿಯಾಗಿದ್ದರೆ? "ಯಥಾ ರಾಜಾ ತಥಾ ಪ್ರಜಾ" ಎಂಬುದು ಪ್ರಾಚೀನರ ಮಾತು, ಅದನ್ನು ಹಿಂದು ಮುಂದು ತಿರುಗಿಸಿದರೆ ಈ ಕಾಲಕ್ಕೆ ಅನ್ವಯಿಸುತ್ತದೆ: "ಯಥಾ ಪ್ರಜಾ ತಥಾ ರಾಜ್ಯಂ." ಒಳ್ಳೆಯ ಸರ್ಕಾರದ ಒಳ್ಳೆಯತನ ತೋರಪಡಬೇಕಾದರೆ ಅದನ್ನು ನಡೆಸುವ ಜನ ಒಳ್ಳೆಯವರಾಗಿರಬೇಕು. ಕಟ್ಟಡ ಚೆನ್ನಾಗಿರಬೇಕಾದರೆ ನಕ್ಷೆ ಚೆನ್ನಾಗಿದ್ದರೆ ಸಾಲದು, ಸಾಮಾನೂ ಕೆಲಸಗಾರರೂ ಚೆನ್ನಾಗಿರಬೇಕು. ಒಳ್ಳೆಯ ರಾಜ್ಯನಿಬಂಧನೆ ಕೆಟ್ಟ ಜನರ ಕೈಗೆ ಸಿಕ್ಕಿದರೆ [illegible] ಉಗ್ರಾಣದ ಬಾಗಿಲನ್ನು ಕಳ್ಳರಿಗೆ ತೆರೆದಿಟ್ಟ ಹಾಗೆ.

ರಾಷ್ಟ್ರದ ಉನ್ನತಿ ಅವನತಿಗಳ ಬೇರು ಇರುವುದು ವ್ಯಕ್ತಿಮನುಷ್ಯನಲ್ಲಿ. ವ್ಯಕ್ತಿಯೇ ಸಮಾಜದ ಜೀವನ ಜಲದ ಚಿಲುಮೆ. ಆ ಚಿಲುಮೆಯನ್ನು ಬತ್ತಿಸಬಾರದು, ಕೆಡಿಸಬಾರದು, ಹಾಳುಮಾಡಬಾರದು. ಆ [illegible] ತಿಳಿಯಾಗಿ ಧಾರಾಳವಾಗಿ ಹರಿದು [illegible] ಬಾಳಿಗೆ [illegible].

ವ್ಯಕ್ತಿ ಪ್ರಾಣಿಗೆ ಬೆಲೆ ಕೊಡದ, ವ್ಯಕ್ತಿಗುಣಕ್ಕೆ ಮರ್ಯಾದೆಮಾಡದ, ರಾಜ್ಯವು ದೊಂಬಿಯು ಬಲಾತ್ಕ್ಯಾಗದೆ ಏನಾದೀತು?

## ನಮ್ಮ ಅನುಭವ ನಮಗೆ ಗುರು

ರಷ್ಯದಲ್ಲಿ ಈ ಪದ್ಧತಿ ಪ್ರಾರಂಭವಾಗಿ ಇನ್ನೂ 60 ವರ್ಷಗಳಾಗಿಲ್ಲ. ಒಂದಾನೊಂದು ರಾಜ್ಯದ ಅಥವಾ ಜನಾಂಗದ ಹಣೆಬರಹವನ್ನು ಗೊತ್ತು ಮಾಡಲು 60 ವರ್ಷಗಳ ಕಾಲ ಪ್ರಮಾಣವೇನೂ ದೊಡ್ಡದಲ್ಲ. ಇಂಡಿಯಾ ದೇಶದಲ್ಲಿ ಬ್ರಿಟಿಷರ ಪ್ರಭುತ್ವ 300 ವರ್ಷ ಇದ್ದು ಮುಳುಗಿಹೋಗಿದೆ.ಬಿಡಿ ಮನುಷ್ಯರಿಗಿರುವಂತೆಯೇ ಸಮಾಜ ಸಂಸ್ಥೆಗಳಿಗೂ ಕಾಲದ ಪರೀಕ್ಷೆಯುಂಟು. ಆದದ್ದರಿಂದ 60 ವರ್ಷಗಳ ಮಾತ್ರದ ಅನುಭವದಿಂದ ನಾವು ಯಾವ ಪಾಠವನ್ನೂ ಕಲಿಯಲಾಗದು. ಈ 60 ವರ್ಷಗಳಲ್ಲಿಯೂ ರಷ್ಯದ ಪದ್ಧತಿ ನಾಲ್ಕಾರುಸಲ ಬದಲಾವಣೆ ಹೊಂದಿದೆ. ಇನ್ನೂ ಅದು ಬದಲಾವಣೆಯಾಗುತ್ತಿದೆ.ಅಲ್ಲಿನ ಒಳಅನುಭವವನ್ನು ಪಡೆದವರು ಯಾರೂ ಸ್ಪಷ್ಟವಾಗಿ ಮಾತನಾಡುತ್ತಿಲ್ಲ. ವಾಗ್ಬಂಧನ ಮೊದಲಾದ ದಂಡನೆಗಳ ಭಯ ಅಲ್ಲಿ ಹೆಚ್ಚಾಗಿದೆ.

ಹೀಗೆ ನೋಡಿದರೆ ರಷ್ಯವನ್ನು ಇನ್ನೂ ಅನುಮಾನತ್ತಿನಲ್ಲಿ (Suspense) ಇಟ್ಟಿರುವುದು ಕ್ಷೇಮಕರ. ಅಲ್ಲಿಯ ಪಾಠ ನಮಗೆ ಸದ್ಯಕ್ಕೆ ಉಪಯುಕ್ತವಾಗತಕ್ಕದ್ದಲ್ಲ.

ನಮಗೆ ಆಗಿಬಂದಿರುವ ಪದ್ಧತಿಯಲ್ಲಿ ಎಲ್ಲಿ ನ್ಯೂನತೆಗಳೂ ಕಷ್ಟಗಳೂ ನಮ್ಮ ಅನುಭವಕ್ಕೆ ಕಂಡುಬಂದಿವೆಯೋ ಅಂಥ ವಿಷಯಗಳನ್ನು ನಮಗೆ ತಕ್ಕ ಮಾತ್ರ ನಾವು ತಿದ್ದಿಕೊಂಡು ಮುಂದೆ ನಡೆಯುವುದು ಶ್ರೇಯಸ್ಸಿನ ಮಾರ್ಗ. ನಮ್ಮ ಸ್ವಂತ ಸಂದರ್ಭಗಳು ನಮಗೆ ಪ್ರೇರಕಗಳಾಗಬೇಕು. ನಮ್ಮ ಅನುಭವ ನಮ್ಮ ಗುರು.

## ಮೂಲಭೂತ ಹಕ್ಕುಗಳು
## ಸ್ವಾತಂತ್ರ್ಯಕ್ಕೆ ಪರಿಮಿತಿ ಅವಶ್ಯ

ಮನುಷ್ಯನನ್ನು ಸಭ್ಯನನ್ನಾಗಿ–ಸಭಾಯೋಗ್ಯನನ್ನಾಗಿ–ಮಾಡಿರುವುದು ರಾಜ್ಯ.

ಕಾಡುಮನುಷ್ಯನು ಊರಮನುಷ್ಯನಾಗಿರುವುದು ರಾಜ್ಯ ಕಲಿಸಿದ ನಯ ನೀತಿಗಳ ಮಹಿಮೆಯಿಂದ.

ರಾಜ್ಯವೆಂಬುದು ಒಂದು ಕಟ್ಟುಪಾಡು. ಅದು ಒಂಟಿಮನುಷ್ಯನಿಗೂ ಮನುಷ್ಯರೊಟ್ಟಿಗೂ ಏಳಬಹುದಾದ ತಿಕ್ಕಾಟವನ್ನು ತಪ್ಪಿಸುವ ಉಪಾಯ. ಮನುಷ್ಯನು

ಹುಟ್ಟಿನಿಂದ ಸರ್ವಸ್ವತಂತ್ರ್ಯನು. ಅವನ ಸ್ವಾತಂತ್ರ್ಯವು ಅವನ ಉಸಿರಿನಂತೆ ಕೃತಕವಾದ ಮಿತಿಮೇರೆಗಳಿಲ್ಲದ್ದು. ಅವನು ಏನು ಬೇಕಾದರೂ ಮಾಡಬಹುದು, ಹೇಗೆ ಬೇಕಾದರೂ ಇರಬಹುದು. ಆದರೆ ಯಾವ ಮನುಷ್ಯನಾದರೂ ಏಕಾಕಿಯಾಗಿ ಜೀವಿಸಲಾರ.ಅವನ ಬದುಕು ನೆಮ್ಮದಿಯಲ್ಲಿ ಸಾರ್ಥಕವೆನಿಸಬೇಕಾದರೆ ಅವನಿಗೆ ಇತರ ಜನರ ಸಹಾಯ ಅಷ್ಟೋ ಇಷ್ಟೋ ಬೇಕೇ ಬೇಕು.

ಮನೆ ಬೇಕು, ಊಟ ಬೇಕು, ಬಟ್ಟೆ ಬೇಕು-ಏನೇನೋ ಲೆಕ್ಕವಿಲ್ಲದಷ್ಟು ಬೇಕು. ಇದನ್ನೆಲ್ಲ ಬೇರೆ ಬೇರೆ ಜನ ಅವನಿಗೆ ಒದಗಿಸಬೇಕು.

ಹೀಗೆ ಅವನ ಸುತ್ತಮುತ್ತ ಒಂದು ಪರಿವಾರ ಇರಬೇಕಾಗುತ್ತದೆ.

ಅವನು ಹುಟ್ಟಿನಿಂದ ಏಕಾಕಿ; ಬದುಕಿಗಾಗಿ ಸಮಾಜ. ಹುಟ್ಟಿನಿಂದ ಸ್ವತಂತ್ರ; ಬದುಕಿಗಾಗಿ ವಿಧೇಯ. ಅವನು ಇನ್ನೊಬ್ಬನ ಮಾತನ್ನು ಕೇಳಿನೆಂದರೆ ಆ ಇನ್ನೊಬ್ಬನು ಅವನ ಮಾತನ್ನು ಕೇಳಬೇಕಾದದ್ದಿಲ್ಲ. ಏಕೆಂದರೆ ಆ ಇತರರೂ ಅವನಷ್ಟೇ ಸ್ವತಂತ್ರರು. ಪ್ರತಿಯೊಬ್ಬನೂ ಸರ್ವಸ್ವತಂತ್ರನಾಗಿ ಬಾಳಬೇಕೆನ್ನುವ ಪಕ್ಷದಲ್ಲಿ ಬದುಕು ಉಳಿಯದು. ಒಡೆದು ಹೋದಮೇಲೆ ಮನುಷ್ಯಜೀವನ ಏನಾಗುತ್ತದೆ? ಅದೇ ಅನಾಯಕ. ಪ್ರತಿಯೊಬ್ಬನ ಬದುಕೂ ಆಗ ಅಪಾಯಕ್ಕೆ ಸಿಕ್ಕಿ ಅರೆಕೊರೆಯಾಗಲೇಬೇಕು. ಹೀಗೆ ಜೀವನ ನಷ್ಟ; ಜೀವನ ವ್ಯರ್ಥ.

ಆದದ್ದರಿಂದ ಮನುಷ್ಯ ತನಗೆ ಹುಟ್ಟಿನಿಂದ ಬಂದಿರುವ ಅಪರಿಮಿತವಾದ ಸ್ವಾತಂತ್ರ್ಯವನ್ನು ತಾನೊಬ್ಬನೇ ತನ್ನೊಬ್ಬನಿಗಾಗಿ ಉಳಿಸಿಕೊಳ್ಳದೆ ಅದರ ಕೊಂಚ ಭಾಗವನ್ನು ಇತರರಿಗಾಗಿ ಬಿಟ್ಟುಕೊಡಬೇಕಾಗುತ್ತದೆ. ಈ ಸ್ವಾತಂತ್ರ್ಯ ಪರಿಮಿತಿಗೆ ಅವನು ತಾನಾಗಿ ಒಪ್ಪಿಕೊಂಡು ಬಂದಿದ್ದಾನೆ.ಇದು ಅನಾದಿಯಾಗಿ ಬಂದಿರುವ ಪರಿಸ್ಥಿತಿ.

## ರಾಜ್ಯ, ಶಾಸನಗಳ ಹುಟ್ಟು

ಬಿಡಿ ಮನುಷ್ಯನು ತನಗೆ ಸಹಜವಾಗಿ ಬಂದಿರುವ ಪೂರ್ಣ ಸ್ವಾತಂತ್ರ್ಯದಲ್ಲಿ ಕೊಂಚ ಭಾಗವನ್ನು ಸಮಾಜಕ್ಕಾಗಿ ಬಿಟ್ಟುಕೊಡುತ್ತಾನೆ. ಉಳಿದದ್ದನ್ನು-ಸ್ವಾಭಾವಿಕವಾಗಿ ತನಗೆ ಬಂದ ಸ್ವಾತಂತ್ರ್ಯದ ಒಂದು ಭಾಗವನ್ನು - ತಾನು ಇರಿಸಿಕೊಳ್ಳುತ್ತಾನೆ. ಹೀಗೆ ಅವನು ತನ್ನವರಿಗಾಗಿ ಬಿಟ್ಟುಕೊಟ್ಟ ಸ್ವಾತಂತ್ರ್ಯಾಂಶವು ಅವರದು - ಎಂದರೆ ಒಟ್ಟು ಸಮಾಜದ ಸ್ವತ್ತು ಆಗುತ್ತದೆ. ಹೀಗೆ ಅವನು ಬಿಟ್ಟುಕೊಟ್ಟದ್ದು ಸಮಾಜದ ಅಧಿಕಾರ; ಇದೇ ರಾಜ್ಯದ ಮೊದಲ ಹಕ್ಕು. ಅದೇ ಕಾನೂನಿಗೆ ಶಿಕ್ಷತಕ್ಕದ್ದು. ಇದೇ ನ್ಯಾಯಾಂಶ.

ಈ ಆತ್ಮೀಯಭಾವನೆಯೇ ಸಮಾಜದ ಎಲ್ಲ ಸಿದ್ಧಿಗಳಿಗೂ ಬೀಜಪ್ರಾಯವಾದದ್ದು. "ನಾನು ಜೀವಿಸಬೇಕು, ನಾನು ಸಂಪಾದಿಸಬೇಕು, ನಾನು ಸಾಧಿಸಬೇಕು" ಎಂಬೀ ರೀತಿಯಾದ ಸ್ವಪ್ರಯತ್ನಕ್ಕೆ ಅವನಿಗೆ ಬೇಕಾದ ಸ್ವಾತಂತ್ರ್ಯವೇ ಮೂಲಭೂತ ಹಕ್ಕು.

## ವ್ಯಕ್ತಿ ಸ್ವಾತಂತ್ರ್ಯ: ರಾಜ್ಯದ ಪರಮಸಿದ್ಧಿ

ಪ್ರಜಾವ್ಯಕ್ತಿಯು ನೈಜವಾದ ಉತ್ಸಾಹದಿಂದ ತನ್ನ ಶ್ರೇಯಸ್ಸಿಗಾಗಿ, ತನ್ನ ಅಭಿವೃದ್ಧಿಗಾಗಿ ಶ್ರಮಿಸದೆ ಇದ್ದರೆ ರಾಜ್ಯದ ಶ್ರೇಯಸ್ಸಿಲ್ಲ. ಸರಕಾರವು ಎಷ್ಟೇ ಪ್ರಯತ್ನ ಮಾಡಲಿ ಅದು ಪ್ರಜೋತ್ಸಾಹವಿಲ್ಲದೆ ಸಾರ್ಥಕವಡಲಾರದು.ವ್ಯಕ್ತಿಪ್ರಜೆಯ ಉತ್ಸಾಹ ಸಾಹಸಗಳೇ ರಾಜ್ಯಾಭಿವೃದ್ಧಿಯ ತಳಹದಿಯಾದ ಕಾರಣದಿಂದ ರಾಜ್ಯದ ಶ್ರೇಯಸ್ಸಿಗಾಗಿ ಇರುವ ಈ ಮೊದಲ ಸಾಧನೆಯನ್ನು ರಾಜ್ಯವು ಅಪಹರಿಸಬಾರದು.

ವ್ಯಕ್ತಿಪ್ರಜೆಯ ಸ್ವಾಭಾವಿಕೋತ್ಸಾಹವೇ- ಅವನ ವ್ಯಕ್ತಿಸ್ವಾತಂತ್ರ್ಯ ಪ್ರಯತ್ನಗಳೇ-ರಾಜ್ಯದ ಅಭಿವೃದ್ಧಿಯ ಮುಖ್ಯ ಮೂಲಬೀಜಗಳು.

ಹೀಗೆ ವ್ಯಕ್ತಿಪ್ರಜೆಯ ಮೂಲಭೂತಹಕ್ಕು ಪ್ರಜೆಯೊಟ್ಟಿನ-ರಾಜ್ಯದ-ಪರಮಸಿದ್ಧಿಯಾಗುತ್ತದೆ.

## ಮೂರು ದರ್ಜೆಯ ಸ್ವತಂತ್ರಾಧಿಕಾರ

ಮನುಷ್ಯನಿಗೆ ನೈಜವಾಗಿ ಸ್ವಭಾವದಿಂದ ಹುಟ್ಟಿನಿಂದ ಬಂದಿರುವ ಸ್ವತಂತ್ರಾಧಿಕಾರವು ಮೂರು ದರ್ಜೆಯದಾಗುತ್ತದೆ:

1. ಸಹಜವಾದವು ಮತ್ತು ಮೂಲಭೂತವಾದವು;

2. ಸಮಾಜದ ಪ್ರಯೋಜನಕ್ಕಾಗಿ ರಾಜ್ಯದ ಏರ್ಪಾಟಿಗಾಗಿ ಅವನು ತಾನಾಗಿ ಬಿಟ್ಟುಕೊಟ್ಟಂಥವು;

3. ಸಮಾಜವು ಎಂದರೆ ರಾಜ್ಯವು ನಿರ್ಬಂಧವಾಗಿ,ಶಾಸನಾನುಸಾರವಾಗಿ, ಸಮಾಜದ ಹೆಸರಿನಲ್ಲಿ ಅವನ ಕೈಯಿಂದ ತೆಗೆದುಕೊಂಡವು.

ಹೀಗೆ ಎರಡು ತೀರಿನಲ್ಲಿ ಅವನು ಸಮಾಜಕ್ಕಾಗಿ ಬಿಟ್ಟುಕೊಟ್ಟ ಭಾಗವು ಹೋಗಲಾಗಿ ಇನ್ನೂ ಉಳಿದುಕೊಂಡಿರುವುವು ಮೂಲಭೂತಹಕ್ಕುಗಳು.

# ತಕರಾರು: ತೀರ್ಮಾನ

ಈ ಮೂಲಭೂತ ಹಕ್ಕುಗಳ ವಿಷಯದಲ್ಲಿ ತಕರಾರು ಏಳಬಹುದು. ರಾಜ್ಯವು-ಸರಕಾರವು –ಇನ್ನೂ ಒಂದುಸಲ ಭಾಗ ಬೇಕೆಂದು ಕೇಳಬಹುದು. ಹೀಗೆ ಮೂಲಭೂತ ಹಕ್ಕಿನ ಇನ್ನೂ ಕೆಲವು ಭಾಗವನ್ನು ಬಿಟ್ಟುಕೊಡೆಂದು ಸರಕಾರ ಕೇಳಿದಾಗ ಈ ಮೂಲಭೂತಹಕ್ಕನ್ನು ಬಿಟ್ಟುಕೊಡೆನೆಂದು ಪ್ರಜೆ ಹೇಳಬಹುದು. ಪ್ರಜೆ ತನಗಾಗಿ ಉಳಿಸಿಕೊಂಡಿರುವ ಮೂಲಭೂತ ಹಕ್ಕು ಪರಭಾರೆ ಮಾಡತಕ್ಕದ್ದಲ್ಲ (inalienable). ಅದನ್ನು ಯಾರೂ ಮುಟ್ಟತಕ್ಕದ್ದಲ್ಲ.ಅದು ರಾಜ್ಯದ ಸ್ವತ್ತಲ್ಲ, ಆದಕ್ಕೆ ಸರಕಾರದ ಅಧಿಕಾರವಿಲ್ಲ ಎಂದು ಪ್ರಜೆ ವಾದಿಸಬಹುದು. ಆಗ ತಕರಾರು.

ಇದನ್ನು ಫೈಸಲು ಮಾಡುವವರು ಯಾರು?

ಈಗಿರುವ ಕಾನೂನಿನ ಪ್ರಕಾರ ಈ ತಕರಾರನ್ನು ಕೋರ್ಟುಗಳ ಮುಂದೆ ಇರಿಸಬಹುದು. ಆಗ 1. ಕೋರ್ಟಿಗೆ ಈ ವಿಚಾರದಲ್ಲಿ ತೀರ್ಮಾನ ಕೊಡಲು ಅಧಿಕಾರವಿಲ್ಲವೆಂದು ಪ್ರತಿವಾದ ಹೊರಡಬಹುದು; 2. ಒಂದು ವೇಳೆ ಕೋರ್ಟು ತೀರ್ಮಾನಕೊಟ್ಟರೂ ಅದು ಒಪ್ಪತಕ್ಕದ್ದಲ್ಲವೆಂದು ಯಾವ ಪಕ್ಷಿಯಾದರೂ– ಸರಕಾರವಾಗಲೀ, ವ್ಯಕ್ತಿಪ್ರಜೆಯಾಗಲೀ–ವಾದಿಸಬಹುದು. ಇಂಥ ಸಂಧಿಯಲ್ಲಿ ಆಖೈರು ತೀರ್ಮಾನ ಎಲ್ಲಿಂದ ಬರಬೇಕು?

ಈ ವಿಷಯ ಇನ್ನೂ ಇತ್ಯರ್ಥಕ್ಕೆ ಬಾರದೆ ಇದೆ. ಇದಕ್ಕೆ ಪರಿಹಾರ ಎರಡು ವಿಧದಲ್ಲಿರಬಹುದು:

1. ಮೇಲಿನ ಕೋರ್ಟು ಕೊಟ್ಟ ತೀರ್ಮಾನವೇ ಕಡೆಯ ತೀರ್ಮಾನ ಎಂದು ಅಂಗೀಕರಿಸುವುದು:

2. ಮೇಲ್ಕೋರ್ಟಿಗೂ ಶಾಸನಸಂಸ್ಥೆ ಮಾಡಿದ ನಿರ್ಣಯಕ್ಕೂ ಇರುವ ವ್ಯತ್ಯಾಸವನ್ನು ಸಮಜಾಯಿಷಿಯಿಂದ ಪರಿಹಾರಮಾಡಿ ರಾಜೀಖಬೂಲಿ ಮಾಡಿಸಲು ಬೇರೊಂದು ಪಂಚಾಯತಿ ಸಂಸ್ಥೆಯನ್ನು ಕಾನೂನೇ ತೋರಿಸಿಕೊಡಬಹುದು.

# ಪ್ರಜಾರಾಜ್ಯಕ್ಕೆ ತರಬೇತಿ

## ಸ್ವಾತಂತ್ರ್ಯದಿಂದ ಆದ ಉಪಯೋಗ

ಈ ಪುಸ್ತಕ ಮೊದಲು ಪ್ರಕಟನೆಯಾದದ್ದು 1952ರಲ್ಲಿ.

ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬಂದದ್ದು 1947ರಲ್ಲಿ (15-8-1947). ಇಂಡಿಯಾದ ರಾಜ್ಯನಿಬಂಧನೆ ಅನುಮತಿ ಪಡೆದದ್ದು 26-1-1950 ರಲ್ಲಿ. ಈ 25 ವರ್ಷಗಳಲ್ಲಿ ದೇಶ ಹೇಗೆ ಸಾಗಿದೆ? -ಎಂಬುದನ್ನು ಈಗ ಸಂಕ್ಷೇಪವಾಗಿ ವಿಮರ್ಶೆ ಮಾಡಬಹುದು.

ಸ್ವಾತಂತ್ರ್ಯದಿಂದ ಎಷ್ಟೋ ಅಸೌಕರ್ಯಗಳು ತೊಲಗಿ ಸೌಕರ್ಯಗಳು ದೊರೆಯಬಹುದು. ಅದು ಎಷ್ಟು ಮಾತ್ರ ನಡೆದಿದೆ?

ಇಂಡಿಯದ ಇಂದಿನ (1973) ರಾಜ್ಯನಿಬಂಧನೆಯಿಂದಲೂ ಅದರ ಆಧಾರದ ಮೇಲೆ ನಡೆಯುತ್ತಿರುವ ಕಾರುಭಾರಗಳಿಂದಲೂ ಜನಕ್ಕೆ ಸೌಖ್ಯ ನೆಮ್ಮದಿಗಳು ಅವರು ನಿರೀಕ್ಷಿಸಿಕೊಂಡಿದ್ದಷ್ಟು ಮಟ್ಟಿಗೆ ಕರಗತವಾಗಿಲ್ಲವೆಂದು ಹೇಳಬೇಕಾಗಿದೆ. ಬಹು ಸ್ಥಳಗಳಲ್ಲಿ ಅಶಾಂತಿ ಕಾಣುತ್ತಿದೆ. ಪ್ರಾಂತ ಸರಕಾರಗಳ ಆಡಳಿತ ಎಲ್ಲಿಯೂ ಇನ್ನೂ ಹದಕ್ಕೆ ಬಂದಿಲ್ಲ, ಅಲ್ಲಲ್ಲಿ ಅಕ್ರಮ, ಲಂಚ, ಅದಕ್ಷತೆಗಳ ಧ್ವನಿ ಕೇಳಬರುತ್ತಿದೆ.ಒಟ್ಟಿನ ಮೇಲೆ ಎಷ್ಟೋ ಲೋಪಗಳೂ ದೌರ್ಬಲ್ಯಗಳೂ ಹೆಚ್ಚಾಗಿ ಕಾಣಿಸಿಕೊಂಡಿವೆ. ಕೆಲವುಮಂದಿಯ ಅಭಿಪ್ರಾಯದಲ್ಲಿ ಬ್ರಿಟಿಷರ ಕಾಲದಲ್ಲಿದ್ದದ್ದಕ್ಕಿಂತ ಈಗ ಜನರ ಒಟ್ಟು ಸ್ಥಿತಿ ಹದಗೆಟ್ಟಿದೆ, ಅವರ ಕಷ್ಟನಿಷ್ಠೂರಗಳು ಹೆಚ್ಚಾಗಿವೆ. ಆದರೆ ಇದಕ್ಕೆ ನಮ್ಮ ರಾಜ್ಯನಿಬಂಧನೆ ಕಾರಣವೆಂದು ಹೇಳುವ ಹಾಗಿಲ್ಲ.

## ವಿದ್ಯೆಯ ವೈಲಕ್ಷಣ್ಯ

ಸಾಮಾನ್ಯವಾಗಿ ಪ್ರತಿಯೊಂದು ವಿದ್ಯೆಯಲ್ಲಿಯೂ ಎರಡು ಭಾಗಗಳಿರುತ್ತವೆ: 1) ಥಿಯರಿ (Theory) ಅಥವಾ ತರ್ಕಸೂತ್ರ; ಇದು ಕೇವಲ ಬುದ್ಧಿಕಾರ್ಯ, ಕಾರ್ಯಕಾರಣ ವಿಮರ್ಶನ ರೂಪವಾದದ್ದು. ಇದು ವಾಚಕನು ತನ್ನ ಮನೆಯೊಳಗೆ ಕುಳಿತು ಸಾವಧಾನವಾಗಿ ಚಿಂತನೆ ಮಾಡಿ ನಿರೂಪಿಸುವಂಥಾದ್ದು.

2) ಅಪ್ಲಿಕೇಷನ್(Application): ಪ್ರಯೋಗ, ಇದು ಮನೆಯ ಹೊರಗೆ ಹತ್ತು ಮಂದಿಯ ಎದುರಾಗಿ, ಅವರ ಸಹಕಾರದಿಂದ ನಡೆಯುವ ಕೆಲಸ. ಬಹಿರಂಗಕಾರ್ಯ.

* 1973ರಲ್ಲಿ

ಈ ಎರಡರ ವೈಲಕ್ಷಣ್ಯಗಳನ್ನು ಗ್ರಹಿಸಿದಲ್ಲಿ ಅವೆರಡೂ ಒಂದಕ್ಕೊಂದು ಹೊಂದಿಕೊಳ್ಳದೆ ಹೋಗುವುದರ ಕಾರಣಗಳು ಮನಸ್ಸಿಗೆ ಬಂದಾವು.

ಉದಾಹರಣೆಗಾಗಿ ಪಾಕಶಾಸ್ತ್ರದಲ್ಲಿ ಅಕ್ಕಿ, ಉದ್ದು, ಸಕ್ಕರೆ, ಹುಣಿಸೆಹಣ್ಣಿನ ಗುಣಗಳನ್ನು ಹೇಳಿರುತ್ತದೆ. ಆದರೆ ಅಕ್ಕಿ ಹೇಗಿರಬೇಕು?–ಮೊದಲಾದ ವರ್ಣನೆಗಳನ್ನು ಎಷ್ಟು ಕೇಳಿದರೂ ಪ್ರಯೋಜನವಾಗದು. ನಮಗೆ ಅಂಗಡಿಯಲ್ಲಿ ಎಂಥಾದ್ದು ಸಿಕ್ಕುತ್ತದೆಯೋ ಅಂಥಾದ್ದು ಮಾಡಬೇಕಾಗುತ್ತದೆ. ನಮ್ಮ ನಾಲಗೆಗೂ ಕರುಳಿಗೂ ಅದು ಹಿತಕರವಾಗುತ್ತದೆಂದು ಖಾತ್ರಿಯೇನೂ ಇಲ್ಲ.

ಸಂಗೀತಶಾಸ್ತ್ರವನ್ನು ನೋಡೋಣ.ಪುಸ್ತಕದಲ್ಲಿ ಇಂಥಾ ಸ್ವರಗಳೆಂದು ಅದು ತಿಳಿಸುತ್ತದೆ. ಆದರೆ ಹಾಡುವವನ ಕೊರಳಿನಿಂದ ಆ ಸ್ವರ ಹೊರಡಬೇಕಲ್ಲ!

## ರಾಜಕೀಯದಲ್ಲಿ ಕಷ್ಟ

ರಾಜಕೀಯದಲ್ಲಿಯೂ ಇದೇ ಕಷ್ಟ. ಪ್ರಜಾರಾಜ್ಯದಿಂದ ಇಂಥಿಂಥ ಅನಿಷ್ಟಗಳು ತೊಲಗಿ ಜನಕ್ಕೆ ಇಂಥಿಂಥ ಸೌಕರ್ಯಗಳು ಬರುತ್ತದೆಂದು ಈ ಪುಸ್ತಕದಲ್ಲಿ ಹೇಳಿದೆ. ಇಂಥಿಂಥ ಜನವನ್ನು ಪ್ರತಿನಿಧಿಯನ್ನಾಗಿ ಆರಿಸಿದರೆ ಆ ಪ್ರಜಾಸಭೆಯಿಂದ ಇಂಥಿಂಥ ಪ್ರಯೋಜನವೆಂದು ಹೇಳಿದೆ.

ಈಗ 1973 ರಲ್ಲಿ ನಿಮ್ಮ ಪುಸ್ತಕದ ಸೂತ್ರಗಳು ಎಷ್ಟೆಷ್ಟು ಮಾತ್ರ ನಿಜವಾಗಿವೆ?–ಎಂದು ಯಾರಾದರೂ ಕೇಳಿದರೆ ನಾವು ಹೇಳಬಹುದಾದ ಪ್ರತ್ಯುತ್ತರ ನಮ್ಮನ್ನು ಕೇಳುವವರಿಗೆ ಅಷ್ಟೇನೂ ತೃಪ್ತಿಯನ್ನುಂಟುಮಾಡಲಾರದು. ನಮಗೂ ಎದೆಯ ಒಳಗಣ ನೆಮ್ಮದಿ ಕಾಣಲಾರದು. ಈ ಅತೃಪ್ತಿಗೆ ಕಾರಣ ನಮ್ಮ ಜನದ ಅಸಿದ್ಧತೆ.

## ಜನದ ಶೀಲ ಮುಖ್ಯ

ಒಂದು ಜನಾಂಗದ ಜೀವನಸ್ಥಿತಿಗೆ ಎಷ್ಟೋ ಸಂಗತಿಗಳು ನೆರವಾಗುತ್ತವೆ. ಅವುಗಳ ಪೈಕಿ ರಾಜ್ಯನಿಬಂಧನೆ ಒಂದು ಮಾತ್ರ. ರಾಜ್ಯನಿಬಂಧನೆಗಿಂತ ಬೇರೆಯಾದ, ಇನ್ನೂ ಮೇಲಾದ ಸಂಗತಿ ಒಂದಿದೆ.ಅದು ಜನದ ಶೀಲ.

ಜನದಲ್ಲಿ ದೇಶ ನಮ್ಮದು, ಅದರ ಸುಖದುಃಖಗಳಿಗೆ ನಾವೆಲ್ಲ ಒಟ್ಟಿಗೆ ಸಂಬಂಧಪಟ್ಟವರು, ದೇಶಕಾರ್ಯ ನಮ್ಮಲ್ಲಿ ಪ್ರತಿಯೊಬ್ಬನಿಗೂ ಸೇರಿದ್ದು,–ಈ ತೆರನಾದ ದೇಶಋಣ ಬುದ್ಧಿ,ರಾಷ್ಟ್ರಕ ಕರ್ತವ್ಯದ ಅಂಗೀಕಾರ, ಜನದಲ್ಲಿ ಎಷ್ಟುಮಟ್ಟಿಗೆ

ನಡೆದಿರುತ್ತಾರೋ ಅಷ್ಟುಮಟ್ಟಿಗೆ ಆ ಜನದ ಸ್ಥಿತಿ ಇರುತ್ತದೆ. ಹೀಗೆ ಜನದ ನೀತಿ ಅವರ ರಾಷ್ಟ್ರಬಂಧನಗಿಂತ ದೊಡ್ಡದು. ಮನುಷ್ಯನು ಶಾಸನಕ್ಕಿಂತ ದೊಡ್ಡವನು. ಬಡಿಮನುಷ್ಯನ ಅಂತಃಸಾಕ್ಷಿ (Conscience) ಎಲ್ಲ ಶಾಸನಕ್ಕಿಂತ ದೊಡ್ಡದು.

ಹೀಗಿರುವಲ್ಲಿ ದೇಶಸ್ಥಿತಿ ಕೆಟ್ಟುಹೋಗಿದ್ದಾಗ ಮೊದಲು ರಾಜ್ಯನಿಬಂಧನೆಯ ಪುಸ್ತಕದ ಕಡೆಗಿಂತ ಹೆಚ್ಚಾಗಿ ಜನದ ಶೀಲ ಸ್ವಭಾವಗಳ ಕಡೆ ನಮ್ಮ ಮನಸ್ಸು ಹೋಗಬೇಕು.

ಜನ ಒಳ್ಳೆಯವರೂ ದಕ್ಷರೂ ಆಗಿದ್ದಲ್ಲಿ ರಾಜ್ಯನಿಬಂಧನೆಯು ಎಂಥಾದ್ದೇ ಆಗಿರಲಿ ಅವರ ಸ್ಥಿತಿ ಚೆನ್ನಾಗಿಯೇ ಇರುತ್ತದೆ.

ಅವರ ಸ್ವಭಾವವು ಸರಕಾರದ ಕುಂದುಕೊರತೆಗಳನ್ನು ಮೀರಿಸಬಲ್ಲದ್ದಾಗಿರುತ್ತದೆ.ಈ ಸ್ವಭಾವಗಳ ಶೀಲವನ್ನು ನಾವು ಉತ್ತಮ ಪಡಿಸಿಕೊಂಡಲ್ಲದೆ ನಮಗೆ ಶ್ರೇಯಸ್ಸು ದುರ್ಲಭ

## ಶ್ರೇಯಸ್ಸಾಧನಗಳು

ನಮ್ಮ ಜನಕ್ಕೆ ಶ್ರೇಯಸ್ಸುಂಟು, ಸಂದೇಹವಿಲ್ಲ. ಕಾರಣವೇನೆಂದರೆ ಶ್ರೇಯಸ್ಸಿಗೆ ಅವಶ್ಯಕವಾದ ಗುರಿಗಳನ್ನು ನಮ್ಮ ಪೂರ್ವಿಕರು ನಮ್ಮಲ್ಲಿ ದೃಢಮೂಲವನ್ನಾಗಿ ನೆಲೆ ಗೊಳಿಸಿದ್ದಾರೆ.

ಮಹಾಭಾರತದಲ್ಲಿ ಇದು ಸಿದ್ಧಾಂತ:

ಯತೋಧರ್ಮಸ್ತತೋ ಜಯಃ||
(ಎಲ್ಲಿಂದ ಧರ್ಮವೋ ಅಲ್ಲಿಂದ ಜಯ)

ಧರ್ಮಕ್ಕೂ ಶ್ರೇಯಸ್ಸಿಗೂ ಮೂಲಸ್ಥಾನ ಒಂದೇ. ಆ ಸರ್ವ ಮೂಲಸ್ಥಾ ಜಗದೀಶ್ವರನ ಸನ್ನಿಧಿ. ಈಶ್ವರನೇ ಜಯಾಜಯಗಳಿಗೆ ಆತ್ಯಂತಿಕ ಕಾರಣ. ಯಾವನು ಧರ್ಮದಿಂದ ತಪ್ಪುವುದಿಲ್ಲವೋ ಅವನಿಗೆ ಜಯವು ಸಿದ್ಧವಾಗುತ್ತದೆ. ಇದು ಎಲ್ಲ ಹಿಂದೂಗಳೂ ಇತರ ಮತಗಳವರೂ ಒಪ್ಪಿರುವ ಮಾತು.

ಪ್ರಕೃತದಲ್ಲಿ ಧರ್ಮವೆಂದರೆ ಮುಖ್ಯವಾಗಿ ನಾಲ್ಕು ಗುಣವಿಶೇಷಗಳು:

1. ಪೌರುಷ ಪ್ರಕಾಶ, 2.ಸೌಜನ್ಯ, 3. ವಿವೇಕ 4. ತತ್ವ ನಿಷ್ಠೆ.

### 1. ಪೌರುಷ ಪ್ರಕಾಶ

ಮನುಷ್ಯನು ತನ್ನ ಒಳಗೆ ಅಡಗಿರುವ ಬುದ್ಧಿಶಕ್ತಿಗಳನ್ನು ಅಭಿವ್ಯಕ್ತಪಡಿಸುವುದು. ತನ್ನಲ್ಲಿರುವ ಚೈತನ್ಯವನ್ನು ಉಪಯೋಗಕ್ಕೆ ತರುವುದು. ತನ್ನ ಶಕ್ತಿ ಎಂಥಾದ್ದಾಗಲಿ–ಬುದ್ಧಿಯದೋ, ಮನಸ್ಸಿನದೋ, ದೇಹದ್ದೋ– ಅದನ್ನು ಹೊರಕ್ಕೆ ಉಪಯೋಗಕ್ಕೆ ತರಬೇಕು.

### 2. ಸೌಜನ್ಯ

ಸತ್ಯ, ಸದಾಚಾರ, ಮರ್ಯಾದೆ ಮೊದಲಾದ ಲೋಕಸ್ನೇಹದ ಗುಣಗಳು. ಇವುಗಳಿಂದ ನಮ್ಮ ಕೂಡ ಬಾಳುವ ಜನರಿಗೆ ಪ್ರೀತಿಯುಂಟಾಗಿ ಅವರು ನಮ್ಮೊಡನೆ ಸಮಾಧಾನದಿಂದಿರಬೇಕು. ಇದರಲ್ಲಿಯೇ ಸ್ನೇಹ, ದಯೆ, ದಾಕ್ಷಿಣ್ಯ ಮೊದಲಾದವು ಸೇರಿರುತ್ತವೆ.

### 3. ವಿವೇಕ

ಇದು ಬುದ್ಧಿ ಕಾರ್ಯ, ಸತ್ಯಾನ್ವೇಷಣೆಯ ಕಾರ್ಯ. ಲೋಕದಲ್ಲಿ ಸತ್ಯಸಂಬಂಧ ಸಂಭವಿಸುವುದನ್ನು. ಅದು ಛಿದ್ರ ಛಿದ್ರವಾಗಿ ಇಲ್ಲಿಷ್ಟು ಅಲ್ಲಿಷ್ಟು ಹರಡಿಕೊಂಡಿರುತ್ತದೆ. ಅದನ್ನು ಒಟ್ಟಿಗೆ ಅಖಂಡವಾಗಿ ಪೂರ್ಣವಾಗಿ ಕಾಣಬೇಕೆಂದರೆ ನಾವು ಅದನ್ನು ಇರುವ ಹಾಗೆ ಗುರುತಿಸಬೇಕು. ನಮಗೆ ಯಾವುದು ಸತ್ಯವೆಂದೂ ನ್ಯಾಯವೆಂದೂ ತೋರಿರುತ್ತದೆಯೋ ಅದರ ಜೊತೆಗೆ ನಮ್ಮ ಪ್ರತಿಕಕ್ಷಿಗಳ ಮತ್ತು ನಮ್ಮಿಂದ ಬೇರೆಯಾದ ಕಕ್ಷಿಗಳ ವಾದದಲ್ಲಿ ಸತ್ಯವೂ ನ್ಯಾಯವೂ ಎಷ್ಟೆಷ್ಟು ಇದ್ದೀತೆಂಬುದನ್ನು ಸಹಾನುಭೂತಿಯಿಂದ ಪರೀಕ್ಷಿಸಿ ನೋಡಬೇಕು. ವಿಷಯದ ಸರ್ವತೋಮುಖವಾದ ಪ್ರಾಸಂಗ ವಿಮರ್ಶೆಗಳು ವಿವೇಕದ ಲಕ್ಷಣ. ನಮ್ಮ ಹೃದಯದಲ್ಲಿ ಕರುಣೆ ಎಷ್ಟೇ ಇರಲಿ, ಸ್ನೇಹ ಎಷ್ಟೇ ಇರಲಿ, ಕಾರ್ಯ ಸಫಲವಾಗಬೇಕಾದರೆ ವಿವೇಕ –ಎಂದರೆ ಆವೇಶಗಳಿಲ್ಲದ ನಿಷ್ಪಕ್ಷಪಾತವಾದ ಪರಮತ ಪರಾಮರ್ಶೆ – ಕರ್ತವ್ಯವಾಗುತ್ತದೆ.

### 4. ಭಕ್ತಿ ನಿಷ್ಠೆ

ಸಾರ್ವಜನಿಕ ಕಾರ್ಯಕರ್ತನು ನಾನು ಇನ್ನೊಬ್ಬರಿಗೆ ಉಪಕಾರ ಮಾಡುತ್ತಿದ್ದೇನೆ, ನನ್ನಿಂದ ಇತರರು ಉಪಕೃತರು ಎಂಬ ಅಹಂಭಾವದ ಸೋಂಕು ಇಲ್ಲದೆ ಇರಬೇಕು. ಅದಕ್ಕೆ ಪ್ರತಿಯಾಗಿ 'ನಾನು ದೇಶಕ್ಕೆ ಋಣಿ, ನನ್ನ ಮೇಲೆ ಹೊತ್ತಿರುವ ದೇಶಋಣವನ್ನು ತೀರಿಸಲು ಪ್ರಯತ್ನಿಸುತ್ತೇನೆ" ಎಂದು ಅವನ ಅಂತರಂಗದಲ್ಲಿ ಭಾವನೆ ಇರಬೇಕು.

ಈ ನಾಲ್ಕು ರೂಪವಾದ ಧರ್ಮಾಂಗಗಳ ಆಚರಣೆಯಿಂದ ಧರ್ಮವು ಸಿದ್ಧಿಸುತ್ತದೆ

## ತಯಾರಿ ಇಲ್ಲದ್ದರಿಂದ ಆದ ಫಲ

ಪ್ರಜಾರಾಜ್ಯವು ಒಂದು ತರಬೇತಿಯನ್ನಪೇಕ್ಷಿಸುತ್ತದೆ. ಆ ತಯಾರಿ ಇಲ್ಲದಿದ್ದರೆ ಆ ಫಲವಿಲ್ಲ. ಆದದ್ದರಿಂದ ನಾವು ನಮ್ಮ ಒಳಗಡೆಯೇ ಹುಡುಕಿ ನೋಡಿಕೊಳ್ಳಬೇಕು. ಮುಖ್ಯವಾಗಿ ನಮ್ಮಲ್ಲಿ:

1. ರಾಷ್ಟ್ರಕಭಾವನೆ ಪುಷ್ಟವಾಗಿ ಬೆಳೆದಿಲ್ಲ. ಪ್ರತಿನಿಧಿಗಳನ್ನಾರಿಸುವ ಕಾಲದಲ್ಲಿ ನಮಗೆ ಜವಾಬ್ದಾರಿ ಬುದ್ಧಿಯ (Responsibility) ಅಭ್ಯಾಸವಿಲ್ಲ. ಹೇಗೋ ಹಾಗೆ ಚುನಾವಣೆ ಮಾಡುತ್ತೇವೆ.

2. ಬೇಕೊಬಿಟ್ಟಿಯಾಗಿಯೋ ಲಂಚ ದಾಕ್ಷಿಣ್ಯಗಳಿಗಾಗಿಯೋ ಮಾಡಿದ ಚುನಾವಣೆಯಿಂದ ತಕ್ಕ ಅರ್ಹರಾದ ಜನ ಶಾಸನಸಭೆಗೆ ಬರುತ್ತಿಲ್ಲ.

3. ಅರ್ಹರಾದ ಪ್ರಜಾಪ್ರತಿನಿಧಿಗಳು ಇಲ್ಲದ್ದರಿಂದ ಅರ್ಹರಾದ ಮಂತ್ರಿಗಳು ಅಪರೂಪ.

4. ಮಂತ್ರಿಗಳು ಅನರ್ಹರಾದದ್ದರಿಂದ ಸರಕಾರದಲ್ಲಿ ವಿಚಕ್ಷಣೆಯಿಲ್ಲ.

5. ಸರಕಾರದಲ್ಲಿ ವಿಚಕ್ಷಣೆ ಇಲ್ಲದ್ದರಿಂದ "ಯಥಾಪ್ರಕಾರಸಿದ್ಧಿರಸ್ತು": ಹಿಂದಿನಂತೆಯೇ ಕಷ್ಟ, ಹಿಂದಿನಂತೆಯೇ ಲಂಚ, ಹಿಂದಿನಂತೆಯೇ ದುರ್ಭಾಗ್ಯ. "ಗರೀಬೀ ಹಟಾವ್" ಎಂದು ಘೋಷಣೆಮಾಡಿದರೆ ಪ್ರಯೋಜನವೇನು?

## ವಿದ್ಯಾವಂತರ ಜವಾಬ್ದಾರಿ

ಇಂಡಿಯಾದ ರಾಜ್ಯನಿಬಂಧನೆಯಿಂದ ಸಂಭವಿಸಬಹುದಾದ ಸನ್ನಿವೇಶ ಇಷ್ಟು ವಿಷಮವೆನಿಸಿ ತೋರುವುದರಿಂದ, ದೇಶದಲ್ಲಿರುವ ವಿದ್ಯಾವಂತರು ಈಗ ಮಾಡಬೇಕಾದ ಕರ್ತವ್ಯವೇನು? ಅವರು ತಮ್ಮ ತಮ್ಮ ಪ್ರಜಾಧರ್ಮದ ಭಾರದ ಜೊತೆಗೆ ಅವಿದ್ಯಾವಂತರ ಮೇಲಿನ ಹೊರೆಯನ್ನು ಹೊತ್ತುಕೊಳ್ಳಬೇಕು. ಎಂದರೆ, ತಾವು ರಾಜಕೀಯ ವಿವೇಕವನ್ನು ಸಂಪಾದಿಸಿಕೊಂಡು, ವಿದ್ಯಾವಂತರಲ್ಲದವರಲ್ಲಿ ಆ ವಿವೇಕವನ್ನು ಹರಡಬೇಕು. ಹೀಗೆ ವಿದ್ಯಾವಂತರ ಜವಾಬ್ದಾರಿ ಈಗ ಇಮ್ಮಡಿಯಾಗಿದೆ.

## ಸಾರ್ವಜನಿಕ ಮನಸ್ಸು

ಇಂಗ್ಲೆಂಡ್ ಅಮೆರಿಕಗಳಂತೆ ನಾವು ಪ್ರಗತಿಪಥದಲ್ಲಿ ಸಾಗಬೇಕೆಂಬ ಆಸೆಯಿಂದ ಆ ದೇಶಗಳ ಸಾರ್ವಜನಿಕ ಸಂಸ್ಥೆಗಳನ್ನು ನಾವು ಇಲ್ಲಿ ಅನುಕರಿಸಿಕೊಂಡಿದ್ದೇವೆ. ಅಲ್ಲಿಯಂತೆ ಮ್ಯುನಿಸಿಪಾಲಿಟಿಗಳು, ಸಹಕಾರಸಂಘಗಳು, ಜಾತಿವಿಜಾತಿ ಸಂಘಗಳು, ಬಗೆಬಗೆಯ ಕಮಿಟಿಗಳು, ಹಾಸ್ಟೆಲ್ಲುಗಳು–ಇವುಗಳನ್ನೆಲ್ಲ ಪ್ರಾರಂಭಿಸಿದ್ದೇವೆ. ಆದರೆ ಇಂಥ ಸಾರ್ವಜನಿಕ ಸಂಸ್ಥೆಗಳು ಆ ದೇಶಗಳಲ್ಲಿ ಕೆಲಸ ಮಾಡುತ್ತವೆ, ಸಾಧಿ ಕೃತಕೃತ್ಯಗಳಾಗುತ್ತವೆ. ನಮ್ಮಲ್ಲಿ ಅವು ಕೆಲಸ ಮಾಡುವುದಿಲ್ಲ, ಕೆಲಸದ ಆಟವನ್ನು ಆಡುತ್ತವೆ. ಇದಕ್ಕೇನು ಕಾರಣ?

ಆ ದೇಶಗಳಲ್ಲಿ ಪ್ರತಿಯೊಬ್ಬ ಮನುಷ್ಯನಲ್ಲಿಯೂ ಸಾರ್ವಜನಿಕ ಮನೋವೃತ್ತಿ (ಪಬ್ಲಿಕ್ ಸ್ಪಿರಿಟ್, Public spirit) ಅಲ್ಪಸ್ವಲ್ಪವಾದರೂ ಸಹಜವಾಗಿ ಇರುತ್ತದೆ. ಈ ಗುಣ ನಮ್ಮಲ್ಲಿ ಹಾಗೆ ಸಹಜವಾಗಿರುವುದು ತೀರಾ ಅಪರೂಪ. ಇದಕ್ಕೆ ಕಾರಣ ನಮ್ಮ ನೂರಾರು ವರ್ಷಗಳ ಪರಾಧೀನ ಸ್ಥಿತಿಯೆಂದು ಹೇಳಬಹುದು. ಕಾರಣವೇನೇ ಇರಲಿ, ವಸ್ತುಸ್ಥಿತಿಯಂತೂ ಅತ್ಯಪ್ರಶಸ್ತವಾದದ್ದು. ನಮ್ಮ ಊರುಗಳ ಮ್ಯುನಿಸಿಪಾಲಿಟಿಗಳನ್ನು ಇತರ ಪ್ರಜಾಸಂಸ್ಥೆಗಳನ್ನೂ ನೋಡೋಣ. ಮುನಿಸಿಪಾಲಿಟಿಗೆ ಸಲ್ಲಬೇಕಾದ ಕಂದಾಯಗಳನ್ನು ಕಾಲಕಾಲಕ್ಕೆ ಸಲ್ಲಿಸುವವರು ಪುರಜನರಲ್ಲಿ ಶೇಕಡಾ ಎಷ್ಟು ಮಂದಿ ಇರುತ್ತಾರೆ? ಅದನ್ನು ಬಾಕಿ ಉಳಿಸಿಕೊಂಡಿರುವವರು ಮ್ಯುನಿಸಿಪಲ್ ಕೌನ್ಸಿಲರುಗಳಲ್ಲಿಯೇ ಎಷ್ಟು ಮಂದಿ ಇರುತ್ತಾರೆ? ನಮ್ಮ (ಕೋ-ಆಪರೇಟಿವ್) ಸಹಕಾರ ಸಂಘಗಳಲ್ಲಿ ಸಾಲ ತೆಗೆದುಕೊಂಡವರ ಪೈಕಿ ಸಕಾಲಕ್ಕೆ ಬಡ್ಡಿ ಪಾವತಿಮಾಡುವವರು ಶೇಕಡಾ ಎಷ್ಟು ಮಂದಿ? ತೆಗೆದುಕೊಂಡ ಸಾಲವನ್ನು ಕ್ರಮವಾಗಿ ಹಿಂದಿರುಗಿಸುವವರು ಡೈರೆಕ್ಟರುಗಳಲ್ಲಿ ಎಷ್ಟು ಮಂದಿ? ಸೊಸೈಟಿಗಾಗಿ ಪದಾರ್ಥ ಕೊಳ್ಳುವುದರಲ್ಲಿಯೂ, ಮೆಂಬರುಗಳ ಲೇವಾದೇವಿಗೆ ಸಹಾಯ ಮಾಡುವುದರಲ್ಲಿಯೂ ದಳ್ಳಾಳಿಗೆ ಕೈ ನೀಡದವರು ಡೈರೆಕ್ಟರುಗಳಲ್ಲಿ ಯಾವ ಪ್ರಮಾಣದಲ್ಲಿರಬಹುದು? ನಮ್ಮ ವಾಚನಾಲಯ ಗ್ರಂಥಭಂಡಾರಗಳಲ್ಲಿ ಕೊಡಬೇಕಾದ ಚಂದಾ ಹಣವನ್ನು ಗೊತ್ತಾದ ದಿವಸ ತಾವಾಗಿಯೇ ತಂದುಕೊಡುವ ಸದಸ್ಯರೆಷ್ಟು ಮಂದಿ ಇರುತ್ತಾರೆ? ಅಲ್ಲಿಂದ ಸಾಲ ತೆಗೆದುಕೊಂಡು ಹೋದ ಪುಸ್ತಕ ಪತ್ರಿಕೆಗಳನ್ನು ಹರಿಯದೆ, ಕೊಳೆಮಾಡದೆ, ಗೊತ್ತಾದ ದಿವಸ ಹಿಂದಕ್ಕೆ ತಂದುಕೊಡುವವರೆಷ್ಟು ಮಂದಿ? ನಮ್ಮೂರುಗಳಲ್ಲಿ ಸಂಘಗಳೂ ಸಮಿತಿಗಳೂ ಏರ್ಪಟ್ಟಾಗ ಅವುಗಳ ಕಾರ್ಯಮಂಡಲಿಗಳಿಗೆ ಚುನಾವಣೆಯಾಗಲು ನಾನು ಮುಂದು ತಾನು ಮುಂದು ಎಂದು ಜನ ನಿಲ್ಲುತ್ತಾರಷ್ಟೆ? ಆಮೇಲೆ ತಿಂಗಳಿಗೊಂದು ಸಲವೋ ಎರಡು ಸಲವೋ ನಡೆಯಬೇಕಾದ ಮೀಟಿಂಗುಗಳಿಗೆ ತಪ್ಪಿಸಿಕೊಳ್ಳದೆ ಕ್ಲುಪ್ತ ಕಾಲಕ್ಕೆ ಬಂದು, ಕಾರ್ಯವನ್ನು ಬೇಗ ಆಗಮಾಡಿಸುವ ಸಂಘ ಸೇವಕರು ಎಷ್ಟು ಮಂದಿ ಇರುತ್ತಾರೆ? ನಮ್ಮ ಮ್ಯುನಿಸಿಪಲ್ ಮೀಟಿಂಗುಗಳು "ಕೋರಂ" ಇಲ್ಲವೆಂಬ

ಒಂದು ದೇವಸ್ಥಾನದ ಅಥವಾ ಧರ್ಮಸತ್ರದ ಕಾರ್ಯವಿಚಾರಣೆಯಲ್ಲಿರಬಹುದು; ಯಾವುದಾದರೊಂದು ಸಾಮಾಜಿಕಸಂಸ್ಥೆಯ ಸದಸ್ಯತ್ವವಾಗಿರಬಹುದು. ಹೀಗೆ ಯಾವುದಾದರೊಂದು ಬಗೆಯಲ್ಲಿ ಪ್ರತಿಯೊಬ್ಬನೂ ತನ್ನ ಸಂದರ್ಭ ಅನುಕೂಲತೆಗಳಿಗೆ ತಕ್ಕಂತೆ ಯಾವುದಾದರೊಂದು ಸಾರ್ವಜನಿಕ ಕ್ಷೇತ್ರದಲ್ಲಿ ಅಷ್ಟಿಷ್ಟು ಸೇವೆ ಸಲ್ಲಿಸುವ ಅಭ್ಯಾಸವನ್ನು ಮಾಡಿಕೊಳ್ಳಬೇಕು.

4 ವೃತ್ತಪತ್ರಿಕೆಗಳನ್ನೂ ರಾಜಕೀಯ ಗ್ರಂಥಗಳನ್ನೂ ಕ್ರಮವಾಗಿ ಪ್ರಾಸಂಗಮಾಡಿ, ನಿಷ್ಪಕ್ಷಪಾತವಾದ ವಿಮರ್ಶನಬುದ್ಧಿಯಿಂದ ಸ್ವಾಭಿಪ್ರಾಯವನ್ನು ಗೊತ್ತು ಮಾಡಿಕೊಳ್ಳಬೇಕು. ಮುದ್ರಿತಾಕ್ಷರವೆಲ್ಲ ಪ್ರಮಾಣವಾಕ್ಯವೆಂದು ಗ್ರಹಿಸುವ ಅಭ್ಯಾಸವನ್ನು ಬಿಡಬೇಕು.

5 ಎಲ್ಲಕ್ಕಿಂತ ಮುಖ್ಯವಾಗಿ, ದೇಶಕಾರ್ಯಗಳನ್ನು ಚರ್ಚಿಸುವ ಒಂದು ಗೋಷ್ಠಿಯಲ್ಲಿ ತಾನೂ ಸೇರಬೇಕು. ದೇಶದ ರಾಜಕೀಯ ಪ್ರಜೆಯ ವಿಕಾಸಕ್ಕೆ ಇಂಥ ಚರ್ಚಾಗೋಷ್ಠಿಗಳು ಅತ್ಯಂತ ಅವಶ್ಯವಾದ ಸಾಧನ. ಆ ಗೋಷ್ಠಿಗಳಲ್ಲಿ ದೇಶಪ್ರಶ್ನೆಗಳು ಸ್ವತಂತ್ರದೃಷ್ಟಿಯಿಂದ–ಎಂದರೆ ಆ ಪಕ್ಷ, ಈ ಕಕ್ಷಿ ಎಂಬ ದಾಕ್ಷಿಣ್ಯ ಅಭಿಮಾನಗಳಿಲ್ಲದೆ–ಚರ್ಚೆಯಾಗುವಂತೆ ಸಹಕರಿಸಬೇಕು. ದೇಶದ ಭವಿಷ್ಯವನ್ನು ನಿಷ್ಕರ್ಷೆ ಮಾಡುವುದು ಪ್ರಜಾಪ್ರತಿನಿಧಿರೂಪವಾದ ಶಾಸನಸಂಸ್ಥೆಯಾದರೆ, ಆ ಶಾಸನಸಂಸ್ಥೆಯ ಸ್ವರೂಪವನ್ನು ನಿಷ್ಕರ್ಷೆ ಮಾಡುವುದು ಇಂಥ ಚರ್ಚಾಗೋಷ್ಠಿಗಳ ಪ್ರಭಾವ. ದೇಶಪ್ರಶ್ನೆಗಳಲ್ಲಿ ಒಂದು ಹದಕ್ಕೆ ಪ್ರಜಾಭಿಪ್ರಾಯವೆಂಬುದು ಸ್ಪಷ್ಟಪಟ್ಟು ದೃಢವಾಗುವುದು ಇಂಥ ಚರ್ಚಾ ಗೋಷ್ಠಿಗಳ ಮೂಲಕ.

6 ತನ್ನ ಊರಿನ ಮ್ಯುನಿಸಿಪಾಲಿಟಿಯ ಮತ್ತು ಇತರ ಸಾರ್ವಜನಿಕ ಸಂಸ್ಥೆಗಳ ವಿದ್ಯಮಾನಗಳನ್ನೂ ಸಮಗ್ರ ದೇಶದ ವಿದ್ಯಮಾನಗಳನ್ನೂ ಸಹ ಇಂಥ ಚರ್ಚಾಗೋಷ್ಠಿಗಳಲ್ಲಿ ವಿಮರ್ಶೆ ಮಾಡಬಹುದು. ಕಂಡುಬಂದ ಲೋಪದೋಷಗಳನ್ನು ಆ ಚರ್ಚೆಗಳಲ್ಲಿ ಎತ್ತಿ ತೋರಿಸುವುದು ಮಾತ್ರವೇ ಅಲ್ಲದೆ, ಪತ್ರಿಕೆಗಳಲ್ಲಿಯೂ ಆಗಾಗ್ಗೆ ಪ್ರಕಟಪಡಿಸುತ್ತಿರಬೇಕು. ನಮ್ಮ ದೇಶದಲ್ಲಿ ವಿದ್ಯಾವಂತರಾದವರು ದೇಶಕಾರ್ಯ ವಿಮರ್ಶೆಗಾಗಿ ವೃತ್ತಪತ್ರಿಕೆಗಳನ್ನು ಉಪಯೋಗಪಡಿಸಿಕೊಳ್ಳುವ ಅಭ್ಯಾಸ ತೀರ ಕಡಮೆಯಾಗಿದೆ. ವೃತ್ತಪತ್ರಿಕೆಗಳು ಸಂಪಾದಕರೊಬ್ಬರ ಕಾರ್ಯಕ್ಷೇತ್ರವೇನೂ ಅಲ್ಲ. ಪತ್ರಿಕೆಯು ಜಾಗ ಸಾರ್ವಜನಿಕವಾದದ್ದು. ದೇಶಸೇವೆ ಮಾಡುವವರೆಲ್ಲ ಆ ಕ್ಷೇತ್ರವನ್ನು ಉಪಯೋಗ ಪಡಿಸಿಕೊಳ್ಳಬೇಕು. ನಮ್ಮ ಈಗಿನ ಸ್ಥಿತಿಯಲ್ಲಿ ಪ್ರತಿಯೊಬ್ಬನೂ ಮೊದಲು

ತನ್ನ ಊರಿನ ಮ್ಯುನಿಸಿಪಲ್ ಸಂಸ್ಥೆಯ ವಿದ್ಯಮಾನಗಳಿಗೆ ಗಮನ ಕೊಡುವುದರ ಮೂಲಕ ತನ್ನ ಸಾರ್ವಜನಿಕ ಮನೋವೃತ್ತಿಯನ್ನು ಉಪಯೋಗ ಪಡಿಸುವುದಾದರೆ ಅದರಿಂದ ಊರಿನ ಪರಿಸ್ಥಿತಿ ಉತ್ತಮವಾಗುವುದಲ್ಲದೆ ದೇಶದ ಪ್ರಜಾರಾಜಕೀಯಕ್ಕೆ ಅವಶ್ಯವಾದ ಅಭ್ಯಾಸವೂ ಆ ಮೂಲಕ ಉಂಟಾಗುವುದು.

7 ಪ್ರಜಾರಾಜಕೀಯ- ಅದರಲ್ಲಿಯೂ ಜವಾಬ್ದಾರೀ ಸರಕಾರ-ಸಾಂಗವಾಗಿ ನಡೆಯಲು ದೇಶದಲ್ಲಿ ರಾಜಕೀಯ ಪಕ್ಷಗಳು ಕನಿಷ್ಠ ಪಕ್ಷ ಎರಡಾದರೂ ಇರಲೇಬೇಕಾಗುತ್ತದೆ. ಕಾಲಕ್ರಮದಲ್ಲಿ ಆ ಪಕ್ಷಗಳ ಸಂಖ್ಯೆ ಇನ್ನೂ ಹೆಚ್ಚಾದರೂ ಹೆಚ್ಚಬಹುದು. ಆದರೆ ಆ ಪಕ್ಷಗಳ ಪರಸ್ಪರ ಸ್ಪರ್ಧೆಯಲ್ಲಿ ಸಮಗ್ರ ದೇಶದ ವಿಚಾರ ಎಲ್ಲರಿಗೂ ಮರೆತುಹೋಗುವುದುಂಟು. ಅದೇ ದೊಡ್ಡ ಆಪತ್ತು, ಆದಕಾರಣ ದೇಶದಲ್ಲಿರುವ ಗೊತ್ತಾದ ರಾಜಕೀಯ ಪಕ್ಷಗಳ ಜೊತೆಗೆ ಯಾವ ಪಕ್ಷಕ್ಕೂ ಸೇರದ ಸ್ವತಂತ್ರ ಪ್ರಜಾವರ್ಗವೊಂದು ವಿಸ್ತಾರವಾಗಿರಬೇಕು. ಈ ಸ್ವತಂತ್ರವರ್ಗವೇ ಎಲ್ಲ ಪಕ್ಷಗಳ ವಿಷಯದಲ್ಲಿಯೂ ''ಜಡ್ಜಿ''ಯಂತೆ ಯೋಗ್ಯತಾನಿರ್ಣಯ ಮಾಡಬೇಕಾದದ್ದು. ಅದು ಎಲ್ಲ ಪಕ್ಷಕಕ್ಷಿಗಳ ಸಲಹೆ ಸೂಚನೆಗಳನ್ನೂ ರೀತಿನೀತಿಗಳನ್ನೂ ನಿರ್ದಾಕ್ಷಿಣ್ಯವಾಗಿ ಪರೀಕ್ಷಿಸಿ, ಯುಕ್ತ ತೋರಿದ್ದನ್ನು ಪ್ರಕಟಗೊಳಿಸಬೇಕು. ಇಂಥ ಬುದ್ಧಿಸ್ವಾತಂತ್ರ್ಯವನ್ನು ವಿದ್ಯಾವಂತರಾದವರು ರಾಜಕೀಯಾಧಿಕಾರದ ಅಪೇಕ್ಷೆಯಿಲ್ಲದೆ ನಿಯಮದಿಂದ ಕಾಪಾಡಿಕೊಂಡಿರಬೇಕು.

[illegible]:

1 ರಾಜ್ಯಾದಾಯವನ್ನೂ

2 ಅಧಿಕಾರವನ್ನೂ

3 ಉಪಯೋಗಿಸುವ ಅಥವಾ

4 ಉಪಯೋಗಪಡಿಸಲಪ್ಪಣೆ ಕೊಡುವ

5 ಅಧಿಕಾರವು

6 ಒಬ್ಬಾತನ ಕೈಯಲ್ಲಿರಬೇಕಾದದ್ದು

7 ಆ ಒಬ್ಬಾತನ ಕಾರ್ಯವು

ಸಫಲವಾಗಬೇಕಾದರೆ ಮನುಷ್ಯಪ್ರಪಂಚದಲ್ಲಿ ಅವನಿಗೆ ದೊರೆಯಬಹುದಾದ ಸಹಾಯ ಒಂದೇ— ಅದು ನೈಜವಾದ ದೇಶಪ್ರೇಮವೂ ಮತ್ತು ಜಾಗರೂಕವಾದ ರಾಜಕೀಯ ವಿವೇಕವೂ ಉಳ್ಳ ಸಭ್ಯ ಪ್ರಜಾಜನ. ರಾಜನಿಬಂಧನೆ ನಿಜವಾಗಿ ಇರುವುದು ಶಾಸನಗ್ರಂಥದಲ್ಲಲ್ಲ; ಜನದ ಮನೋಬುದ್ಧಿಗಳಲ್ಲಿ. ಪ್ರಜೆಯಂತೆ ರಾಜ್ಯ.

## ರಾಮರಾಜ್ಯ

ಪೊರೆವನೆ ದೈವಂ ಜಗದೊಳ್—!

ಗರಸಿಂಗಂ ಪ್ರಜೆಯೆ ದೈವವೆಲೆ ಗುಣರತ್ನಾ ||

ಮನುಷ್ಯಜೀವನವೇ ರಾಜ್ಯಕ್ಕೆ ಆರಾಧ್ಯದೈವ. ಜೀವನ ಸತ್ತ್ವಾಭಿವೃದ್ಧಿಯಿಂದಲೇ ರಾಜ್ಯಕ್ಕೆ ಸಾರ್ಥಕತೆ. ಜೀವನವನ್ನು ಪುಷ್ಟಿಗೊಳಿಸಿ ಶೋಭಾಯಮಾನ ಮಾಡಿಸುವುದೇ ರಾಜಕೀಯಸ್ಥನ ಪರಮ ಕರ್ತವ್ಯ. ಅವನ ಯೋಗ್ಯತೆಗೆ ಜನಜೀವನದ ಸ್ಥಿತಿಯೇ ಒರೆಗಲ್ಲು.

ರಾಜ್ಯವನ್ನು ಒಂದು ಯಂತ್ರಕ್ಕೆ ಹೋಲಿಸಿ 'ರಾಜ್ಯಯಂತ್ರ' ಎಂದು ಹೇಳುವುದು ವಾಡಿಕೆ. ಆದರೆ ರಾಜ್ಯವನ್ನು ಒಂದು ಪ್ರಾಣಿ ಅಥವಾ ಜೀವಶರೀರ ಎನ್ನುವುದು ಸರಿ. ಯಂತ್ರವೆಂಬುದು ಮನುಷ್ಯಾಧೀನವಾದ ಒಂದು ನಿರ್ಜೀವ ವಸ್ತುಸಂಧಾನ. ಪ್ರಾಣಿಯ ದೇಹದಲ್ಲಿಯೂ ಅಂಥ ಯಾಂತ್ರಿಕ ಸಂಧಾನವಿರುತ್ತದೆ. ಜೀವನದಲ್ಲಿ ಸಾಧಾರಣವಾಗಿ ಹೊರಕ್ಕೆ ಕಾಣಬರುವುದು ಆ ಯಾಂತ್ರಿಕ ಕ್ರಿಯೆಗಳೇ. ಆದರೆ ಪ್ರತಿಯೊಂದು ಜೀವಿಯಲ್ಲಿಯೂ—ಗಿಡ ಬಳ್ಳಿಗಳಲ್ಲಿ ಸಹ—ಆ ಯಾಂತ್ರಿಕ ಸಂಧಾನಗಳ ಹಿಂದುಗಡೆ, ಅವುಗಳಿಗೆ ಮೇಲ್ಪಟ್ಟು, ಒಂದು ಸತ್ತ್ವ ಕೂಡಿ ಇರುತ್ತದೆ. ಆ ಸತ್ತ್ವವೇ ಜೀವನವನ್ನು ನಡೆಸಬಲ್ಲದ್ದು, ಪಾಲ್ಪಡಿಸಬಲ್ಲದ್ದು. ರಾಜ್ಯವೆಂಬುದಕ್ಕೂ ಮೂಲಪ್ರೇರಕವಾದ ಅಂಥಾ ಜೀವಸತ್ತ್ವವುಂಟು. ಅದು ಪ್ರಜೆಯ ಸ್ವಭಾವದಿಂದ ಉದಿಸುವಂಥಾದ್ದು. ಜನ ಸ್ವಭಾವದಿಂದ ಉದಿಸುವಂಥಾದ್ದು. ಜನ ಸ್ವಭಾವವೇ ರಾಜ್ಯಸತ್ತ್ವ. ರಾಜ್ಯವು ಪ್ರಜಾಸತ್ತ್ವದಿಂದ ಜೀವಿಸುವ ಒಂದು ಸಂಘಟಿತ ಪ್ರಾಣಿ. ಅದಕ್ಕೆ ಒಳ್ಳೆಯದಾಗಬೇಕೆನ್ನುವವರು ಅದನ್ನು ಸಜೀವ ವ್ಯಕ್ತಿಯನ್ನು ನೋಡುವಂತೆ ನೋಡಿ, ಅದರ ಮರ್ಜಿ ಅರಿತುಕೊಂಡು, ಸಹಾನುಭೂತಿಯಿಂದ ನಡೆಯಬೇಕು.

ರಾಜ್ಯವು ಮನುಷ್ಯನ ಶಿಕ್ಷ್ಯತೆಗೆ ಸಾಕ್ಷಿ, ಅವನ ದ್ವಂದ್ವಸ್ವಭಾವಕ್ಕೆ ದೃಷ್ಟಾಂತ.

ಅವನಷ್ಟಕ್ಕೆ ಅವನನ್ನು ಬಿಟ್ಟರೆ ಅವನು ಕಾಡುಮೃಗ. ಶಿಕ್ಷಿಸಿದರೆ ಮಾತ್ರವೇ ಅವನು ಸಭ್ಯ. ಹೀಗೆ ದಂಡಭಯದಿಂದ ಸೌಜನ್ಯವೆಂಬುದು ಅವನಿಗೇನೂ ಪ್ರಶಂಸಾಕರವಲ್ಲ.

ಆದರೆ ಅವನು ದಂಡಸಾಧ್ಯನಾಗಿದ್ದಾನಲ್ಲ! ಶಿಕ್ಷೆಯಿಂದ ಉತ್ತಮನಾಗುವಷ್ಟಾದರೂ ಗುಣಾಂಶ ಅವನಲ್ಲಿ ಉಂಟಲ್ಲ! ಇದು ಆಶಾಬೀಜ,- ಇದು ಪ್ರಗತಿಪ್ರಯತ್ನಕಾರಕ.

ಎಲ್ಲ ಮನುಷ್ಯಪ್ರಾಣಿಗಳೂ-ಪ್ರತಿಯೊಬ್ಬನೂ ಪ್ರತಿಯೊಬ್ಬಳೂ-ಹುಟ್ಟಿನಿಂದಲೇ ಪುಣ್ಯಪಾಪಗಳ, ಜ್ಞಾನಾಜ್ಞಾನಗಳ, ಸ್ವಾರ್ಥಪರಾರ್ಥಗಳ ಮಿಶ್ರಣದ ಮೂಟೆಯೆಂಬುದು ಮಹರ್ಷಿಗಳ ಮತ. ಈ ಮಿಶ್ರಣದಲ್ಲಿಯ ಉತ್ತಮಾಂಶವನ್ನು ಹೆಚ್ಚಿಸಿ ಅಧಮಾಂಶವನ್ನು ಕಡಿಮೆಯಾಗಿಸುವ ಶಿಕ್ಷಣಾಭ್ಯಾಸವೇ ಧರ್ಮ. ಧರ್ಮಸಾಧನಗಳಲ್ಲಿ ರಾಜ್ಯ ಒಂದು.

## ಹರಿಜನೋದ್ಧಾರ*

ದಿವಂಗತರಾದ ಮಹಾದೇವ ಗೋವಿಂದ ರಾನಡೆಯವರು ಮೊದಲಾಗಿ ಸಮಸ್ತ ಹಿಂದೂ ಸಮಾಜ ಸಂಸ್ಕಾರಕರ್ತರೂ ಭಾರತ ದೇಶಭಕ್ತರೂ ಅಂತ್ಯಜ ಜನೋದ್ಧಾರದ ವಿಷಯದಲ್ಲಿ ಹೇಳಿರುವ ಮಾತುಗಳು ನನ್ನ ಮನಸ್ಸಿನಲ್ಲಿ ನಾಟಿವೆ. ಮಹಾತ್ಮಾಗಾಂಧೀಯವರು ಕೈಕೊಂಡಿರುವ ಅನೇಕ ಕಾರ್ಯಗಳ ಪೈಕಿ,ಮಿಕ್ಕೆಲ್ಲ ಕಾರ್ಯಗಳ ಸಾರ್ಥಕತೆಯ ವಿಚಾರದಲ್ಲಿ ಅವರವರ ಮನಸ್ಸಾಕ್ಷಿಗನುಸಾರವಾಗಿ ಭಿನ್ನಾಭಿಪ್ರಾಯಗಳಿಗೆ ಅವಕಾಶವಿದ್ದರೂ ಇರಬಹುದು; ಆದರೆ ಈ ಹರಿಜನೋದ್ಧಾರದ ಕಾರ್ಯದ ವಿಚಾರದಲ್ಲಿ ಮಾತ್ರ ಗಾಂಧೀಯವರನ್ನು ವಂದಿಸುವುದರಲ್ಲಿ ಸಮಸ್ತ ಧರ್ಮಾಭಿಮಾನಿಗಳೂ ಐಕಮತ್ಯದಿಂದ ಸೇರುವರೆಂದು ನಾನು ನಂಬಿದ್ದೇನೆ. ಇನ್ನು 50 ವರ್ಷಗಳ ಮೇಲೆಯೋ ಆಮೇಲೆಯೋ- ಇಂದಿನ ನಾವು ಇಲ್ಲಿಲ್ಲದ ಭವಿಷ್ಯತ್ತಿನಲ್ಲಿ- ಈ ದೇಶದ ಚರಿತ್ರೆಯನ್ನು ಬರೆಯುವಾತನು ಗಾಂಧೀಜಿಯವರು ಸಾಧಿಸಿರುವ ಈ ಮಹಾಕಾರ್ಯವನ್ನು ಒಂದು ಅದ್ಭುತ ಘಟನೆಯಂತೆ ವರ್ಣಿಸಿ ಕೊಂಡಾಡಿಯಾನೆಂದು ನನಗೆ ತೋರುತ್ತದೆ.

ನಮ್ಮ ವೈದಿಕ ಪಂಡಿತರೂ, ಶಾಸ್ತ್ರವಾಕ್ಯಶರಣರೂ ಮುಖ್ಯವಾಗಿ ಎರಡಂಶಗಳನ್ನು ಗಮನಕ್ಕೆ ತೆಗೆದುಕೊಳ್ಳಬೇಕೆಂದು ಬೇಡುತ್ತೇನೆ: ಮೊದಲನೆಯದು ಹರಿಜನರಿಗೆ ತಲೆ ತಲಾಂತರಗಳಿಂದ ಬಂದು, ಈಗಲೂ ಅವರಲ್ಲಿ ನೆಲಸಿರುವ ಹಿಂದೂ ಧರ್ಮ ವಿಶ್ವಾಸ; ಎರಡನೆಯದು ಹಿಂದೂ ಸಮಾಜಕ್ಕೆ ಇರುವ ಬಲದ ಅವಶ್ಯಕತೆ.

1. ನಮ್ಮ ಚಾತುರ್ವರ್ಣ್ಯದವರು ಅಂತ್ಯಜ ಜನರನ್ನು ದೂರವಿಟ್ಟು, ಅವರಿಗೆ ಯಾವ ಉಪದೇಶ ಸಂಸ್ಕಾರಗಳನ್ನೂ ಏರ್ಪಡಿಸದೆ, ಅವರನ್ನು ತೊರೆದು ಬಿಟ್ಟಿದ್ದಾಗ್ಯೂ, ಆ ಜನರು ಯಾವುದೋ ಒಂದು ನೈಜವಾದ ಸರಳ ಶ್ರದ್ಧೆಯಿಂದ ಹಿಂದೂ

* ಹರಿಜನವಾರದ ಆಚರಣೆಯ ಸಂದರ್ಭದಲ್ಲಿ ವಿಶ್ವ ಕರ್ನಾಟಕ ಪತ್ರಿಕೆಗೆ ಕಳಿಸಿದ ಸಂದೇಶ (ವಿಶ್ವ ಕರ್ನಾಟಕ, ಅಕ್ಟೋಬರ್ 2,1957)

ಮತವನ್ನೇ ನಂಬಿಕೊಂಡು, ಸವರ್ಣ ಜನರಿಗೆ ವಿಧೇಯರಾಗಿ, ಸವರ್ಣೀಯರ ದೇವರುಗಳನ್ನೇ ಪೂಜಿಸುತ್ತಾ, ಸವರ್ಣೀಯರ ಸಂಪ್ರದಾಯಗಳನ್ನೇ ಅನುಸರಿಸುತ್ತಾ ಹಿಂದೂ ಮತದ ಮೂಲಕವಾಗಿಯೇ ತಮಗೆ ಉತ್ತಮಗತಿಯೆಂದು ನಂಬಿಕೊಂಡಿದ್ದಾರೆ. ಹೀಗೆ ಶರಣಾಗತರಾಗಿ ಬಂದವರಿಗೆ ಸ್ನೇಹತೋರದೆ ಹೋಗೆನ್ನುವುದು ಹಿಂದೂ ಧರ್ಮದ ಲಕ್ಷಣವಲ್ಲ; ಅದು ಯಾವ ಧರ್ಮವೂ ಅಲ್ಲ.

2. ಈಗಿನ ಪ್ರಪಂಚದಲ್ಲಿ ಒಂದು ಸಮಾಜದ ಬಲವೆಂದರೆ ಮೊದಲು ಸಂಖ್ಯಾಬಲ. ಹಿಂದೂ ಧರ್ಮವು ಲೋಕದಲ್ಲಿ ನಿಲ್ಲಬೇಕಾದರೆ ಹಿಂದೂ ಸಮಾಜ ನಿಂತು ಪ್ರಬಲಿಸಬೇಕು. ಹಿಂದೂ ಸಮಾಜ ಪ್ರಬಲಿಸಬೇಕಾದರೆ ಅದರ ಸಂಖ್ಯೆ ಅಭಿವೃದ್ಧಿಯಾಗಬೇಕು, ಈ ಅಭಿವೃದ್ಧಿ ಕೈಗೂಡಬೇಕಾದರೆ ಬಹು ಲಕ್ಷ ಸಂಖ್ಯೆಯುಳ್ಳ ಅಂತ್ಯಜರು ಸಂತೋಷದಿಂದ ಹಿಂದೂ ಮತ ತಮ್ಮದೆಂದು ಹೇಳಿಕೊಳ್ಳುವಂತಾಗಬೇಕು.

ಹೀಗೆ ಪರಮಾರ್ಥ ದೃಷ್ಟಿಯಿಂದ ನೋಡಿದರೂ ಸರಿ, ವ್ಯವಹಾರದ ದೃಷ್ಟಿಯಿಂದ ನೋಡಿದರೂ ಸರಿ, ಇದುವರೆಗೂ ಅವರ್ಣೀಯರೆಂದು ಪರಿಗಣಿತರಾಗಿರುವ ಈ ಜನರನ್ನು ಸವರ್ಣೀಯರಂತೆ ಅಂಗೀಕರಿಸುವುದು ಈಗ ಹಿಂದುಗಳಿಗೆ ಅತ್ಯಂತ ಅವಶ್ಯಕವಾಗಿಯೂ ಅಪರಿಹಾರ್ಯವಾಗಿಯೂ ಇದೆ.

ಪ್ರತಿಯೊಂದು ಸಮಾಜದ ಚರಿತ್ರೆಯಲ್ಲಿಯೂ ಕಾಲಪರಿವರ್ತನೆಯನ್ನನುಸರಿಸಿ ಹೊಸ ಹೊಸ ಸನ್ನಿವೇಶಗಳು ಒದಗುತ್ತವೆ. ಅಂಥ ಸಂದರ್ಭಗಳಲ್ಲಿ ಸಮಾಜವು ತನ್ನ ಪೂರ್ವ ಪದ್ಧತಿಗಳನ್ನು ಅಷ್ಟಿಷ್ಟು ತಿದ್ದಿಕೊಳ್ಳಬೇಕಾಗುತ್ತದೆ. ಹಾಗೆ ತಿದ್ದಿಕೊಳ್ಳಲೊಪ್ಪದ ಸಮಾಜವು ಕಾಲರಥದ ಚಕ್ರದ ಕೆಳಕ್ಕೆ ಸಿಕ್ಕಿ ಮಣ್ಣು ಪಾಲಾಗುತ್ತದೆ. ಈ ತತ್ವವು ನಮ್ಮ ಪೂರ್ವಿಕರಿಗೆ ಗೋಚರವಾಗದೆ ಇದ್ದದ್ದಲ್ಲ. ಜಗತ್ತಿನ ಸ್ವಭಾವವೇ ಪರಿವರ್ತನೆ. ಹೀಗೆ ಸ್ವಾಭಾವಿಕವಾಗಿ ಜಗತ್ತಿನಲ್ಲಾಗುವ ವ್ಯತ್ಯಾಸಗಳ ಕಾರಣದಿಂದ ಧರ್ಮಾಧರ್ಮಗಳ ವಿಚಾರದಲ್ಲಿ ಶಂಕೆ ಏನಾದರೂ ಹುಟ್ಟಿದರೆ ಆಗ ಪ್ರಾಜ್ಞರೂ ಧರ್ಮಸೂಕ್ಷ್ಮಜ್ಞರೂ ಆದ ಸಜ್ಜನರು ಪರಿಷತ್ತು ನಡೆಸಿ ಆಲೋಚನೆ ಮಾಡಿ, ಸಂದರ್ಭೋಚಿತವಾದಂತೆ ಆಚಾರ ಸಂಪ್ರದಾಯಗಳನ್ನು ತಿದ್ದತಕ್ಕದ್ದೆಂದು ವೇದದಲ್ಲಿಯೂ ಸ್ಮೃತಿಗಳಲ್ಲಿಯೂ ವಾಕ್ಯ ದೊರೆಯುತ್ತದೆ. ಈ ಅನುಮತಿ ವಾಕ್ಯವನ್ನು ನಮ್ಮ ವೇದಶಾಸ್ತ್ರನಿಷ್ಠರು ಜ್ಞಾಪಕಕ್ಕೆ ತಂದುಕೊಂಡು ಅದರ ಪ್ರಯೋಜನವನ್ನು ಹರಿಜನರಿಗೆ ದೊರಕಿಸಲು ಈಗ ಸಮಯವಾಗಿದೆ.

ನಮ್ಮ ಮಠಾಧಿಪತಿಗಳೂ ಮತ ಸಂರಕ್ಷಕರೂ ಈ ಪ್ರಾರ್ಥನೆಯನ್ನು ಲಾಲಿಸುವರೆ? ನಮ್ಮ ಅಂತ್ಯಜ ಸೋದರರಿಗೆ ಒಂದು ಸುಲಭವಾದ ದೀಕ್ಷೆ, ಒಂದು

ಸಾಮಾನ್ಯವಾದ ಸಂಸ್ಕಾರ–ಇವನ್ನು ಗೊತ್ತುಮಾಡಿ ಅವರಿಗೆ ಸವರ್ಣಜನ ಸಮಾನತೆಯನ್ನು ಉಂಟುಮಾಡುವುದು ಶಾಸ್ತ್ರವಿರುದ್ಧವಲ್ಲದ ರೀತಿಯಲ್ಲಿ ಸಾಧ್ಯವಾಗುವುದೆಂದು ನಾನು ಭಾವಿಸಿದ್ದೇನೆ. ಇಂಥ ಏರ್ಪಾಟೊಂದು ನಡೆಯದೆ ಹೋದರೆ ಅಂತ್ಯಜರಿಗೆ ಹಿಂದೂಮತದಲ್ಲಿ ಮಮತೆ ಹುಟ್ಟಲಾರದು. ಅವರು ಬಿಟ್ಟುಹೋದ ಬಳಿಕ ಹಿಂದೂ ಸಮಾಜದ ಬಲವು ಮತ್ತಷ್ಟು ಕ್ಷೀಣಿಸಲು ಬಹುಕಾಲ ಬೇಕಾಗಲಾರದು.

ಆದರೆ ಹರಿಜನರಿಗೆ ಇತರರು ಮಾಡುವ ಉಪಕಾರಕ್ಕಿಂತ ಹೆಚ್ಚಾಗಿ ಬೇಕಾಗಿರುವುದು ಸ್ವಸಹಾಯಬುದ್ಧಿ. ಹರಿಜನರು ಇತರರ ಕನಿಕರವನ್ನೇ ಎದುರುನೋಡಿಕೊಂಡಿರದೆ ಸ್ವಪ್ರಯತ್ನದಿಂದ ಮುಂಬುವರಿಯುವವರಾಗಬೇಕು. ಬಹುಕಾಲ ಇತರರ ಆಶ್ರಯದಲ್ಲಿ ಬೆಳೆಯುವವರಿಗೆ ಬೆನ್ನು ಮೂಳೆ ಮೆತ್ತಗಾಗಿ, ತಮ್ಮ ಕೆಲಸವನ್ನು ತಾವು ಮಾಡಿಕೊಳ್ಳುವ ಅಭ್ಯಾಸ ತಪ್ಪಿ ಹೋಗಿ, ಯಾವಾಗಲೂ ಇತರರ ಮೇಲೆಯೇ ಭಾರಹಾಕಿ, ತಮ್ಮ ಕೊರತೆಗಳಿಗೆಲ್ಲ ಇತರರನ್ನೇ ಹಳಿಯುವ ಅಭ್ಯಾಸ ಹೆಚ್ಚಿಹೋಗುತ್ತದೆ. ನಮ್ಮ ಹರಿಜನ ಬಂಧುಗಳು ಈ ಮಹಾ ಅಪಾಯಕ್ಕೆ ಎಡೆಗೊಡದೆ, ಜಾಗರೂಕರಾಗಿ ನಡೆದು, ಸ್ವಾವಲಂಬನೆಯ ಅಭ್ಯಾಸವನ್ನು ಹೆಚ್ಚಿಸಿಕೊಳ್ಳಬೇಕು. ಈ ತತ್ತ್ವವನ್ನು ಹರಿಜನ ಸೇವಕ ಸಂಘಗಳು ಲಕ್ಷ್ಯದಲ್ಲಿರಿಸಿ ಕೊಳ್ಳುವುದು ಅವಶ್ಯವೆಂದು ನಾನು ತಿಳಿದುಕೊಂಡಿದ್ದೇನೆ.

## ರಾಜನೀತಿ*

ರಾಜ್ಯ ವ್ಯವಸ್ಥೆಯನ್ನು ಕುರಿತು ಕನ್ನಡದಲ್ಲಿ ಗ್ರಂಥಪ್ರಕಟನೆ ಮಾಡಲು ಈಗ ಸಕಾಲವಾಗಿದೆ.

ಇದು ಪ್ರಜಾಪ್ರಾಬಲ್ಯದ ಕಾಲ. ಪ್ರಪಂಚದ ಎಲ್ಲ ಭಾಗಗಳಲ್ಲಿಯೂ ಈಗ ಪ್ರಜಾಧಿಕಾರವು ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಮೇಲಕ್ಕೇಳುತ್ತಿದೆ. ಇಂಗ್ಲೆಂಡು ಫ್ರಾನ್ಸುಗಳಂತೆ ಸಾಂಕುಶ ಅಥವಾ ಸಭಾಪ್ರಧಾನಕ ಸರಕಾರಗಳಿರುವ ರಾಜ್ಯಗಳಂತೂ ಸರಿ; ರಾಜನೇ ಇಲ್ಲದೆ ಏಕನಾಯಕ ರಾಷ್ಟ್ರಗಳಾಗಿರುವ ರಷ್ಯ, ಇಟಲಿ, ಜರ್ಮನಿ ದೇಶಗಳ ಸರ್ವಾಧಿಕಾರಿಗಳು ಕೂಡ ತಾವು ಪ್ರಜಾಭಿಮತದಿಂದಲೇ ಅಧಿಕಾರಪದವಿಯಲ್ಲಿದ್ದ ತಕ್ಕವರೆಂದು ಹೇಳಿಕೊಳ್ಳುತ್ತ, ಆ ಪ್ರತಿಜ್ಞೆಯ ಅಂತರ್ಭಾವವಾಗಿ ಪ್ರಜಾಶಕ್ತಿಯ ಮಹಿಮೆಯನ್ನು ಅಂಗೀಕರಿಸುತ್ತಿದ್ದಾರೆ.ಪೂರ್ವಕಾಲದ ರಾಜರುಗಳು ತಮ್ಮ ಅಧಿಕಾರವು ಕೇವಲ ದೈವಾನುಗ್ರಹದಿಂದ ತಮಗೆ ದೊರೆತದ್ದೆಂದು ವಾದಿಸುತ್ತಿದ್ದರು; ಈಗಿನ ಸರ್ವೈಕನಾಯಕರು ತಮ್ಮ ಅಧಿಕಾರವು ಕೇವಲ ಪ್ರಜಾವಿಶ್ವಾಸದಿಂದ ತಮಗೆ ದೊರೆತದ್ದೆಂದು ಸಾರುತ್ತಾರೆ. ಹೀಗೆ ಪ್ರಕೃತ ಕಾಲದಲ್ಲಿ ಪ್ರಜಾತತ್ತ್ವವು ಎಲ್ಲೆಲ್ಲೂ ಬೆಳೆಯುತ್ತಿದೆ.

* ರಾಜನೀತಿ–ಎಮ್. ಕೃಷ್ಣರಾವ್: ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಗ್ರಂಥಮಾಲೆ: ಈ ಗ್ರಂಥಕ್ಕೆ ಬರೆದ ಮುನ್ನುಡಿ(15 ಜೂನ್ 1940).

ಆದರೆ ಪ್ರಜಾಸ್ವಾಮಿತ್ವವು ಹೀಗೆ ಹರಡಿ ಬಲಿಯುತ್ತಿದೆಯೆಂಬ ಮಾತ್ರದಿಂದಲೇ ಲೋಕಹಿತಾಕಾಂಕ್ಷಿಗಳು ತೃಪ್ತಿಪಡಲಾರರು. ರಾಜ್ಯ ವ್ಯವಸ್ಥೆಯೆಂಬುದು ಯಾರಿಗೂ ತನ್ನಷ್ಟಕ್ಕೆ ತಾನೇ ಒಂದು ಸಾಧನ ಮಾತ್ರ; ಅದರ ಪರಮೋದ್ದೇಶವು ಜನಹಿತ. ಈ ಉದ್ದೇಶವು ಸಿದ್ಧಿಸಬೇಕಾದರೆ ರಾಜ್ಯವ್ಯವಸ್ಥೆಯಲ್ಲಿ ನ್ಯಾಯಪ್ರವೃತ್ತಿಯೂ ಕಾರ್ಯಕಾರಣ ವಿವೇಚಕ ಬುದ್ಧಿಯೂ ಅಂಗಪ್ರತ್ಯಂಗಗಳಲ್ಲಿ ವ್ಯಾಪಿಸಿರಬೇಕು. ಇಂಥ ನೀತಿವಿವೇಕಗಳ ಪರಿಮಾಣವು-ಒಟ್ಟಿನ ಮೇಲೆ ನೋಡಿದರೆ-ರಾಜಪ್ರಧಾನವಾದ, ಅಥವಾ ಸಚಿವಾದಿ ಭೃತ್ಯ ಪ್ರಧಾನವಾದ, ವ್ಯವಸ್ಥೆಯಲ್ಲಿರುವುದಕ್ಕಿಂತ ಪ್ರಜಾಪ್ರಧಾನವಾದ ವ್ಯವಸ್ಥೆಯಲ್ಲಿ ಬಹುಶಃ ಹೆಚ್ಚಾಗಿರುತ್ತದೆಂಬುದು ಈಗಿನ ಕಾಲದ ನಂಬಿಕೆ. ಈ ನಂಬಿಕೆಯೇ ಪ್ರಜಾತತ್ತ್ವಕ್ಕಿರುವ ಆಧಾರ. ಈ ಆಧಾರವು ಭದ್ರವಾಗಿ ನಿಲ್ಲಬೇಕಾದರೆ ಪ್ರಜಾಜನದಲ್ಲಿ ನೀತಿಶ್ರದ್ಧೆಯೂ ವಿಚಾರಶಕ್ತಿಯೂ ನೆಲೆಗೊಂಡಿರುವುದು ಮೊದಲು ಖಂಡಿತವಾಗಬೇಕು. ಈ ಪೂರ್ವಸಿದ್ಧತೆಯನ್ನು ಸಂಪಾದಿಸುವ ಪ್ರಜೆಯು ಕೈಯಲ್ಲಿ ರಾಜ್ಯ ಸೂತ್ರಗಳನ್ನಿರಿಸುವುದು ಪಟ್ಟಾವರಸೆ ಕಲಿಯುವವನ ಕೈಗೆ ಕತ್ತಿ ಕೊಟ್ಟ ಹಾಗೆ, ಗರಡಿ ಸಾಮರಿಯದವನನ್ನು ಕುಸ್ತಿಗೆ ಬಿಟ್ಟಹಾಗೆ; ಅವನು ಇತರರನ್ನು ಹೊಡೆಯ ಹೊರಟು ತನ್ನ ಕೈಮೈಗಳನ್ನೇ ಗಾಯಪಡಿಸಿಕೊಂಡು ಹಿಂದಿರುಗಬಹುದು. ಪ್ರಜಾಧಿಕಾರವು ಇಂಥ ವಿಪತ್ತಿಗೆ ಸಿಕ್ಕದೆ ಕೃತಕೃತ್ಯವಾಗಿ ಜಯ ಪಡೆಯಲು ಪ್ರಜಾಸಾಮಾನ್ಯದಲ್ಲಿ ನ್ಯಾಯನಿಷ್ಠೆಯೂ ಕಾರ್ಯಾಕಾರ್ಯ ಪರಿಜ್ಞಾನವೂ ತುಂಬಿರುವುದು ಅವಶ್ಯವಾಗಿದೆ. ಆ ಶಿಕ್ಷಣಕ್ಕೆ ಸಾಧಕವಾದದ್ದು ಇಂಥ ಗ್ರಂಥ.

ಸಾಮಾನ್ಯವಾಗಿ ಎಲ್ಲ ಕಲೆ ಎಲ್ಲ ಶಾಸ್ತ್ರಗಳ ವ್ಯಾಸಂಗವೂ ಎರಡು ಭಾಗಗಳನ್ನೊಳಗೊಂಡಿರುತ್ತದೆ: ಒಂದು ತತ್ತ್ವ ಸೂತ್ರದ್ದು, ಇನ್ನೊಂದು ಪ್ರಯೋಗದ್ದು; ಒಂದು ಪುಸ್ತಕದ್ದು, ಇನ್ನೊಂದು ಅನುಭವದ್ದು. ಸೂತ್ರ-ಪ್ರಯೋಗಗಳೆರಡೂ ಜೊತೆಗೂಡಿದಾಗ ಹುಟ್ಟುವ ಜ್ಞಾನವೇ ಸಾರ್ಥಕವಾಗುವ ಜ್ಞಾನ. ರಾಜಕೀಯ ವಿಚಾರಗಳಲ್ಲಿ ನಮ್ಮ ಕನ್ನಡ ಜನರು ಪ್ರಯೋಗಾನುಭವ ಪಡೆಯಲು ಬ್ರಿಟಿಷ್ ಇಂಡಿಯ ಪ್ರಾಂತಗಳಲ್ಲಿ ಶಾಸನ ಸಂಸ್ಥೆ, ಸ್ಥಳೀಯ ಸಂಸ್ಥೆಗಳೂ, ಮೈಸೂರು ಸಂಸ್ಥಾನದಲ್ಲಿ ಪ್ರಜಾಪ್ರತಿನಿಧಿ ಸಭೆ ಶಾಸನ ಸಭೆಗಳೂ ಅಷ್ಟಿಷ್ಟು ಅವಕಾಶವನ್ನು ಒದಗಿಸಿವೆ. ಆದರೆ ತತ್ತ್ವಸೂತ್ರಗಳನ್ನು ವಿವರಿಸುವ ಪುಸ್ತಕ ಕನ್ನಡದಲ್ಲಿ ಯಾವುದೂ ಇದುವರೆಗೆ ಪ್ರಕಟವಾಗಿರುವಂತೆ ನನ್ನ ತಿಳಿವಳಿಕೆಗೆ ಬಂದಿಲ್ಲ.

"ಪಾಶ್ಚಾತ್ಯ ರಾಜಕೀಯ ಸಂಪ್ರದಾಯಗಳ ಪ್ರಥಮ ಪರಿಚಯವನ್ನ ಮಾಡಿಸುವುದು ಈ ಗ್ರಂಥದ ಉದ್ದೇಶ'' ಎಂದು ಪ್ರಕೃತ ಲೇಖಕರು ಹೇಳಿದ್ದಾರೆ. ನಮ್ಮ ಪೌರಸ್ತ್ಯ

ರಾಜ್ಯಸಂಪ್ರದಾಯಗಳ ವಿಚಾರವೇನು- ಎಂದು ಯಾರಾದರೂ ಕೇಳುವುದು ಸ್ವಾಭಾವಿಕವಾಗಿದೆ. ಅದಕ್ಕುತ್ತರವಾಗಿ, ದೇಶಾಭಿಮಾನದ ಮಾತನ್ನು ಒಂದುಕಡೆಗಿರಿಸಿ, ಯಥಾರ್ಥವನ್ನು ಗೌರವಿಸುವುದಾದರೆ, ರಾಜ್ಯಶಾಸ್ತ್ರವು ಯೂರೋಪಿನಲ್ಲಿ ಬೆಳೆದು ಶಾಖೋಪಶಾಖೆಗಳಾಗಿ ವಿಕಾಸಗೊಂಡಿರುವಂತೆ ಹಿಂದೂ ದೇಶದಲ್ಲಿ ಆ ಶಾಸ್ತ್ರವು- ಆ ವಿಸ್ತಾರ ರೀತಿಯಲ್ಲಿ ಆ ಪರಂಪರಾಕ್ರಮದಲ್ಲಿ - ಬೆಳೆದು ಬಂದಿಲ್ಲವೆಂದೇ ಹೇಳಬೇಕಾಗುತ್ತದೆ. ನಮ್ಮ ಸ್ಮೃತಿಗಳು, ಶಾಂತಿಪರ್ವ, ಶುಕ್ರನೀತಿ, ಕೌಟಿಲೀಯ- ಇವುಗಳಲ್ಲಿ ರಾಜಧರ್ಮ ವಿವರಗಳು ಉಲ್ಲಿಖಿತವಾಗಿರುವುದು ನಿಜ. ಆದರೆ ಆ ಭಾವನೆಗಳು ಪ್ರಾಕೃತ ರೂಪದವು, ಬೀಜಪ್ರಾಯದವು, ಅಂಗಾಂಗ ವಿವರವನ್ನು ಹೊರಗಾಣಿಸದವು. ಅವು ಕೇವಲ ಮೂಲ ಸೂತ್ರಗಳು: ರಾಜನ ಕರ್ತವ್ಯ ಪ್ರಜಾಪರಿಪಾಲನೆ: ದುಷ್ಟರನ್ನು ದಂಡಿಸುವುದು, ಶಿಷ್ಟರನ್ನು ಪೋಷಿಸುವುದು, ನ್ಯಾಯಾನ್ಯಾಯ ವಿವಾದವನ್ನು ವಿಚಾರಣೆಯಿಂದ ತೀರ್ಮಾನಿಸುವುದು, ತೆರಿಗೆಯ ಹೊರೆಯನ್ನು ಹಗುರವಾಗಿರಿಸುವುದು, ವರ್ಣಾಶ್ರಮ ವ್ಯವಸ್ಥೆಯನ್ನು ಉಳಿಸುವುದು, ಪರರಾಜರ ಪೆಟ್ಟಿನಿಂದ ತನ್ನ ರಾಜ್ಯವನ್ನು ಕಾಪಾಡುವುದು- ಇವೇ ಮೊದಲಾದ ಕರ್ತವ್ಯಗಳು ರಾಜಧರ್ಮದ ಅಂಶಗಳೆಂದು ನಮ್ಮ ಸ್ಮೃತಿ ಪುರಾಣಗಳೆಲ್ಲ ಹೇಳುತ್ತವೆ. ಆದರೆ ಈ ಸರ್ವಸಮ್ಮತವಾದ ಧರ್ಮವು ತಪ್ಪದೆ ನಡೆದುಕೊಂಡು ಬರುವಂತೆ ದೃಢಪಡಿಸಲು ನಮ್ಮ ಪೂರ್ವಿಕರು ಮಾಡಿದ್ದ ಏರ್ಪಾಟುಗಳೆಂಥವು? ಅವರು ಕಲ್ಪಿಸಿದ್ದ ರಾಜ್ಯಯಂತ್ರದ ಕೀಲುಗಳೂ ಚಕ್ರಗಳೂ ಹೇಗೆ ಹೇಗೆ ಕೆಲಸಮಾಡಿ ಧರ್ಮವನ್ನು ಸಾಧಿಸುತ್ತಿದ್ದವು? ಆ ಯಂತ್ರದ ಕೆಲಸವೇನಾದರೂ ಒಂದು ವೇಳೆ ಹದಗೆಟ್ಟರೆ ಅದರ ಲೋಪದೋಷಗಳಾವುವೂ ರಾಜನಿಗೆ ಅಂಟಲಾಗದಂತೆ-ಮಂತ್ರಿವರ್ಗವೇ ರಾಜನಾಮಾಂಕಿತ ಕ್ರಿಯೆಗಳೆಲ್ಲಕ್ಕೂ ಜವಾಬ್ದಾರಿಯುಳ್ಳದ್ದೆಂದು ಈಗ ಇಂಗ್ಲೆಂಡ್ ಮೊದಲಾದ ರಾಷ್ಟ್ರಗಳಲ್ಲಿ ಸಂಕೇತಮಾಡಿಕೊಂಡಿರುವಂತೆ - ನಮ್ಮ ಪೂರ್ವಿಕರೂ ಒಂದು ಯುಕ್ತಿಯನ್ನು ಏರ್ಪಡಿಸಿಕೊಂಡಿದ್ದರೆ? ವೇನನೆಂಬ ರಾಜನು ಧರ್ಮವನ್ನು ಪ್ರಚಾರ ಮಾಡಿದನೆಂದೂ ಅದಕ್ಕಾಗಿ ಋಷಿಗಳು ಅವನನ್ನು ದಂಡಿಸಿದರೆಂದೂ ಕೆಲವು ಪುರಾಣಗಳಲ್ಲಿಯೂ ಮನುಸ್ಮೃತಿಯಲ್ಲಿಯೂ ಹೇಳಿದೆ. ಅವನ ಜೊತೆಗೆ ಸೇರುವ ನಹುಷ ಮೊದಲಾದ ನಾಲ್ವರೈವರು ಮಂದಿ ಪೌರಾಣಿಕ ರಾಜರನ್ನು ಬಿಟ್ಟು, ಐತಿಹಾಸಿಕಯುಗದ ಸಾಮಾನ್ಯರಾಜರ ಸಾಮಾನ್ಯ ಚರ್ಯೆಯನ್ನು ನಾವು ನೋಡುವುದಾದರೆ, ಅವರನ್ನು ಸಾಮಾನ್ಯವಾಗಿ ಧರ್ಮಮಾರ್ಗದಲ್ಲಿ ನಿಲ್ಲಿಸಿರುತ್ತಿದ್ದ ಶಕ್ತಿ ಅಥವಾ ಪ್ರೇರಣೆ ಯಾವುದು? ರಾಜ್ಯಕ್ರಮದ ಶಿಸ್ತೆ? ಪ್ರಜೆಗಳಿಂದ ತೋರುತ್ತಿದ್ದ ಭಯವೆ? ಆ ಶಿಸ್ತಿನ ಸ್ವರೂಪವೆಂಥಾದ್ದು? ಆ ಭಯವು ಕೆಲಸಮಾಡುತ್ತಿದ್ದ ರೀತಿಯೆಂಥಾದ್ದು? ಈ ಪ್ರಶ್ನೆಗಳು ಈಗ ನಮಗೆ ಉಪಯುಕ್ತವಾದವು.

ಇವಕ್ಕೆ ಉತ್ತರ ನಿಷ್ಕರ್ಷೆ ಕಷ್ಟವಾಗಿದೆ. ರಾಜಕೀಯದಲ್ಲಿಯೇ ಅಲ್ಲ ;- ಅಧ್ಯಾತ್ಮವಿಚಾರದಲ್ಲಿ, ಸಾಹಿತ್ಯವಿಚಾರದಲ್ಲಿ,ಸಂಗೀತಾದಿ ಕಲೆಗಳ ವಿಚಾರದಲ್ಲಿ ಎಲ್ಲ ಶಾಸ್ತ್ರಗಳ ವಿಚಾರದಲ್ಲಿಯೂ ನಮ್ಮಲ್ಲಿ ಒಂದು ಅನುಪೂರ್ವಿಯನ್ನು ಗೊತ್ತುಮಾಡಲು ಸಾಧನಗಳು ಸಾಲವು. ನಮ್ಮಲ್ಲಿ ಶಾಸ್ತ್ರದ ಉತ್ಪತ್ತಿ ಮಾನುಷ ರೀತಿಯಲ್ಲಿ ಹೇಗಾಯಿತು? ಅದರ ಭಾವನೆಗಳು ಮೊದಲು ಹೇಗಿದ್ದವು? ಅವನ್ನು ವಿಸ್ತರಿಸಿದವರಾರು? ತಿದ್ದಿದವರಾರು? ಹೀಗೆ ಒಂದು ಕಾಲದಿಂದ ಇನ್ನೊಂದು ಕಾಲಕ್ಕೆ ಆದ ಮಾರ್ಪಾಟುಗಳೇನು? ಈ ವಿವರಗಳು ನಮಗೆ ದೊರೆಯುವುದಿಲ್ಲ. ನಮ್ಮ ರಾಜ್ಯಶಾಸ್ತ್ರವಂತೂ ಶಾಸ್ತ್ರವೆನ್ನಿಸಿಕೊಳ್ಳುವಷ್ಟರ ಮಟ್ಟಿನ ಅವಯವ ಪುಷ್ಟಿಯನ್ನೇ ಪಡೆದಿಲ್ಲ. ಬೀಜ ಮೊಳೆತು ಎರಡು ಮೂರು ಎಲೆ ಎದ್ದಕೂಡಲೆ ಕರಡುಕಟ್ಟಿದ ಸಸಿಯಂತೆ ಅದು ನಿಂತಿದೆ.

ಪಾಶ್ಚಾತ್ಯರ ರಾಜ್ಯಶಾಸ್ತ್ರವಾದರೋ ಲೋಕಜೀವನದ ಭಾಗವಾಗಿ ಬೆಳೆದು ಅನುಸ್ಯೂತವಾದ ಚರಿತ್ರೆಯನ್ನು ಪಡೆದುಕೊಂಡಿದೆ. ಅದರ ಭಾವನೆಗಳು ಹೇಗೆ ಹುಟ್ಟಿದವು ಹೇಗೆ  ಬದಲಾಯಿಸಿದವು, ಅದರ ಬೆಳವಣಿಗೆಗೆ ಯಾರು ಯಾರು ಕಾರಣಕರ್ತರು, ಆ ಭಾವನೆಗಳು ಯಾವ ಯಾವ ಸಂದರ್ಭಗಳಿಗೆ ಹೇಗೆ ಹೇಗೆ ಅನ್ವಯಿಸುತ್ತವೆ ಅಥವಾ ಅನ್ವಯಿಸಲಾರವು- ಈ ವಿವರಗಳನ್ನು ತಿಳಿಸುವ ಸಂಗತಿಗಳು ಪಾಶ್ಚಾತ್ಯರಲ್ಲಿ ಯಥೇಷ್ಟವಾಗಿವೆ. ನಮ್ಮ ದೇಶದಲ್ಲಿ ಆಧ್ಯಾತ್ಮಿಕ ವಿಷಯಗಳಲ್ಲಿ ವಾದ ಪ್ರತಿವಾದಗಳು ವಿಪುಲವಾಗಿ ಬೆಳೆದಿರುವಂತೆ ಪಾಶ್ಚಾತ್ಯರಲ್ಲಿ ರಾಜ್ಯತತ್ತ್ವಗಳ ವಿಮರ್ಶೆ ಆಳವಾಗಿಯೂ ಕೂಲಂಕಷವಾಗಿಯೂ ನಡೆದುಬಂದಿದೆ. ಅಲ್ಲಿ ಮಹಾ ಮೇಧಾವಿಗಳಾದ ತತ್ತ್ವವಿಚಾರಕರು, ಒಬ್ಬರ ಹಿಂದೆ ಒಬ್ಬರು, ಕೇವಲ ಲೋಕಹಿತದೃಷ್ಟಿಯಿಂದ ರಾಜ್ಯವಿಚಾರಗಳನ್ನು ಕುರಿತು ಆಲೋಚಿಸಿ, ಜಿಜ್ಞಾಸೆ ನಡೆಸಿದ್ದಾರೆ; ಮತ್ತು ಪರಮಶಕ್ತರಾದ ರಾಜ್ಯಕಾರ್ಯಕರ್ತರು ರಾಜಕೀಯ ಸಂಸ್ಥೆ ಸಂಪ್ರದಾಯಗಳನ್ನು ಪೋಷಿಸಿ ಸಂಸ್ಕರಿಸಿದ್ದಾರೆ. ಹೀಗೆ ಸಂತತವಾಗಿ ಬೆಳೆದು, ಇನ್ನೂ ಬೆಳೆಯುತ್ತ, ಕಾಲೋಪಯೋಗಿಯಾಗಿ, ಸಜೀವವಾಗಿರುವುದು ಪಾಶ್ಚಾತ್ಯರ ರಾಜ್ಯಶಾಸ್ತ್ರ

ನಮ್ಮ ಶಾಸ್ತ್ರಗಳಲ್ಲಿಯ ರಾಜಧರ್ಮವಾಕ್ಯಗಳು ಸೂತ್ರಪ್ರಾಯವಾದುವೆಂದು ಮೇಲೆ ಅರಿಕೆಮಾಡಿದ್ದೇನೆ. ಆ ಸೂತ್ರಗಳ ಅರ್ಥವಿಸ್ತಾರವನ್ನರಿಯಲು ನಮಗೆ ವ್ಯಾಖ್ಯಾನ ಅವಶ್ಯಕವಾಗಿದೆ. ಪಾಶ್ಚಾತ್ಯ ರಾಜ್ಯಶಾಸ್ತ್ರವು ಇಂಥ ವ್ಯಾಖ್ಯಾನವೆಂದು ಹೇಳಬಹುದು. ಪಾಶ್ಚಾತ್ಯ ರಾಜ್ಯಶಾಸ್ತ್ರದ ಅನೇಕ ಭಾಗಗಳು ನಮ್ಮ ಧರ್ಮಸೂತ್ರಗಳ ಅಂತರ್ಭಾವಗಳನ್ನು ನೆಲಮಾಳಿಗೆಯಿಂದ ಹೊರಕ್ಕೆ ತರುವಂತಿವೆ. ಆದಕಾರಣ ಪಾಶ್ಚಾತ್ಯ ಶಾಸ್ತ್ರ ವ್ಯಾಸಂಗವು ನಮ್ಮ ಸ್ಮೃತಿಗಳ ಅರ್ಥವಿವರಣೆಗೆ  ಮಾರ್ಗದರ್ಶಕವಾಗಿದೆ. ನಾವು ಸ್ವಶಾಸ್ತ್ರದ ಅಭಿಮಾನದಿಂದ

"ಸತ್ಯ, ಧರ್ಮ: ಸತ್ಯ, ಧರ್ಮ" ಎಂಬ ಮಂತ್ರವನ್ನು ಶುಕಪಾಠಮಾಡಿದ ಮಾತ್ರದಿಂದ ಚರಿತಾರ್ಥರಾಗಲಾರೆವು. ಆ ದಿವ್ಯ ಸೂತ್ರಗಳನ್ನು ಲೋಕಸಂದರ್ಭಗಳಿಗೆ ಅನ್ವಯಿಸಿ ಕಾರ್ಯರೂಪದಲ್ಲಿ ಸಾರ್ಥಕಪಡಿಸುವುದು ಈಗ ನಮಗಿರುವ ಕರ್ತವ್ಯ.

ಪಾಶ್ಚಾತ್ಯ ರಾಜನೀತಿಯ ಈಚಿನ ಬೆಳವಣಿಗೆಯಲ್ಲಿ ಎರಡು ಲಕ್ಷಣಗಳು ವಿಶೇಷವಾಗಿ ತೋರುತ್ತವೆ: ಒಂದನೆಯದು ರಾಜ್ಯವ್ಯವಸ್ಥೆಯಲ್ಲಿ ಪ್ರಜಾಪ್ರಮುಖತೆ. ಇಂದಿನ ರಾಜನು ತಾನೂ ಒಬ್ಬ ಪ್ರಜೆ; ಪ್ರಜೆಯಲ್ಲಿ ಪ್ರಥಮನು, ಆದರೆ ಅವರಿಗಿಂತ ಪ್ರಬಲನೇನೂ ಅಲ್ಲ. ಹಿಂದಿನ ರಾಜ್ಯದಲ್ಲಿ ರಾಜನು ತಲೆ ಎದೆ ಎರಡೂ ಆಗಿದ್ದವನು; ಇಂದಿನ ರಾಜ್ಯದಲ್ಲಿ ಅವನು(ಇರುವ ಕಡೆ) ರಾಜ್ಯದ ತಲೆ; ಪ್ರಜೆಯೋ ಅದರ ಎದೆ. ನಮ್ಮಲ್ಲಿ ಆಶೆಗಳೂ, ಧ್ಯೇಯಗಳೂ ಹುಟ್ಟಿ ಜೀವನವನ್ನು ಪ್ರೇರಿಸುವುದು ಎದೆಯಿಂದ; ಹಾಗೆ ಅವು ಹುಟ್ಟಿದ ಬಳಿಕ ಅವುಗಳ ಅಧೀನದಲ್ಲಿ ತಕ್ಕ ಉಪಾಯ ಸಾಧನಗಳನ್ನೊದಗಿಸುವುದು ತಲೆ. ಗೌರವ ಶಿರಸ್ಸಿಗೆ, ಸಂತೋಷ ಮನಸ್ಸಿಗೆ; ಜೀವನ ಸಾರ್ಥಕವಾಗುವುದು ಉಭಯರ ಸಾಮರಸ್ಯದಿಂದ.

ಎರಡನೆಯ ಆಧುನಿಕ ವಿಶೇಷ ಲಕ್ಷಣವು ರಾಜ್ಯದ ಕರ್ತವ್ಯಕ್ಷೇತ್ರ ವಿಸ್ತರಣೆ. ಹಿಂದೆ ರಾಜ್ಯದ ಮುಖ್ಯ ಕಾರ್ಯವನ್ನು "ದಂಡನೀತಿ" ಎಂದು ಕರೆಯುತ್ತಿದ್ದರು. ಅದು ಮುಖ್ಯವಾಗಿ ಈಗಿನ ಪೋಲಿಸ್, ಜುಡಿಷಿಯಲ್ ಇಲಾಖೆಗಳ ಕೆಲಸ. ನಮ್ಮ ಕಾಲದಲ್ಲಿ ಜನರ ಆರ್ಥಿಕ ಪರಿಸ್ಥಿತಿಯ ವಿಚಾರವೂ ಸಾಮಾಜಿಕ ಸಮಾಧಾನದ ವಿಚಾರವೂ ಸರಕಾರದ ಮುಖ್ಯ ಕರ್ತವ್ಯಗಳಾಗಿವೆ. ವಿದ್ಯಾಪ್ರಚಾರ, ನಿರುದ್ಯೋಗ- ನಿವಾರಣೆ, ಬಂಡವಾಳಸ್ಥರಿಗೂ ಕೆಲಸಗಾರರಿಗೂ, ಹಾಗೆಯೇ ಸಾಹುಕಾರರಿಗೂ ಸಾಲಗಾರರಿಗೂ ಇರಬೇಕಾದ ಪರಸ್ಪರ ಸಂಬಂಧ, ವೃದ್ಧರಿಗೂ ಅನಾಥರಿಗೂ ಆಪದ್ಗತರಿಗೂ ಕಷ್ಟ ಪರಿಹಾರದ ಏರ್ಪಾಟು, ನಾನಾ ವರ್ಗ ದರ್ಜೆಗಳ ಜನರಿಗೆ ಸಮಾನಾವಕಾಶ ಕಲ್ಪನೆ – ಇವೇ ಮೊದಲಾದ ಆರ್ಥಿಕ ಸಾಮಾಜಿಕ ಪ್ರಶ್ನೆಗಳು ಇಂದಿನ ರಾಜ್ಯದ ಕರ್ತವ್ಯಕರ್ಮಗಳಲ್ಲಿ, ಹಿಂದಿನಿಂದ ಬಂದಿರುವ ನ್ಯಾಯ ನಿರ್ಣಯದ ದುಷ್ಟ ದಂಡನೆಗಳಂತೆಯೇ, ಮುಖ್ಯಗಳಾಗಿರುತ್ತವೆ.

ಪ್ರಜಾತಂತ್ರವು ಜಗತ್ಸೃಷ್ಟಿಯ ಕಾಲದಿಂದ (ಅಂಥಾ ಕಾಲವೊಂದು ಗೊತ್ತಾಗಿದ್ದರೆ ಅಂದಿನಿಂದ) ಬಂದದ್ದೇನೂ ಅಲ್ಲ. (ಗ್ರೀಸ್ ರೋಮ್ ದೇಶಗಳ ಮಾತು ಬೇರೆ.) ವಾಸ್ತವವಾಗಿ ರಾಜೈಕಾಧಿಕಾರವೇ ಮೊದಲಿದ್ದದ್ದು, ಪ್ರಜಾಸರಕಾರವು ಈಚಿನದು.ಇದು ಮಾನವಪ್ರಗತಿಯ ಫಲಿತಾಂಶಗಳಲ್ಲೊಂದು. ಮನುಷ್ಯ ಬುದ್ಧಿಯು ವಿಕಾಸಗೊಂಡು ಮುಂದೆ ಮುಂದೆ ನಡೆದಂತೆಲ್ಲ ಅವನ ರಾಜಕೀಯ ಪ್ರಗತಿಯು ಹೊಸ ಹೊಸ ದಾರಿಗಳನ್ನು ಹಿಡಿದು ಹೊಸ ರೂಪಗಳನ್ನು ತಾಳುವುದು ಸಹಜವಾಗಿದೆ. ನಾನಾ ದೇಶಗಳ ಪ್ರಜಾ ಜನರು ನಾನಾ ರಾಜ್ಯ ಪದ್ಧತಿಗಳ ಗುಣಾವಗುಣಗಳನ್ನು ಅನುಭವದಿಂದ ಕಂಡುಕೊಂಡು,

ತಮ್ಮ ಅನುಭವಗಳನ್ನು ನೆರೆಹೊರೆಯವರ ಅನುಭವಗಳೊಡನೆ ಹೋಲಿಸಿ ನೋಡಿ, ಇಂಥ ಜ್ಞಾನಾನುಭವಗಳಿಂದ ಉದಿಸಿದ ಬುದ್ಧಿ ಚಾತುರ್ಯಗಳ ಮೂಲಕ ತಮ್ಮ ಸಂಸ್ಥೆ ಸಂಪ್ರದಾಯಗಳನ್ನು ಆಗಿಂದಾಗ್ಗೆ ಪರಿಶೋಧಿಸಿಕೊಂಡು, ಹೀಗೆ ಪ್ರಚಾರಕ್ಕೆ ತಂದಿರುವುದು ಪ್ರಜಾಪ್ರಭುತ್ವ ಪದ್ಧತಿ. ಈ ಪದ್ಧತಿಯು ರಾಜಾಯತ್ತಪದ್ಧತಿ ಸಚಿವಾಯತ್ತ- ಪದ್ಧತಿಗಳಿಂದ ಪ್ರತ್ಯೇಕವಾದದ್ದಾದರೂ ಈ ಪ್ರಜಾಪದ್ಧತಿಯೊಳಗೂ ಪ್ರಭೇಧ ವಿಭೇಧಗಳೆಷ್ಟೋ ಇವೆ. ಈ ಅಂತರ್ಜಾತಿಗಳ ಆಕಾರ ವಿಕಾರಗಳೂ ನಮ್ಮ ವಿಚಾರ ಗಮನಕ್ಕೆ ಅರ್ಹವಾದವು.

ಈ ವಿಷಯಕ್ಕೆ ತಕ್ಕ ಪರಿಭಾಷಾ ಸಾಮಗ್ರಿಯೂ ವಾಕ್ಯಬಂಧನ ಸೌಲಭ್ಯವೂ ಕನ್ನಡದಲ್ಲಿ ಇನ್ನೂ ಸಿದ್ಧವಾಗಬೇಕಾಗಿವೆ.ರಾಜ್ಯಶಾಸ್ತ್ರವು ವಿಸ್ತಾರವಾದ ಮತ್ತು ಜಟಿಲ ಕ್ಲಿಷ್ಟವಾದ ಶಾಸ್ತ್ರ. ನಮ್ಮ ಮೀಮಾಂಸಾದಿ ಶಾಸ್ತ್ರಗಳಂತೆ, ಪಾಶ್ಚಾತ್ಯರ ಭೌತ ರಾಸಾಯನಿಕಾದಿ ವಿಜ್ಞಾನ ಶಾಸ್ತ್ರಗಳಂತೆ, ರಾಜ್ಯಶಾಸ್ತ್ರವೂ ಮಹಾ ಪ್ರಭಾವಶಾಲಿಯಾಗಿ ಲೋಕಪ್ರಯೋಜಕವಾಗಿ ಗೌರವಾರ್ಹವಾಗಿರುವ ಶಾಸ್ತ್ರ. ರಾಜ್ಯವ್ಯವಸ್ಥೆಯೆಂಬುದು ನಮ್ಮ ಹೊರಜೀವನ ಒಳಜೀವನಗಳೆರಡಕ್ಕೂ ಸಂಬಂಧಪಟ್ಟಿದ್ದು. ಹೊರಗಡೆ ಅದು ನಮ್ಮ ಮನೆ, ಮಠ, ಉದ್ಯೋಗ, ವ್ಯಾಪಾರ, ಆಸ್ತಿ ಸಂಚಾರ ಸೌಕರ್ಯ, ಆಚಾರ, ವ್ಯವಹಾರ, ಸ್ವಾತಂತ್ರ್ಯ ಇವುಗಳಿಗೆ ಸಂಬಂಧಪಟ್ಟದ್ದಾಗಿದೆ. ಒಳಗಡೆ ಅದು ತನ್ನ ಶಾಸನ, ನಿಯಮ ಕಾರ್ಯ ವಿಧಾನ, ಆಡಳಿತಗಳ ಮೂಲಕ ನಮ್ಮ ಮನಃಪ್ರವೃತ್ತಿಗಳನ್ನು ತಿದ್ದಿ, ನೀತಿಯನ್ನೂ ನಡವಳಿಕೆಯನ್ನೂ ಗೊತ್ತುಪಡಿಸುತ್ತದೆ. ಹೀಗೆ ಬಾಹ್ಯಸೌಕರ್ಯ ಅಂತರಂಗ ಸಂಸ್ಕಾರಗಳೆರಡಕ್ಕೂ ಮುಖ್ಯವಾದದ್ದು ರಾಜ್ಯಶಾಸ್ತ್ರ ಅಥವಾ"ರಾಜನೀತಿ". ಈ ಸಂದರ್ಭದಲ್ಲಿ "ರಾಜ" ಶಬ್ದಕ್ಕೆ ಸರ್ವಾಧ್ಯಕ್ಷನಾದ ಅಥವಾ ಸಿಂಹಾಸನಾರೂಢನಾದ ಒಬ್ಬ ರಾಜ್ಯಾಧಿಕಾರಿ ಎಂದು ಹೇಳುವುದಕ್ಕಿಂತ ಸರಕಾರವನ್ನು ನಡೆಸುವ ಅಧಿಕಾರ ಮತ್ತು ಆ ಅಧಿಕಾರದ ವಿನಿಯೋಗವನ್ನಪೇಕ್ಷಿಸುವ ಬಾಧ್ಯತೆ ಇವೆರಡೂ ಆ ಪದದಲ್ಲಿ ಸೇರಿವೆಯೆಂದೂ-ಅದು ಅಧಿಕಾರ-ಬಾಧ್ಯತೆಗಳ ಯೋಜನೆಯೆಂದು-ಭಾವಿಸುವುದು ಉಚಿತವೆಂಬುದಾಗಿ ನನಗೆ ತೋರುತ್ತದೆ. ರಾಜ್ಯಾಂಗಗಳ ಯೋಜನೆ, ರಾಜ್ಯಾಧಿಕಾರಗಳ ಹಂಚಿಕೆ, ಅಧಿಕಾರ ಚಲನೆಯ ಕ್ರಮ, ವಿಧೇಯ ವರ್ತನೆಯ ಕ್ರಮ, ಸರಕಾರದ ಜವಾಬ್ದಾರಿ ಪ್ರಜೆಯ ಹಕ್ಕುದಾರಿಕೆ ಇವೆಲ್ಲ ಸಮಗ್ರವಾಗಿ ಸೇರಿ ಆಗಿರುವುದು ರಾಜ್ಯಶಾಸ್ತ್ರ. ಈ ಶಾಸ್ತ್ರವು ಲೋಕದ ಸಾಮಾನ್ಯ ನೀತಿಶಾಸ್ತ್ರದ ಒಂದು ದೊಡ್ಡ ಭಾಗ. ಒಂದು ಕಡೆ ಅದು ರಾಜಧರ್ಮ; ಇನ್ನೊಂದು ಕಡೆ ಅದು ಪ್ರಜಾಧರ್ಮ.

# ನಮ್ಮ ಪ್ರಜಾರಾಜ್ಯದ ಪ್ರಗತಿ*

ಬಯಸಿ ಬಯಸಿ ನಾವು ಪ್ರಜಾರಾಜ್ಯವನ್ನು ತಂದುಕೊಂಡು ಏಳು ವರ್ಷವಾಯ್ತಲ್ಲವೆ? ಈ ರಾಜ್ಯ ಕೆಲಸಮಾಡಿರುವ ರೀತಿಯನ್ನು ಪರೀಕ್ಷಿಸಿ ಗುಣದೋಷವಿಮರ್ಶೆ ಮಾಡಲು ಈಗ ತಕ್ಕಷ್ಟು ಕಾಲವಾಗಿದೆ. ಪರೀಕ್ಷೆಯನ್ನು ಈಗ ನಡೆಸದೇ ಹೋದರೆ ಪ್ರಗತಿಯ ಮಾರ್ಗವು ನಮಗೆ ಇನ್ನೂ ಅತಿ ದೂರವಾಗಬಹುದು. ಪದೇಪದೇ ದೇಶಗತಿಯನ್ನು ಪರೀಕ್ಷಿಸಿ ತಿದ್ದುಪಾಟುಗಳನ್ನು ಯೋಚಿಸುತ್ತಿರುವುದೊಂದೇ ಪ್ರಜಾ ರಾಜ್ಯದ ಆರೋಗ್ಯಕ್ಕೆ ತಕ್ಕ ದಾರಿ. ಆದದ್ದರಿಂದ ವರ್ಷೇ ವರ್ಷೇ ಬರುವ ಈ ಜನ ರಾಷ್ಟ್ರದ ಜನ್ಮದಿನದಂದು ನಾವು ನಿರ್ವಂಚನೆಯಿಂದ ಪೂರ್ವಾಪರ ವಿಮರ್ಶನೆ ಮಾಡುವುದು ಯುಕ್ತವಾಗುತ್ತದೆ.

## ಪರರಾಷ್ಟ್ರ ನೀತಿ

ಮೊದಲು ಸಮಾಧಾನಕರವಾದ ಸಂಗತಿಯನ್ನು ನೋಡೋಣ: ಇಂಡಿಯವು ತನ್ನ ಸ್ವಾತಂತ್ರ್ಯವನ್ನು ಮಿಕ್ಕ ಪ್ರಪಂಚದಲ್ಲಿ ಸ್ನೇಹ ಸೌಹಾರ್ದ ಬೆಳೆಸುವುದಕ್ಕಾಗಿ ಉಪಯೋಗಿಸಿದೆ. ಪಾಶ್ಚಾತ್ಯ ಪ್ರಪಂಚವು ಈಗ ಇತ್ತಂಡವಾಗಿದೆಯಷ್ಟೆ? ಒಂದು ಕಡೆ ಅಮೆರಿಕದ ನಾಯಕತ್ವ; ಇನ್ನೊಂದು ಕಡೆ ರಷ್ಯದ್ದು. ಇವೆರಡರ ನಡುವೆ ಹೊಗೆಯಾಡುತ್ತಿದೆ. ಇದರಲ್ಲಿ ಇಂಡಿಯವು ಯಾವ ಒಂದು ಪಕ್ಷಕ್ಕೂ ಸಿಕ್ಕುಹಾಕಿಕೊಳ್ಳದೆ, ಕೂಡಿದ ಮಟ್ಟಿಗೂ ಆ ಇಬ್ಭಾಗಗಳ ವೈಷಮ್ಯವನ್ನು ಕಡಿಮೆಮಾಡಲು ಸಂಕಲ್ಪ ತೊಟ್ಟಿದೆ. ಈ ನೀತಿಸಮುನ್ನತಿಯಿಂದ ಇಂಡಿಯಕ್ಕೆ ಎಲ್ಲಕಡೆಯೂ ಮನ್ನಣೆ ದೊರೆತಿದೆ. ಹೀಗೆ ಇಂಡಿಯಕ್ಕೆ ನೀತಿಪ್ರಭಾವವನ್ನು ಸಂಪಾದಿಸಿ ಕೊಟ್ಟಿರುವುದು ಮುಖ್ಯಮಂತ್ರಿ ನೆಹರು ಅವರ ವ್ಯಕ್ತಿಮಹಿಮೆ.

## ಪಂಚವರ್ಷ ಯೋಜನೆ

ಎರಡನೆಯ ಮುಖ್ಯ ಸಂಗತಿ ಪಂಚವರ್ಷ ಯೋಜನೆ. ಇದು ಅವಶ್ಯವಾಗಿ ನಡೆಯಬೇಕಾದದ್ದೆಂಬುದರಲ್ಲಿ ಯಾರಿಗೂ ಸಂದೇಹವಿರದು. ಯೋಜನೆಯಲ್ಲಿ ಗೊತ್ತಾಗಿರುವ ಕಾರ್ಯಗಳು ಮಿತವ್ಯಯದಿಂದಲೂ ವಿಚಕ್ಷಣೆಯಿಂದಲೂ ನಡೆಯುತ್ತಿವೆಯೆ? –ಎಂಬುವು ಬೇರೆ ಪ್ರಶ್ನೆ. ಆಡಳಿತದ ಇಂದಿನ ಬಗೆ ಇರಲಿ, ಸಂಕಲ್ಪವಂತೂ ಸರಿಯಾದದ್ದು. ಒಟ್ಟಿನ ಮೇಲೆ ಕೆಲಸಗಳು ಬೇಗಬೇಗನೆ ಮುಂದೆ ಸಾಗುತ್ತಿವೆಯೆಂದು ಅಧಿಕಾರವರ್ಗದಿಂದ ತಿಳಿದು ಬರುತ್ತಿದೆ. ಪಂಚ ವರ್ಷ ಯೋಜನೆಗಳು ಭಾರೀಭಾರೀ ಪ್ರಯತ್ನಗಳಿಗೆ ಸಂಬಂಧಪಟ್ಟವು.

* (ಜನವಾಣಿ. 26-1-1954)

ಅವು ಬಹು ದ್ರವ್ಯವನ್ನೂ ಬಹು ದೊಡ್ಡ ಸಿಬ್ಬಂದಿಯನ್ನೂ ಅಪೇಕ್ಷಿಸತಕ್ಕವು. ಅವು ಫಲಕ್ಕೆ ಬರಲು ಹಿಡಿಯುವ ಕಾಲವೂ ಬಹಳವಾದದ್ದು. ನಮಗೆ ಸದ್ಯಕ್ಕಿರುವ ಆರ್ಥಿಕ ಪ್ರಶ್ನೆಗಳೆಲ್ಲಾ ಈ ಭಾರೀ ಯೋಜನೆಗಳಿಂದ ಬಗೆಹರಿದಾವೆಂದು ಯಾರೂ ಹೇಳಲಾರರು. ಭಾರೀ ಕಾರ್ಯಗಳ ಜೊತೆಗೆ ಆಗಬೇಕಾದ ಮಧ್ಯಮದರ್ಜೆಯ ಮತ್ತು ಸಾಮಾನ್ಯ ದರ್ಜೆಯ ಕಾರ್ಯಗಳೂ ಅಸಂಖ್ಯೇಯವಾಗಿವೆ. ಆದರೆ ಪಂಚವರ್ಷಯೋಜನೆ ಅಪ್ರಕೃತವೆಂದು ಯಾರೂ ವಾದಿಸಲಾರರು. ಅದು ಸಮರ್ಪಕವಾಗಿ ನಡೆಯಲು ದೇಶವೆಲ್ಲ ಸಹಕರಿಸಬೇಕಾದದ್ದೇ. ಈ ಸಹಕಾರದಲ್ಲಿ ಆ ಯೋಜನೆಯ ಕಾರ್ಯ ಪ್ರಗತಿಯನ್ನು ನಿರ್ದಾಕ್ಷಿಣ್ಯವಾಗಿ ಪರೀಕ್ಷಿಸಬೇಕಾದ ಕರ್ತವ್ಯವೂ ಒಂದು ಮುಖ್ಯಾಂಶವಾಗಿರುತ್ತದೆ.

## ಒಳ ಆಡಳಿತ

ದೇಶದ ಒಳ ಆಡಳಿತದ ಕಡೆಗೆ ನಮ್ಮ ದೃಷ್ಟಿಯನ್ನು ತಿರುಗಿಸಿದರೆ, ಇಲ್ಲಿಯ ಸಂದರ್ಭಗಳು ಅಷ್ಟು ತೃಪ್ತಿಕರವಾಗಿ ಕಾಣುತ್ತಿಲ್ಲ. ಕಳೆದ ಕೆಲವು ತಿಂಗಳಲ್ಲಿ ಭಗವತ್ಕೃಪೆಯಿಂದ ಮಳೆಬೆಳೆಗಳು ಚೆನ್ನಾಗಿ ನಡೆದು ಸುಭಿಕ್ಷದ ಸೂಚನೆ ಕಾಣಬರುತ್ತದೆ.ಯಂತ್ರ ಕಾರ್ಖಾನೆಗಳ ಉತ್ಪತ್ತಿಯೂ ತಕ್ಕ ಮಟ್ಟಿಗೆ ಬೆಳೆಯುತ್ತಿದೆ. ಆದರೆ ಸರ್ಕಾರದ ಆರ್ಥಿಕ ನೀತಿಯಲ್ಲಿ ನಿಷ್ಕರ್ಷೆ ಸಾಲದಿರುವುದರಿಂದ, ಬಂಡವಾಳಕ್ಕೂ ಖಾಸಗೀಯಂತ್ರೋದ್ಯಮಕ್ಕೂ ವ್ಯಾಪಾರಕ್ಕೂ ನಿರುತ್ಸಾಹವಾಗಿದೆ. ಸರಕುಗಳ ಸಾಗಣೆ ಕಡಿಮೆಯಾಗಿದೆ. ಆದದ್ದರಿಂದ ಅವುಗಳ ತಯಾರಿಯೂ ಕಡಿಮೆಯಾಗಿದೆ. ಹೀಗಾಗಿ ನಿರುದ್ಯೋಗದ ಸಮಸ್ಯೆ ಹೆಚ್ಚುತ್ತಿದೆ. ಬಂಡವಾಳಕ್ಕಿರುವ ಸ್ವಾತಂತ್ರ್ಯ ಎಷ್ಟರದು, ಖಾಸಗೀ ಯಂತ್ರೋದ್ಯಮಕ್ಕೆ ಇರುವ ಅವಕಾಶ ಎಷ್ಟುಮಾತ್ರದ್ದು, ವ್ಯಾಪಾರದ ಮೇಲಣ ತೆರಿಗೆ ಸುಂಕಗಳ ಹೊರೆಗೆ ಮಿತಿಯೆಲ್ಲಿ? ಈ ವಿಚಾರಗಳಲ್ಲಿ ಇಂಡಿಯಾ ಸರಕಾರವು ತನ್ನ ನೀತಿಯನ್ನು ತಿದ್ದಿಕೊಳ್ಳಬೇಕಾಗಿದೆ. ಖಾಸಗೀ ಉದ್ಯಮಿಗಳಿಗೆ ತಮ್ಮ ಅವಕಾಶ ಕ್ಷೇತ್ರದ ಎಲ್ಲೆಕಟ್ಟೇನೆಂಬುದು ಸ್ಪಷ್ಟವಾಗಿಯೂ ನಿಷ್ಕರ್ಷೆಯಾಗಿಯೂ ತಿಳಿದು ಬಂದ ಹೊರತು ಅವರು ತಮ್ಮ ಶಕ್ತಿಯನ್ನು ಕಾರ್ಯಗತ ಮಾಡಲೊಪ್ಪರು. ತಮ್ಮ ಹಣವನ್ನೂ ಚತುರತೆಯನ್ನೂ ಅತಂತ್ರಸಾಹಸದಲ್ಲಿ ವ್ಯರ್ಥಮಾಡಲು ಯಾರಿಗೆ ತಾನೆ ಮನಸ್ಸೊಪ್ಪೀತು? ಸರಕಾರವು ಇದನ್ನು ಗ್ರಹಿಸಬೇಕು. ದೇಶದ ಆರ್ಥಿಕ ಕಷ್ಟವನ್ನು ನಿವಾರಣೆಮಾಡುವುದರಲ್ಲಿ ಸರಕಾರ ನಡೆಸಬೇಕಾದ ಕಾರ್ಯಭಾಗ ಬಹು ದೊಡ್ಡದಾಗಿದೆಯೆಂಬುದನ್ನು ಎಲ್ಲರೂ ಒಪ್ಪುತ್ತಾರೆ. ಆದರೆ ಆಗಬೇಕಾದದ್ದೆಲ್ಲವೂ ಕೇವಲ ತನ್ನಿಂದಲೇ ಆದೀತೆಂಬ ಭಾವನೆಯನ್ನು ಸರಕಾರ ಬಿಡಬೇಕು. ಖಾಸಗೀ ಪ್ರಯತ್ನದ ಸಹಾಯವಿಲ್ಲದೆ ಸರಕಾರದ ಪ್ರಯತ್ನ ಬಹುದೂರ ಸಾಗಲಾರದು. ಖಾಸಗೀ ಪ್ರಯತ್ನವನ್ನು ಪ್ರೋತ್ಸಾಹಿಸಲು ಏನೇನು ಅವಶ್ಯವೆಂಬುದನ್ನು ಸರಕಾರ ಚಿಂತಿಸಬೇಕು.

ಮಧ್ಯಮದರ್ಜೆಯ ಕಾರ್ಖಾನೆಗಳು, ಸಣ್ಣ ಸಣ್ಣ ಕುಲಿಮೆ-ಪಟ್ಟಡಿ -ಕೈಗಾರಿಕೆಗಳು, ಸಾಮಾನ್ಯದರ್ಜೆಯ ಮಳಿಗೆಗಳು, ದಳ್ಳಾಳೀ ಅಂಗಡಿಗಳು-ಇಂಥವು ಸಾಮಾನ್ಯ ಜನಕ್ಕಿರುವ ಉದ್ಯೋಗಾಧಾರ. ಇವುಗಳಿಂದ ನಿರುದ್ಯೋಗದ ನಿವಾರಣೆಯಾಗಬೇಕು. ಇದು ಖಾಸಗೀ ಪ್ರಯತ್ನದ ಕ್ಷೇತ್ರ. ಅದರ ಪ್ರೋತ್ಸಾಹ ಹೇಗೆಂಬುದನ್ನು ಸರಕಾರಗಳು ಯೋಚಿಸಬೇಕು.

## ಜಮೀನಿನ ಪುನರ್ವಿಭಾಗ

ಬಡಜನದ ಉದ್ಧಾರಕ್ಕೆಂದೇ ವ್ಯವಸಾಯ ಭೂಮಿಯ ಪುನರ್ವಿಭಾಗದ ಯೋಜನೆಯನ್ನು ಸರ್ಕಾರಗಳು ಕೈಗೊಂಡಿವೆ. ಆ ಉದ್ದೇಶ ಮಾತ್ರವನ್ನು ಒಪ್ಪದವರಿಲ್ಲ. ಆದರೆ ಆ ಕಾರ್ಯವಿಧಾನಗಳಲ್ಲಿ ಬಹುಮಂದಿಗೆ ನಂಬಿಕೆಯಿಲ್ಲ. (1) ಬೇಸಾಯದಲ್ಲಿ ಕೂಲಿಯಾಳಾಗಿರುವವನ ಹೀನಸ್ಥಿತಿ ಅವನಿಗೆ ಜಮೀನಿಲ್ಲದ ಕಾರಣದಿಂದಲೇ ಉಂಟಾದದ್ದಲ್ಲ. ಜಮೀನೊಂದನ್ನು ಒದಗಿಸಿದ ಮಾತ್ರದಿಂದ ಅವನ ಬಡತನ ಪರಿಹಾರವಾಗುವುದಿಲ್ಲ. ಅವನಿಗೆ ತರಪೇತು ಬೇಕು; ಬಂಡವಾಳ ಬೇಕು; ಬೇರೆ ಸಹಾಯ ಬೇಕು. (2) ಅವನಿಗೆ ಬೇಕಾದ ಜಮೀನನ್ನು ಮತ್ತೊಬ್ಬರಿಂದ ಕಿತ್ತುಕೊಂಡು ಕೊಡಬೇಕಾಗಿಲ್ಲ. ವ್ಯವಸಾಯಾರ್ಹವಾದ ಜಮೀನು ಸಾವಿರಾರು ಎಕರೆ ಉಳುವವರಿಲ್ಲದೆ ಪಾಳುಬಿದ್ದು ಸರಕಾರದ ಕೈಯಲ್ಲೇ ಉಳಿದುಕೊಂಡಿದೆ. (3) ಜಮೀನಿರುವ ರೈತನ ಭಾಗ್ಯವೂ ಅಷ್ಟಷ್ಟೇ ಆಗಿದೆ. ಅವನ ಅಭಿವೃದ್ಧಿಗಾಗಿ ಸರಕಾರ ಒದಗಿಸಬೇಕಾದ ಸೌಕರ್ಯಗಳು ಹತ್ತಾರು-ನೀರು, ರಸ್ತೆ, ದನಕ್ಕೆ ಮೇವು, ಗೊಬ್ಬರಕ್ಕೆ ಸೊಪ್ಪು, ಗುಳಕ್ಕೆ ಕಬ್ಬಿಣ, ಎಲ್ಲಕ್ಕಿಂತ ಮೊದಲು ಮೂಲಧನ ಮುಂತಾದವು-ಗಮನಕ್ಕಾಗಿ ಕಾದುಕೊಂಡಿವೆ.(4) ಒಂದು ಹಿಡುವಳಿ ಐದೆಕರೆಗಿಂತ ಅಥವಾ ಹತ್ತೆಕರೆಗಿಂತ ಹೆಚ್ಚಾಗಿರಬಾರದೆಂದು ಜಮೀನನ್ನು ಸಣ್ಣದು ಮಾಡಿದರೆ ಆಗ ರೈತನು ಬೆಳಸುವ ಬೆಳೆ ಅವನ ಹೊಟ್ಟೆಗೆ ಸಾಕಾಗಬಹುದೇ ಹೊರತು ದೇಶದ ಉಗ್ರಾಣ ತುಂಬುವಂತಿಲ್ಲ. ಆಹಾರಾದಿ ಸಮೃದ್ಧಿಯಾಗಬೇಕಾದರೆ ಭಾರೀ ಹಿಡುವಳಿಗಳೂ ದೊಡ್ಡ ದರ್ಜೆಯ ವ್ಯವಸಾಯವೂ ಅವಶ್ಯ. (5) ಸರಕಾರವೇ ಸಂಘ ಸಮುದಾಯಗಳ ಮೂಲಕ ಭಾರೀ ದರ್ಜೆಯ ವ್ಯವಸಾಯವನ್ನು ನಡೆಸೀತೆಂದರೆ, ಅದರಿಂದ ಅಧಿಕಾರಿಗಳ ಸಿಬ್ಬಂದಿ ಹೆಚ್ಚಿ ಇಲಾಖೆಗಳ ಕೈವಾಡ ಹರಡುವುದು ಖಂಡಿತ; ಫಲಮಾತ್ರ ದುರ್ಲಭ. ಹೀಗೆ ವ್ಯವಸಾಯ ಭೂಮಿಯ ಪುನರ್ವ್ಯವಸ್ಥೆಯ ಯೋಜನೆ ದೊಡ್ಡ ತೊಡಕಾಗಿದೆ. ಉದ್ದೇಶ ಒಳ್ಳೆಯದಾದರೂ ವಿಧಾನ ಆತುರದ್ದಾದರೆ ಉತ್ತರೋತ್ತರ ಪರಿಣಾಮವು ವಿನಾಶವೇ ಆದೀತು. ಉತ್ತರ ಇಂಡಿಯದ ಒಂದೆರಡು ಪ್ರದೇಶಗಳಲ್ಲಿ ಜಮೀನ್ದಾರಿ ಪದ್ಧತಿಯಲ್ಲಿ ಅಕ್ರಮಗಳಿದ್ದುವೆಂಬ ಕಾರಣದಿಂದ ದೇಶದ ಆದ್ಯಂತವೂ ಹಿಂದಿನ ಭೂವ್ಯವಸ್ಥೆಯನ್ನು ತಲೆಕೆಳಗುಮಾಡಬೇಕಾಗಿರಲಿಲ್ಲ. ಇಂದಿನ ಸರ್ಕಾರದ ದುಡುಕಿನ ಕಹಿಫಲವನ್ನು ನಾಳೆ ಜನತೆ ಉಣ್ಣಬೇಕಾಗುತ್ತದೆ.

## ನಮ್ಮ ಮಂತ್ರಿಗಳು

ನಮ್ಮ ಸರಕಾರಗಳ ದಿನಚರಿಯ ನಡವಳಿಕೆಗಳನ್ನು ಕೊಂಚ ನೋಡೋಣ:

ದೆಹಲಿಯ ಕಣ್ಣು ಮೋಡದ ಮೇಲಿರುತ್ತದೆ. ಸಂಸ್ಥಾನಗಳ ಕಣ್ಣು ಹಿತ್ತಲಕಡೆಯಿರುತ್ತದೆ. ಕೇಂದ್ರ ಸರಕಾರವು ಭಾರೀ ವಿಷಯಗಳನ್ನಾಲೋಚಿಸುವುದರಲ್ಲಿ ಸೂಕ್ಷ್ಮ ವಿವರಗಳನ್ನು ಮರೆತುಬಿಡುತ್ತದೆ. ಮನೆಗೆ ನಕ್ಷೆ ತಯಾರುಮಾಡುವುದರಲ್ಲಿ ಸೇರು ಮಣ್ಣನ್ನು ಮರೆಯುತ್ತದೆ. ಕೋಟಿಗಾಗಿ ಬಟ್ಟೆ ಫ್ಯಾಷನ್‌ಗಳ ಯೋಚನೆಯಲ್ಲಿ, ದಾರವನ್ನೂ ಗುಂಡಿಯನ್ನೂ ಮರೆತು ಬಿಡುತ್ತದೆ.ಊಟದ ಪರಿಶವಣೆಯನ್ನು ಗೊತ್ತು ಮಾಡುವುದರಲ್ಲಿ ಹಟ್ಟದೇಲೆ ಗಟ್ಟಿಯಾಗಿರಬೇಕೆಂಬುದನ್ನು ಮರೆಯುತ್ತದೆ. ಒಳ ಸಂಸ್ಥಾನಗಳ ಸರಕಾರಗಳಾದರೋ ತಮ್ಮ ತಮ್ಮ ಮನೆಯ ಗೋಡೆ ಛಾವಣಿಗಳ ಬಿರುಕುಗಳನ್ನು ದುರಸ್ತಿಮಾಡಿಕೊಳ್ಳುವುದರಲ್ಲಿಯೇ ಕಾಲ ಕಳೆಯಬೇಕಾಗಿದೆ.ಮೊದಲು ಚುನಾವಣೆಯಾಗುವ ಚಿಂತೆ, ಆಮೇಲೆ ಅಧಿಕಾರ ಪಡೆಯುವ ಚಿಂತೆ, ತರುವಾಯ ಆ ಪದವಿಯನ್ನುಳಿಸಿಕೊಳ್ಳುವ ಚಿಂತೆ, ಬಳಿಕ ಆ ಪದವಿಯಿಂದ ಲಾಭ ರೂಢಿಸಿಕೊಳ್ಳುವ ಚಿಂತೆ, ಅನಂತರ ಯಾವಾಗಲೂ ಪದವಿಗೆಂದು ಹೊಂಚಿ ಕಾಯುತ್ತಿರುವವರನ್ನು ದೂರ ತಳ್ಳುತ್ತಿರುವ ಚಿಂತೆ. ಈ ಚಿಂತೆಗಳ ಪರಂಪರೆ ಸಂಸ್ಥಾನ ಮಂತ್ರಿಯ ಸಾಮಾನ್ಯ ಜೀವನವಾಗಿದೆ. ಈ ಚಿಂತೆಗಳ ನಡುವೆ ತಾನೇನೂ ಕೆಲಸಮಾಡುತ್ತಿಲ್ಲವೆಂಬ ದೂರನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಎಷ್ಟುಮಟ್ಟಿನ ಹಾರಾಟ ಅವಶ್ಯವೋ ಆ ಹಾರಾಟವೇ ಮಂತ್ರಿಯಿಂದಾಗುತ್ತಿರುವ ಜನಸೇವೆ. ಈ ಮಾತು ಬಹುಶಃ ಇಂಡಿಯದ ಎಲ್ಲ ಒಳಸಂಸ್ಥಾನಗಳ ವಿಷಯದಲ್ಲಿಯೂ ಹೇಳಬಹುದಾದದ್ದು.

### ಕಾರುಬಾರಿಗಳು

ಮಂತ್ರಿಗಳಿಗೆ ಅಧೀನರಾದವರು ಕಾರ್ಯಭಾರಿಗಳು.ಇಂಡಿಯದ "ಸಿವಿಲ್ ಸರ್ವಿಸ್" ಎಂಬ ಆಡಳಿತಗಾರ ವರ್ಗವು ಒಂದಾನೊಂದು ಕಾಲದಲ್ಲಿ ದಕ್ಷತೆಗೆ ಹೆಚ್ಚು ಪ್ರಾಧಾನ್ಯ ಕೊಡುತ್ತಿತ್ತು. ಯೂರೋಪಿನ ಯುದ್ಧ ಪ್ರಾರಂಭವಾದಮೇಲೆ, ಆಗ ಇಂಡಿಯದಲ್ಲಿದ್ದ ಬ್ರಿಟಿಷ್ ಸರಕಾರಗಳ ಗಮನವು ಯುದ್ಧ ಸಹಾಯದ ಕಡೆಗೆ ವಿಶೇಷ ತಿರುಗಲಾಗಿ, ಇಲ್ಲಿಯ ಆಡಳಿತದ ವಿಷಯದಲ್ಲಿ ಉಪೇಕ್ಷೆಗಾರಂಭವಾಯಿತು. ಅಲ್ಲಿಂದ ಕ್ರಮೇಣ ನಮ್ಮ ಆಡಳಿತಗಾರರ ಯೋಗ್ಯತೆಯ ಮಟ್ಟ ಇಳಿಯುತ್ತ ಬಂದಿದೆ. ಸಾಮರ್ಥ್ಯ ಕಡಿಮೆಯಾಗಿದೆ ಕೋಳಕು ಹೆಚ್ಚಾಗಿದೆ. ಕಾಂಗ್ರೆಸ್ಸು ಪದವಿಗೆ ಬಂದ ಮೇಲಂತೂ ಸರಕಾರಿ ಕಾರ್ಯಕರ್ತರು ಕಾಂಗ್ರೆಸ್ ಪುಢಾರಿಗಳ ನೆರಳು ಹಿಡಿದು ನಡೆಯಬೇಕಾಗಿದೆ;

ಏಕೆಂದರೆ ಮಂತ್ರಿಗಳು ಪುಢಾರಿಗಳ ಕೈಗೊಂಬೆಗಳೆಂಬುದು ಅವರಿಗೆ ಗೊತ್ತಿದೆ. ಹೀಗಾಗಿ ಆಡಳಿತದಲ್ಲಿ ದಕ್ಷತೆಯೂ ಪ್ರಾಮಾಣಿಕತೆಯೂ ಬಹುಮಟ್ಟಿಗೆ ನ್ಯೂನವಾಗಿವೆ. ನಮ್ಮ ಸ್ವಾತಂತ್ರ್ಯ ಯುಗದ ದುರ್ಲಕ್ಷಣಗಳಲ್ಲಿ ತೀರಾ ಕೆಟ್ಟದ್ದೆಂದರೆ ಈ ಆಡಳಿತದ ಸಡಲಿಕೆ, ಮತ್ತು ಅದರಿಂದ ಜನದಲ್ಲಿ ಹರಡಿರುವ ಅಪನೀತಿ.

## ಸಾಮಾನ್ಯ ಮನುಷ್ಯನೆಲ್ಲಿ?

ನಮ್ಮ ಮುಖಂಡರು ಸ್ವರಾಜ್ಯ ಬಂದೊಡನೆಯೆ–"ಇದು ಸಾಮಾನ್ಯ ಮನುಷ್ಯನ ಮಹರ್ದಶೆಯ ಕಾಲ" –ಎಂದು ಘೋಷಣೆಮಾಡಿದರು. ಈ ಹೊತ್ತು ನಮ್ಮ ಸಾಮಾನ್ಯ ಮನುಷ್ಯನು ಏನು ಹೇಳುತ್ತಾನೆ? ಅವನು ತೆರಬೇಕಾದ ಸುಂಕ ತೆರಿಗೆಗಳು ಬಲು ಭಾರವಾಗಿವೆ. ಜೀವನ ಸಾಮಾಗ್ರಿಗಳ ಬೆಲೆ ಅತಿಯಾಗಿ ಏರಿದೆ. ಮಕ್ಕಳ ವಿದ್ಯಾಭ್ಯಾಸದ ಖರ್ಚು ಹೆಚ್ಚಿದೆ. ಉದ್ಯೋಗಾವಕಾಶಗಳು ಕಡಿಮೆಯಾಗಿವೆ. ಕೋರ್ಟು ಕಛೇರಿಗಳ ಕೈವಾಡ ವಿಪರೀತವಾಗಿದೆ. ಜೀವನದ ಹೊರೆ ಸಹನೆ ಮೀರಿದೆ. ಮನಸ್ಸಿನ ನೆಮ್ಮದಿ ತಪ್ಪಿ ಹೋಗಿದೆ. ಬ್ರಿಟಿಷರೇ ಇದ್ದಿದ್ದರೆ ಮೇಲಾಗಿರುತ್ತಿತ್ತೆ?–ಎಂಬ ಪ್ರಶ್ನೆ ಈಗ ಅಸಂಗತ. ಬ್ರಿಟಿಷರಿಗಿಂತ ನಮ್ಮ ಜನ ಚೆನ್ನಾಗಿ ಆಳಿಯಾರೆಂದಲ್ಲವೆ ನಮ್ಮ ನಂಬಿಕೆ ಇದ್ದದ್ದು? ನಮ್ಮ ಮುಖಂಡರಾಡಿದ ಮಾತಿನ ಅಳತೆಗೋಲಿನಿಂದಲೇ ಅವರ ಕ್ರಿಯೆಯನ್ನಳೆಯುವುದು ನ್ಯಾಯವಲ್ಲವೆ?

## ಹೊಸ ಪದ್ಧತಿಗೆ ಹೊಸ ತಯಾರಿ ಬೇಕು

ಪ್ರಜಾರಾಜ್ಯದ ಪದ್ಧತಿ ಇಂದಿನ ರೂಪದಲ್ಲಿ ನಮ್ಮ ದೇಶಕ್ಕೆ ತೀರಾ ಹೊಸದು. ಈ ಪದ್ಧತಿ ಇನ್ನೂ ಯಾವ ದೇಶದಲ್ಲಿಯೂ ಪೂರ್ತಿ ನಿರ್ದೋಷವಾಗಿ ಕೆಲಸಮಾಡಿಲ್ಲ. ಈ ಮಾತು ಇತರ ರಾಜ್ಯಪದ್ಧತಿಗಳ ವಿಷಯದಲ್ಲಿಯೂ ನಿಜವೆಂಬ ವಾದ ಸದ್ಯಕ್ಕೆ ಒಂದು ಪಕ್ಕಕ್ಕಿರಲಿ. ಎಲ್ಲ ಮನುಷ್ಯ ವ್ಯವಸ್ಥೆಗಳಲ್ಲಿಯೂ ಅಷ್ಟಿಷ್ಟು ದೋಷಗಳು ಇರಲೇ ಇರುತ್ತವೆ. ಪ್ರಜಾರಾಜ್ಯವು ರಾಮರಾಜ್ಯವೆಂದು ಯಾರೂ ಹೇಳರು. ಆದರೂ ಪ್ರಜಾ ರಾಜ್ಯವು ಕೆಲವು ದೇಶಗಳಲ್ಲಿಯಾದರೂ ನಮ್ಮ ದೇಶದಲ್ಲಿರುವುದಕ್ಕಿಂತ ಚೆನ್ನಾಗಿ ನಡೆದುಕೊಂಡು ಬಂದಿದೆ. ಇಂಗ್ಲೆಂಡಿನಲ್ಲಿ ಅದು ಇತರ ದೇಶಗಳಲ್ಲಿರುವುದಕ್ಕಿಂತಲೂ ಭದ್ರವಾಗಿಯೂ ಅನುಕರಣೀಯವಾಗಿಯೂ ಇದೆ. ಇಂಗ್ಲೆಂಡಿನಲ್ಲಿ ಆ ಪದ್ಧತಿ ಅಷ್ಟು ಚೆನ್ನಾಗಿ ನಡೆಯುತ್ತಿರುವುದನ್ನು ನೋಡಿಯೇ ನಾವು ಅದಕ್ಕಾಗಿ ಆಶೆಪಟ್ಟು ಅದನ್ನಿಲ್ಲಿಗೆ ತಂದುಕೊಂಡೆವು. ಆದರೆ ಇಂಗ್ಲೆಂಡಿನಲ್ಲಿರುವಂಥ ಕೆಲವು ಮುಂಜಾಗ್ರತೆಗಳನ್ನೂ ಕೆಲವು ದೋಷ ಶೋಧನೆಗಳನ್ನೂ

ನಾವು ಇಲ್ಲಿ ಏರ್ಪಡಿಸಿಕೊಂಡಿಲ್ಲ, ತಕ್ಕ ತರಪೇತಿಲ್ಲದೆ ತೀವ್ರವಾದ ಆಯುಧಕ್ಕೆ ಕೈಯಿಟ್ಟವನಿಗೆ ಆಗುವಂಥ ಅಪಾಯ ಈಗ ನಮ್ಮ ಪಾಲಿಗೆ ಬಂದಿದೆ. ನಮಗೆ ಆಗಬೇಕಾಗಿರುವ ಆ ಸಿದ್ಧತೆಗಳಲ್ಲಿ ಆ ಸಿದ್ಧತೆಗಳಲ್ಲಿ ಮುಖ್ಯವಾದ ಕೆಲವನ್ನಿಲ್ಲಿ ಸೂಚಿಸಬಹುದು:

## ಪಕ್ಷಘಟನೆ

1. ರಾಜಕೀಯ ಪಕ್ಷಗಳು ಎರಡಾದರೂ ಇರುವುದು ಅವಶ್ಯ. ಆ ಎರಡು ಪಕ್ಷಗಳೂ ಬಲದಲ್ಲಿ ಸಮಾನಸ್ಕಂಧಗಳಾಗಿರಬೇಕು; ಒಂದರಿಂದ ಇನ್ನೊಂದಕ್ಕೆ ಭಯವಿರಬೇಕು. ಅಂಥ ಭಯವಿದ್ದಲ್ಲಿ ಪ್ರತಿಯೊಂದು ಪಕ್ಷವೂ ತನ್ನ ನಡವಳಿಕೆಯ ವಿಚಾರದಲ್ಲಿ ಎಚ್ಚರಗೊಂಡಿರುತ್ತದೆ. ಈಗ ಕಾಂಗ್ರೆಸ್ಸಿಗೆ ಪ್ರತಿಸ್ಪರ್ಧಿಯ ಭಯವಿಲ್ಲ. ಆದದ್ದರಿಂದ ಅದು ಜಾಗರೂಕವಾಗಿ ನಡೆಯಬೇಕಾದ ಕಾರಣವಿಲ್ಲ. ಈ ಏಕೈಕ ಪಕ್ಷ ಪ್ರಾಬಲ್ಯವೇ ನಮ್ಮ ಸ್ವರಾಜ್ಯದ ಈಗಿನ ಎಲ್ಲ ಲೋಪದೋಷಗಳಿಗೂ ಮೂಲ ಕಾರಣವೆಂದು ಹೇಳಬಹುದು. ಈ ಪರಿಸ್ಥಿತಿ ಹೋಗಿ ಕಾಂಗ್ರೆಸ್ಸಿಗೆ ಎದುರಾಳು ಪಕ್ಷವೊಂದು ಸಿದ್ಧವಾಗಬೇಕು.

## ಸಂಖ್ಯೆಗಿಂತ ಗುಣ ಮುಖ್ಯ

2. ನಮ್ಮ ಶಾಸನ ಸಭೆಗಳಲ್ಲಿ ದೇಶದ ವಿದ್ಯೆ, ಲೋಕಾನುಭವ, ಕಾರ್ಯ ಸಾಮರ್ಥ್ಯ ಇವುಗಳಿಗೆ ಹೆಚ್ಚಿನ ಪ್ರಾತಿನಿಧ್ಯ ದೊರೆಯಬೇಕು. ದೇಶದಲ್ಲಿ ಇರುವ ಗುಣ ಯೋಗ್ಯತೆಗಳೆಲ್ಲ ಈಗ ಚುನಾವಣೆಯ ಮೂಲಕ ಶಾಸನ ಸಭೆಗಳೊಳಕ್ಕೆ ಬಂದು ಬಿಟ್ಟಿವೆಯೆಂದೂ; ಆ ಸಭೆಗಳ ಹೊರಗಡೆ ಬುದ್ಧಿ ಸಾಮರ್ಥ್ಯವೂ ದೇಶಾಭಿಮಾನವೂ ಉಳಿದುಕೊಂಡಿಲ್ಲವೆಂದೂ ಯಾರೂ ವಾದಿಸರು. ಮದರಾಸು, ಬೊಂಬಾಯಿ, ಬಂಗಾಳ ಸಂಸ್ಥಾನಗಳಲ್ಲಿ ಚುನಾವಣೆಯಾದ ತರುವಾಯ ಆಯಾ ಸಭೆಯ 200-300 ಮಂದಿ ಪ್ರತಿನಿಧಿಗಳಲ್ಲಿ ಮುಖ್ಯಮಂತ್ರಿ ಪದವಿಗೆ ತಕ್ಕವರು ಒಬ್ಬರಾದರೂ ದೊರೆಯಲಿಲ್ಲ. ಆದದ್ದರಿಂದ ಅಲ್ಲಿ ಮುಖ್ಯಮಂತ್ರಿಗಳನ್ನು ಬೇರೆ ರೀತಿ ದೊರಕಿಸಿಕೊಳ್ಳಬೇಕಾಯಿತು. ಇದರ ಅರ್ಥವೇನು?ದೇಶದಲ್ಲಿ ರಾಜ್ಯಕಾರ್ಯಕ್ಕೆ ಬೇಕಾದ ಯೋಗ್ಯತಾ ಸಂಪತ್ತೇನೋ ಅವಶ್ಯವಾದಷ್ಟಿದೆ; ಆದರೂ ಅದು ಚುನಾವಣೆಗಳ ಮೂಲಕ ದೇಶಕ್ಕೆ ಲಭ್ಯವಾಗುತ್ತಿಲ್ಲ ಎಂದು.ಹೀಗೆ ರಾಜ್ಯ ಕಾರ್ಯಕ್ಕೆ ಮೊದಲನೆಯ ದರ್ಜೆಯ ಬುದ್ಧಿ ಗುಣಗಳು ದೊರೆಯದೆ, ಎರಡನೆಯ ದರ್ಜೆಯ ಅಥವಾ ಮೂರನೆಯ ದರ್ಜೆಯ ಬುದ್ಧಿ ಗುಣಗಳೇ ನುಗ್ಗಿ ಬರುತ್ತಿವೆ. ಮೊದಲನೆಯ ದರ್ಜೆಯವು ಬಾರದಿರುವುದರಿಂದ ನಷ್ಟ ಪಡುತ್ತಿರುವುದು ದೇಶ. ಆದ ಕಾರಣ ಅಂಥ ಮೇಲ್ಮಟ್ಟದ ಯೋಗ್ಯತೆಯನ್ನು ರಾಜ್ಯ ಕಾರ್ಯಕ್ಕೆ ಸಂಪಾದಿಸಿಕೊಳ್ಳಲು ಚುನಾವಣೆಯ ಜೊತೆಗೆ ದಾರಿಯನ್ನು ಕಂಡುಕೊಳ್ಳಬೇಕಾಗಿದೆ.

## ಪಕ್ಷಾತೀತ ಅಧ್ಯಕ್ಷತೆ

3. ರಾಷ್ಟ್ರಾಧ್ಯಕ್ಷರೂ ಸಂಸ್ಥಾನಾಧ್ಯಕ್ಷರುಗಳೂ ರಾಜಕೀಯ ಪಕ್ಷಾತೀತರಾಗಿರುವುದು ಆವಶ್ಯಕ. ಈಗಿನ ವ್ಯವಸ್ಥೆಯಲ್ಲಿ ಅವರು ಬಹು ಕಡೆಗಳಲ್ಲಿ ಏಕಪಕ್ಷಸ್ಥರು - ಕಾಂಗ್ರೆಸ್ಸಿಗರು, ಮಂತ್ರಿವರ್ಗದ ರಾಜಕೀಯ ಪಕ್ಷಕ್ಕೇ ಸೇರಿದವರು. ಹೀಗಾಗಿರುವುದರಿಂದ ಮಂತ್ರಿಗಳ ಕಾರುಬಾರುಗಳನ್ನು ನಿಷ್ಪಕ್ಷಪಾತ ದೃಷ್ಟಿಯಿಂದ ನೋಡುವ ಅಧಿಕಾರವಂತರು ನಮ್ಮ ಇಂದಿನ ರಾಜಕೀಯ ವ್ಯವಸ್ಥೆಯಲ್ಲಿ ಇಲ್ಲವಾಗಿದೆ. ಸರಕಾರದಲ್ಲಿ ಯಾರಾದರೂ ಒಬ್ಬರು ಪಕ್ಷಕಕ್ಷಿಗಳಿಗೆ ಮೇಲಾದವರು ಪ್ರಬಲ ಸ್ಥಾನದಲ್ಲಿದ್ದುಕೊಂಡು ಮಂತ್ರಿಗಳ ಕಾರ್ಯ ವಿಧಾನಗಳನ್ನು ಪರಿಶೀಲಿಸುತ್ತಿರಬೇಕು. ಇಂಗ್ಲೆಂಡಿನ ರಾಜನು ಅಂಥ ಸ್ಥಾನದಲ್ಲಿದ್ದಾನೆ. ಆ ರಾಜನು (ಅಥವಾ ರಾಣಿಯು) ಸ್ವತಃ ರಾಜ್ಯ ಕಾರ್ಯಕ್ಕೆ ಕೈಹಾಕುವುದಿಲ್ಲ. ಮುಖ್ಯ ಮಂತ್ರಿಯ ಮಾತನ್ನು ಅಂಗೀಕರಿಸುತ್ತಾನೆ. ಆದರೆ ಹಾಗೆ ಅಂಗೀಕರಿಸುವುದಕ್ಕೆ ಮುಂಚೆ ತನ್ನ ಆಲೋಚನೆಯನ್ನು ಮಂತ್ರಿಗೆ ತಿಳಿಸಿ, ಪುನರಾಲೋಚನೆ ಮಾಡೆಂದು ಹೇಳಿ ಎಚ್ಚರಿಕೆ ಕೊಟ್ಟು, ತಿದ್ದಿಕೊಳ್ಳಲು ಅವಕಾಶವನ್ನುಂಟು ಮಾಡುವ ಅಧಿಕಾರ ಬ್ರಿಟಿಷ್ ರಾಜನಿಗೆ ಇರುತ್ತದೆ. ಬ್ರಿಟಿಷ್ ರಾಜನು ಯಾವ ಪಕ್ಷಕ್ಕೂ ಸೇರದವನಾದ್ದರಿಂದ ಆ ನಿಷ್ಪಕ್ಷಪಾತಾಧಿಕಾರವನ್ನು ಅವನು ಚಲಾಯಿಸಬಲ್ಲವನಾಗಿದ್ದಾನೆ. ಆದರೆ ಇಂಗ್ಲೆಂಡಿನಲ್ಲಿ ಈಗ ಪಕ್ಷ ಪ್ರತಿಪಕ್ಷಗಳು ತೂಕಡಿಸದೆ ಪರಸ್ಪರ ಪರಿಶೋಧಕಗಳಾಗಿ ಕೆಲಸಮಾಡುತ್ತಿರುವುದರಿಂದ ರಾಜನ ಆ ವಿಶೇಷಾಧಿಕಾರದ ಪ್ರಯೋಗಕ್ಕೆ ಅಲ್ಲಿ ಅವಶ್ಯಕತೆ ತೀರಾ ಕಡಿಮೆ. ಇಂಡಿಯಾದಲ್ಲಿಯಾದರೋ ಅಧಿಕಾರಸ್ಥವಾದ ಕಾಂಗ್ರೆಸ್ಸಿಗೆ ಬಲಿಷ್ಠವಾದ ಪ್ರತಿಪಕ್ಷ ಇಲ್ಲದಿರುವುದರಿಂದ ನಿಷ್ಪಕ್ಷಪಾತವಾದ ಪರಿಶೀಲನೆಯ ಕೆಲಸವನ್ನು ಸಂಸ್ಥಾನಾಧ್ಯಕ್ಷರು ನಡೆಸಬೇಕಾದದ್ದು ತೀರಾ ಅವಶ್ಯವಾಗಿದೆ. ಈ ಬಗ್ಗೆ ನಮ್ಮ ರಾಷ್ಟ್ರ ನಿಬಂಧನೆಯಲ್ಲಿ ತಿದ್ದುಪಾಟು ನಡೆಯಬೇಕಾಗಿದೆ.

## ಪಕ್ಷಾತೀತ ರಾಷ್ಟ್ರಕಜನ

4. ನಿಷ್ಪಾಕ್ಷಿಕ ಮಹಾಜನರು ತಮ್ಮ ಮನಸ್ಸನ್ನು ವ್ಯಕ್ತಪಡಿಸಬೇಕು. ದೇಶದಲ್ಲಿ ಸಂಘಟಿತವಾದ ರಾಜಕೀಯ ಕಕ್ಷಿಗಳು ಎರಡೋ ಮೂರೋ ಇದ್ದ ಮಾತ್ರದಿಂದಲೇ ಎಲ್ಲವೂ ಆಯಿತೆಂದು ಭಾವಿಸಲಾಗದು. ಯಾವ ಒಂದು ರಾಜಕೀಯ ಪಕ್ಷಕ್ಕೂ ಸೇರಿಕೊಳ್ಳದೆ ಎಲ್ಲ ಪಕ್ಷಗಳ ಕಾರ್ಯ ವಿಧಾನಗಳನ್ನೂ ದೇಶೈಕ ದೃಷ್ಟಿಯಿಂದ ನೋಡುವ ಮಹಾಜನ

ಮಂಡಲಿಯೊಂದು ದೇಶದಲ್ಲಿ ಇರಬೇಕಾದ್ದು ಪ್ರಜಾರಾಜ್ಯದ ಮೊದಲನೆಯ ಅವಶ್ಯಕತೆ. ನಮ್ಮ ದೇಶದಲ್ಲಿ ಇಂದಿನ ದೊಡ್ಡ ಕೊರತೆಯೆಂದರೆ ಇಂಥ ನಿಷ್ಪಕ್ಷಪಾತ ಜನ ಈಗ ಮೌನದಲ್ಲಿರುವುದು. ಸಾರ್ವಜನಿಕ ವಿಚಾರವನ್ನು ಕುರಿತು ಒಂದು ಸಭೆ ನಡೆಸಬೇಕಾದರೆ ಈಗ ನಿಷ್ಪಾಕ್ಷಿಕರು ಯಾರೂ ಮುಂದೆ ಬರುತ್ತಿಲ್ಲ, ಕಾಂಗ್ರೆಸ್ಸೋ ಸೋಷಲಿಸ್ಟ್ ಪಾರ್ಟಿಯೋ ಸಭೆ ಸೇರಿಸಿದರೆ ಆಗ ಒಂದಷ್ಟು ಜನ ಸೇರುತ್ತಾರೆ. ಯಾವ ಪಕ್ಷಕ್ಕೂ ಸೇರದವರು ಸಭೆ ಕರೆಯಬೇಕೆಂದರೆ ಅಧೈರ್ಯಪಡುತ್ತಾರೆ. ನಮ್ಮ ಪತ್ರಿಕೆಗಳೂ ಹಾಗೆಯೇ, ಯಾವುದೊ ಒಂದು ಪಕ್ಷವನ್ನವಲಂಬಿಸಿಕೊಂಡು ಪ್ರಚಾರ ನಡೆಸುತ್ತವೆ. ಪಕ್ಷಾತೀತರಾದ ಜನ ತುಟಿಬಿಗಿದು ಕುಳಿತಿರುತ್ತಾರೆ. ಇದು ಇಂದಿನ ಲಕ್ಷಣಗಳಲ್ಲೆಲ್ಲ ತೀರಾ ವಿಷಾದಕರವಾದದ್ದು.

ದೇಶದ ಸ್ಥಿತಿಯಲ್ಲಿ ಯಾವ ದೊಡ್ಡ ಬದಲಾವಣೆಯಾಗಬೇಕಾದರೂ ಅದು ಸರಕಾರದ ಮೂಲಕವೇ ಆಗಬೇಕಷ್ಟೆ? ಸರಕಾರವಾದರೋ ಶಾಸನ ಸಭೆಗೆ ವಿಧೇಯವಾಗಿರತಕ್ಕದ್ದು. ಶಾಸನ ಸಭೆಯಾದರೋ ಅದರ ಬಹುಸಂಖ್ಯಾ ಪಕ್ಷಕ್ಕೆ- ಎಂದರೆ ಸದ್ಯದಲ್ಲಿ ಕಾಂಗ್ರೆಸ್ಸಿಗೆ-ವಶವರ್ತಿಯಾದದ್ದು. ಆ ಪಕ್ಷವಾದರೋ ಅದರ ನಾಯಕರ ಕೈಯಲ್ಲಿರತಕ್ಕದ್ದು. ಆದದ್ದರಿಂದ ಎದುವರೆಗೂ ಕಾಂಗ್ರೆಸ್ ನಾಯಕರಿಗೆ ಇತರ ಜನದ ಹೆದರಿಕೆಯಿಲ್ಲವೋ ಅದುವರೆಗೂ ಯಾವ ದೊಡ್ಡ ಬದಲಾವಣೆಯನ್ನೂ ದೇಶವು ನಿರೀಕ್ಷಿಸುವಂತಿಲ್ಲ.ಕಾಂಗ್ರೆಸ್ ನಾಯಕರನ್ನು ಹೆದರಿಸಿ ತಿದ್ದುವ ಕೆಲಸ ಮಹಾಜನ ವಾಕ್ಯವೊಂದರಿಂದಲೇ ಸಾಧ್ಯ. ಹೀಗೆ ನಮ್ಮ ದೇಶದ ಭವಿಷ್ಯವು ಈಗ ನಿಷ್ಪಾಕ್ಷಿಕರಾದ ಮಹಾಜನರ ಕೈಯಲ್ಲಿ ನಿಂತಿರುತ್ತದೆ. ಅಧಿಕಾರಾಪೇಕ್ಷೆಯಿಲ್ಲದೆ ಕೇವಲ ಜನೈಕ ದೃಷ್ಟಿಯಿಂದಲೇ ದೇಶವಿಚಾರಗಳನ್ನು ವ್ಯಾಸಂಗಮಾಡಿ ತಮ್ಮ ಅಭಿಪ್ರಾಯಗಳನ್ನು ನಿರ್ದಾಕ್ಷಿಣ್ಯವಾಗಿ ಹೊರಪಡಿಸುವ ದೇಶ ಸೇವಕರು ಈಗ ಇಂಡಿಯಕ್ಕೆ ಹೆಚ್ಚಾಗಿ ಬೇಕಾಗಿದೆ. ದೇಶಾಭಿಮಾನಿಗಳು ಈ ಕಡೆಗೆ ತಮ್ಮ ಆಲೋಚನೆಯನ್ನು ತಿರುಗಿಸಬೇಕು. ಸ್ವರಾಜ್ಯವನ್ನು ಹಿರಿಯರು ಸಂಪಾದಿಸಿ ಕೊಟ್ಟರು. ನಾವು ಅದನ್ನು ಕಾಪಾಡಿಕೊಳ್ಳಬಲ್ಲೆವೆ? ಇದು ಈಗ ನಮ್ಮಲ್ಲಿ ಪ್ರತಿಯೊಬ್ಬನೂ ಪ್ರತಿಯೊಬ್ಬಳೂ ತನಗೆ ತಾನೇ ಹಾಕಿಕೊಳ್ಳಬೇಕಾಗಿರುವ ಪ್ರಶ್ನೆ.

# ಮೀಸಲಾತಿ ಕುರಿತು ಡಿವಿಜಿಯವರ ಅಭಿಪ್ರಾಯ

1916-17 ರಲ್ಲಿ ಮೈಸೂರು ಸಂಸ್ಥಾನದಲ್ಲಿ 'ಪ್ರಜಾಮಿತ್ರ ಮಂಡಲಿ' ಎನ್ನುವ ಒಂದು ರಾಜಕೀಯ ಸಂಘಟನೆ ಹುಟ್ಟಿಕೊಂಡಿತು. ಇದು ಮದ್ರಾಸಿನಲ್ಲಿ ಆಗ ಕೆಲವು ತಿಂಗಳುಗಳ ಮೊದಲು ಆರಂಭವಾದ ಬ್ರಾಹ್ಮಣೇತರ ಚಳುವಳಿಯನ್ನು ಪ್ರಚುರಪಡಿಸುವ **ಜಸ್ಟಿಸ್ ಪಾರ್ಟಿ** ಎನ್ನುವ ರಾಜಕೀಯ ಸಂಘಟನೆಯಿಂದ ಪ್ರೇರಣೆಯನ್ನು ಪಡೆದಿದ್ದಿತು. ಪ್ರಜಾಮಿತ್ರ ಮಂಡಲಿಯು ಅಧಿಕಾರದಲ್ಲಿ ಬ್ರಾಹ್ಮಣೇತರರಿಗೆ ಸೂಕ್ತ ಪ್ರಾತಿನಿಧ್ಯ ದೊರಕಬೇಕು, ಮತ್ತು ಇದಕ್ಕಾಗಿ ಬ್ರಾಹ್ಮಣೇತರ ವರ್ಗಗಳಿಗೆ ಅಧಿಕಾರ ಸ್ಥಾನಗಳು ದೊರಕುವಂತೆ ಮೀಸಲಾತಿಯನ್ನು ನೀಡಬೇಕೆಂದು ಚಳುವಳಿಯನ್ನು ಹುಟ್ಟಿಹಾಕಿತು. ಪ್ರಜಾಮಿತ್ರ ಮಂಡಲಿಯನ್ನು ಆರಂಭಿಸಿದವರು ಶ್ರೀಮಾನ್ ಬಸವಯ್ಯನವರು. ಬಸವಯ್ಯನವರು ಮತ್ತು ಡಿವಿಜಿಯವರು ಒಟ್ಟಿಗೇ ಬೆಂಗಳೂರು ಮುನಿಸಿಪಲ್ ಕೌನ್ಸಿಲ್ಲಿನ ಸದಸ್ಯರಾಗಿದ್ದವರು. ಬಸವಯ್ಯನವರ ಜೊತೆಗೆ ಪ್ರಜಾಮಿತ್ರ ಮಂಡಲಿಯ ಉಳಿದ ನಾಯಕರೆಂದರೆ ಶ್ರೀ ಎಂ. ಸುಬ್ಬಯ್ಯನವರು, ನವಾಬ್ ಗುಲಾಮ್ ಅಹಮದ್ ಕಲಾಮಿ, ಮತ್ತು ಜನಾಬ್ ಮಹಮದ್ ಅಬ್ಬಾಸ್‌ಖಾನ್‌ರವರು. ಇವರೆಲ್ಲ ಡಿವಿಜಿಯವರ ಸ್ನೇಹಿತರು.

ಪ್ರಜಾಮಿತ್ರ ಮಂಡಲಿಯ ಮುಖ್ಯ ತತ್ವವಾದ ಮೀಸಲಾತಿಯನ್ನು ಡಿವಿಜಿಯವರು ಒಪ್ಪಿಕೊಂಡಿದ್ದರು. ಆ ತತ್ವದಲ್ಲಿ ಗುಣಾಂಶವುಟೆಂದು ಮನಸಾ ಒಪ್ಪಿಕೊಂಡು ತಮ್ಮ ಸಹಮತವನ್ನು ಹೀಗೆ ದಾಖಲಿಸಿದ್ದಾರೆ:

"ಒಂದು ಜನಾಂಗದ ಯಾವ ಒಂದು ಭಾಗವೂ, ಯಾವ ಒಂದು ಪಂಗಡವೂ, ತಾನು ಇತರರಿಗಿಂತ ಹಿಂದುಳಿದಿದ್ದೇನೆ ಎಂದು ಕೊರತೆಪಟ್ಟುಕೊಳ್ಳುವಂತೆ ಇರಬಾರದು. ಯಾವ ಸಮಾಜದಲ್ಲಿಯಾದರೂ ಅದರ ಒಂದು ಭಾಗವು ತನಗೆ ಇತರರಿಂದ ನ್ಯಾಯ ತಪ್ಪಿತು ಎಂದುಕೊಳ್ಳುವಂತಾದರೆ ಆ ಕೊರತೆಯಿಂದ ಒಟ್ಟು ಸಮಾಜಕ್ಕೇ, ಅಂದೋ ಮುಂದೆಂದೋ, ಅಪಾಯವು ಸಿದ್ಧವಾಗಿರುತ್ತದೆ. ಒಂದು ಸರಪಣಿಯಲ್ಲಿ ಒಂಟೇ ಒಂದು ಕೊಂಡಿ ಮಾತ್ರವೇ ಸವೆದು ಹೋಗಿದ್ದರೂ ಆ ಒಂದು ಸಣ್ಣ ದೌರ್ಬಲ್ಯದಿಂದ ಆ ಸರಪಣಿಯೆಲ್ಲವೂ ಅಪಾಯಕ್ಕೊಳಗಾಗುತ್ತದೆ. ಒಂದು ಜನಾಂಗದ ನಾನಾ ಭಾಗಗಳ ಬಲಾಬಲಗಳೂ, ತೃಪ್ತಿ ಅತೃಪ್ತಿಗಳೂ ಅದರಂತೆಯೇ, ಯಾವ ಪಂಗಡದಲ್ಲಿಯೇ ಆಗಲಿ ಅಸಂತೃಪ್ತಿ ತಲೆದೋರಿದ್ದರೆ-ಅದರ ಕಾರಣವೇನೇ ಇರಲಿ-ಅದು ಸರಿಯಾದದ್ದಾಗಲೀ, ತಪ್ಪು ತಿಳುವಳಿಕೆಯುದಾಗಲಿ-ಅದನ್ನು ಆಮೂಲಾಗ್ರವಾಗಿ ವಿಚಾರಮಾಡಿ, ಅಲ್ಲಿ ಸಮಾಧಾನವನ್ನು ನೆಲೆಗೊಳಿಸಲು ತಕ್ಕ ವ್ಯವಸ್ಥೆ ನಡೆಸುವುದು ಸಮಾಜ ಹಿತೈಷಿಗಳ ಕರ್ತವ್ಯವಾಗುತ್ತದೆ. ಇದು ಸಾಧುವಾದ ತತ್ವವೆಂದು ನನ್ನ ಅಭಿಪ್ರಾಯ.

ಆದರೆ ರಾಜಕೀಯದ ಕಾರ್ಯಸೂತ್ರದಲ್ಲಿರಬೇಕಾದದ್ದು ಒಂದೇ ಒಂದು ನೂಲಲ್ಲ. ಅದು ಯಾವಾಗಲೂ ಅನೇಕ ತತ್ವಗಳ ಹೆಣಿಗೆಯಿಂದಾದ ಒಂದು ಜಡೆ. ಹಿಂದುಳಿದವರನ್ನು ಮುಂದಕ್ಕೆ ತರಬೇಕೆಂಬ ತತ್ವದ ಜೊತೆಗೆ ಸೇರಬೇಕಾದ ತತ್ವಗಳು ಇನ್ನೂ ನಾಲ್ಕಾರು ಇರುತ್ತವೆ. ಹಿಂದುಳಿದವರನ್ನು ಮುಂದಕ್ಕೆ ತರುವ ಪ್ರಯತ್ನದಲ್ಲಿ ಮುಂದೆ ಹೋಗಿರುವವರನ್ನು ಹಿಂದಕ್ಕೆ ಸೆಳೆಯಬಾರದೆಂಬುದು ಅಷ್ಟೇ ಮುಖ್ಯವಾದ ಇನ್ನೊಂದು ತತ್ವ. ಹಿಂದುಳಿದವರೂ, ಮುಂದೆ ಹೋದವರೂ, ನಡುವೆ ನಿಂತವರೂ ಎಲ್ಲರೂ ಸೇರಿರುವ ಮಹಾಸಮಾಜಕ್ಕೆ ಆಗಬೇಕಾಗಿರುವ ಸೇವೆ ಎಷ್ಟು ಗುಣಾಧಿಕ್ಯ ಉಳ್ಳದ್ದಾಗಿರುವುದು ಸಾಧ್ಯವೋ ಅದಕ್ಕಿಂತ ಗುಣದಲ್ಲಿ ಕಡಿಮೆಯಾಗದೇ, ದೇಶ ಸಮಷ್ಟಿಗೆ ಸೇವೆ ದೊರೆಯುವಂತೆ ಮಾಡಬೇಕೆಂಬುದು ಎಲ್ಲಕ್ಕಿಂತ ಮೇಲಾದ ತತ್ವ. ಈ ಮೂರೂ ತತ್ವಗಳನ್ನು ಸಮನ್ವಯ ಮಾಡಿದರೆ ಉಂಟಾಗುವುದು ನ್ಯಾಯವಾದ ಕಾರ್ಯ ಸೂತ್ರ.

ಈ ಇತರ ತತ್ವಗಳಿಗೆ ಪ್ರಜಾಮಿತ್ರ ಮಂಡಲಿ ಗಮನ ತಿರುಗಿಸಲಿಲ್ಲ. ಆದಕ್ಕೆ ಸಮಗ್ರ ಸಮಾಜದ ದೃಷ್ಟಿ ಇರಲಿಲ್ಲ. ಇದನ್ನು ನನ್ನ ಸ್ನೇಹಿತರು ಮರೆತರೆಂಬುದೇ ನನಗೂ ಅವರಿಗೂ ಇದ್ದ ತಕರಾರು.'' (ಡಿವಿಜಿ ಕೃತಿಶ್ರೇಣಿ-6; ಪುಟ-142).

ಪ್ರಜಾಮಿತ್ರ ಮಂಡಲಿಯ ಅಸಮಗ್ರ ತಾತ್ವಿಕತೆಯನ್ನು ವಿರೋಧಿಸಿ, ಅದರಿಂದ ಜನಸಾಮಾನ್ಯರ ಮನಸ್ಸಿನ ಮೇಲೆ ಆದ ಪ್ರತಿಪ್ರಭಾವವನ್ನು ರೂಪಿಸಲು ಬೇರೊಂದು ಸಂಸ್ಥೆ ಅವಶ್ಯವೆಂದು ಕೆಲಮಂದಿಗೆ ಅನ್ನಿಸಿ 1918-19ರಲ್ಲಿ ಬೆಂಗಳೂರಿನಲ್ಲಿ **ಮೈಸೂರು ಮಹಾಜನಸಭೆ** ಎನ್ನುವ ಸಂಘಟನೆ ಆರಂಭವಾಯಿತು. ಅಡ್ವೋಕೇಟ್ ಸಿ. ಕೃಷ್ಣಮೂರ್ತಿ, ಎಂ.ಎಸ್. ಪುಟ್ಟಣ್ಣ ಮುಂತಾದ ಮುಖಂಡರು ನಡೆಸಿದ ಈ ಸಂಘಟನೆಯೊಂದಿಗೆ ಡಿವಿಜಿಯವರೂ ಗುರುತಿಸಿಕೊಂಡರು. ಮೈಸೂರು ಮಹಾಜನಸಭೆಯ ಮೂಲಕವಾಗಿ ನಡೆದ ಬಹು ದೊಡ್ಡ ಕಾರ್ಯವೆಂದರೆ, 1919ರ ಡಿಸೆಂಬರ್‌ನಲ್ಲಿ ಬೆಂಗಳೂರಿನಲ್ಲಿ ನಡೆದ 'ಮೈಸೂರು ಪೀಪಲ್ಸ್ ಕನ್‌ವೆನ್‌ಷನ್'- ಮೈಸೂರು ಪ್ರಜಾ ಜನ ಪರಿಷತ್ತು ಎಂಬ ರಾಜಕೀಯ ಮಹಾಸಭೆ. ಮೈಸೂರು ಸಂಸ್ಥಾನದ ಎಲ್ಲ ಭಾಗಗಳಿಂದಲೂ ಪ್ರತಿನಿಧಿ ಪ್ರಮುಖರು-ಸುಮಾರು 300 ಜನ ಬಂದು ಸೇರಿದ್ದರು. ಮೂರು ದಿನಗಳ ಕಾಲ ನಡೆದ ಈ ಕನ್‌ವೆನ್‌ಷನ್‌ನ ಅಧ್ಯಕ್ಷರಾಗಿದ್ದವರು ರಿಟೈರ್ಡ್ ಡೆಪ್ಯುಟಿ ಕಮಿಷನರ್ ಶ್ರೀ ಎಂ. ಚೆಂಗಯ್ಯಶೆಟ್ಟಿಯವರು. ಈ ಕನ್‌ವೆನ್‌ಷನ್ ಸ್ವೀಕರಿಸಿದ ಪ್ರಮುಖ ಗೊತ್ತುವಳಿಗಳು ಇಂತಿವೆ:

(i) ಸರಕಾರದ ಮಂತ್ರಿಮಂಡಲಕ್ಕೆ ಪ್ರಜಾ ಪ್ರತಿನಿಧಿಗಳನ್ನು ಸೇರಿಸಿಕೊಳ್ಳಬೇಕು.

(ii) ಪ್ರಜಾಜನದ ರಾಜಕೀಯ ಸ್ವಾತಂತ್ರ್ಯ, ಪೌರ ಸ್ವಾತಂತ್ರ್ಯಗಳನ್ನು ವಿಸ್ತಾರಪಡಿಸಬೇಕು.

(iii) ಇಂಡಿಯದ ಸರ್ಕಾರದಲ್ಲಿ ಮೈಸೂರಿಗೆ ನ್ಯಾಯವಾಗಿ ಸಲ್ಲಬೇಕಾದ ಅಧಿಕಾರ ಪ್ರಭಾವಗಳನ್ನು ದೊರಕಿಸುವಂತೆ ಭಾರತ ರಾಜ್ಯ ವ್ಯವಸ್ಥೆಯನ್ನು ಪರಿಷ್ಕಾರಗೊಳಿಸಬೇಕು, ಇತ್ಯಾದಿ.

ಇದಲ್ಲದೆ ಆ ಮಹಾಸಭೆ ತನ್ನ ಉದ್ದೇಶವನ್ನೂ, ತಾನು ಅಂದು ಪ್ರಾರಂಭಿಸಿದ ಕಾರ್ಯಕ್ರಮವನ್ನೂ ಕೈಗೊಳ್ಳಲಿಕ್ಕಾಗಿ ಒಂದು ಸಮಿತಿಯನ್ನು ನಿಯಮಿಸಿತು. ಮೈಸೂರು ದೇಶದಲ್ಲಿ ಪ್ರಜಾಸಮಷ್ಟಿಯ ರಾಜಕೀಯ ಮನೋಗತಕ್ಕೆ ಒಂದು ಸಂಘಟಿತ ರೂಪವನ್ನು ಕೊಡಲು ನಡೆದ ಸಮಾರಂಭಗಳಲ್ಲಿ ಈ ಪೀಪಲ್ಸ್ ಕನ್‌ವೆನ್ಷನ್ ಮೊಟ್ಟ ಮೊದಲನೆಯದಾಗಿದೆ. ಈ ಮಹಾಸಭೆಯಲ್ಲಿ ಮೂಡಿದ ತಾತ್ವಿಕತೆ ಮುಂದೆ ಪ್ರಜಾಪ್ರತಿನಿಧಿಗಳನ್ನೊಳಗೊಂಡ ಜವಾಬ್ದಾರಿ ಸರ್ಕಾರದ ಸ್ಥಾಪನೆಯ ಬೇಡಿಕೆಯ ರೂಪ ತಾಳಿತು. ಡಿವಿಜಿಯವರು **'ಜವಾಬ್ದಾರಿ ಸರ್ಕಾರ'**ದ ತಾತ್ವಿಕತೆಯ ಹಿಂದಿನ ಮುಖ್ಯ ಮೆದುಳಾಗಿದ್ದರು.

●

ಸರ್ವಾರ್ಥ ಸಹಭಾಗಿತೆಗೆ ರಾಷ್ಟ್ರ ಕುಲವರ್ಗ।
ಸರ್ವದಣು ತಾನೆನುತ್ತೋರೊರ್ವ ಮನುಜನ್॥
ಸರ್ವಜೀವ ಸಮೃದ್ಧಿಗನುಗೂಡಿ ದುಡಿಯುತಿರೆ।
ಪರ್ವವಂದಿಳೆಗೆಲ್ಲವೂ - ಮಂಕುತಿಮ್ಮ।
ಸುಲಭವೇನಲ್ಲ ನರಲೋಕಹಿತ ನಿರ್ಧಾರ।
ಬಲಕೆ ನೋಳ್ವರ್ ಕೆಲರು, ಕೆಲರೆಡಕೆ ನೋಳ್ವರ್॥
ವಿಲವಿಲನೆ ಚಪಲಿಸುವ ಮನುಜಸ್ವಭಾವದಲಿ।
ನಲೆ ಗೊತ್ತು ಹಿತಕೆಲ್ಲಿ? - ಮಂಕುತಿಮ್ಮ॥

ಸಾಸಿರದ ಯುಕ್ತಿ ಸಾಹಸವ ನೀನೆಸಗುತಿರು।
ಲೇಸು ಫಲ ದೊರೆಗೆ ನಿನ್ನೆಲ್ಲ ಪೌರುಷಕಂ॥
ಶೇಷ ನಿನಗುಳಿವುದೆಂತಾದೊಡಂ ನೋವಿನಿತು।
ಸೈಸದನು ನೀನಳದೆ – ಮಂಕುತಿಮ್ಮ॥

– ಡಿ.ವಿ.ಜಿ.

# ನ್ಯಾಯವಿಧಾಯಕ ಸಭೆಯಲ್ಲಿ - ಡಿವಿಜಿ

ಎ.ಆರ್. ಬ್ಯಾನರ್ಜಿಯವರ ದಿವಾನಗಿರಿ ಕೊನೆಗೊಂಡದ್ದು 30-4-1926ರಂದು. ಮಾರನೆಯ ದಿನದಿಂದ ಮಿರ್ಜಾ ಎಂ. ಇಸ್ಮಾಯಿಲ್ ಅವರ ದಿವಾನಗಿರಿ ಪ್ರಾರಂಭ. ಮೈಸೂರು ಸಂಸ್ಥಾನದ ಚರಿತ್ರೆಯಲ್ಲಿ ಅದೊಂದು ಮುಖ್ಯವಾದ ಕಾಲ. ಬ್ರಿಟಿಷ್ ಇಂಡಿಯದಲ್ಲಿ ಕಾಂಗ್ರೆಸ್ ಬೆಳೆಯುತ್ತಿದ್ದ ಕಾಲ. ಭಾರತ ದೇಶದ ಇತರೆಡೆಗಳಲ್ಲಿ ಪ್ರಬಲವಾಗಿದ್ದ ಕಾಂಗ್ರೆಸ್ ಸಂಸ್ಥೆ ಮೈಸೂರು ಸಂಸ್ಥಾನದಲ್ಲಿ ಆಗ ಇನ್ನೂ ಕಾಲಿಟ್ಟಿರಲಿಲ್ಲ. ಆಗ ಇದ್ದದ್ದು ಬ್ರಾಹ್ಮಣೇತರ ಪಕ್ಷವೊಂದೇ.

ಅಷ್ಟು ದಿನಗಳವರೆಗೂ ರಾಜ್ಯಾಂಗದ ಹೊರಗಿದ್ದು ದೇಶದ ವಿದ್ಯಮಾನಗಳನ್ನು ಕುರಿತು ವರದಿ ಮಾಡಿ, ಅವುಗಳನ್ನು ಕುರಿತು ಟೀಕಿಸಿ, ಸಾರ್ವಜನಿಕ ಚಟುವಟಿಕೆಗಳನ್ನು ಪ್ರಚೋದಿಸಿ, ಜವಾಬ್ದಾರಿ ಸರಕಾರ ಪದ್ಧತಿಯೇ ದೇಶದ ಏಳಿಗೆಗೆ ಬೇಕಾದದ್ದೆಂದು ಹೇಳುತ್ತಿದ್ದ ಡಿ ವಿ ಜಿ ಯವರು ರಾಜಕೀಯದ ಸುಳಿಯೊಳಗೆ ಎಳೆಯಲ್ಪಟ್ಟದ್ದು ಈ ಕಾಲದಲ್ಲಿಯೇ.

ಹಿಂದೆ ತರುಣ ಡಿ ವಿ ಜಿ ಯವರನ್ನು ವಿಶ್ವೇಶ್ವರಯ್ಯನವರು ಮುನಿಸಿಪಾಲಿಟಿಯ ಸದಸ್ಯರನ್ನಾಗಿ ನೇಮಿಸಿದಂತೆ, ಇವರ ರಾಜ್ಯಶಾಸ್ತ್ರ ಪಾಂಡಿತ್ಯವನ್ನು ಕಂಡ, ಇವರ ಸಾರ್ವಜನಿಕ ಸೇವೆಯನ್ನು ಕಂಡ, ಇವರ ನಿಷ್ಪಕ್ಷಪಾತವಾದ ದೃಷ್ಟಿಕೋನವನ್ನು ಕಂಡ, ಮಿರ್ಜಾಸಾಹೇಬರ ಸರಕಾರ, ಇವರನ್ನು 27-5-1927ರಲ್ಲಿ ನ್ಯಾಯ ವಿಧಾಯಕ ಸಭೆಗೆ ಸದಸ್ಯರನ್ನಾಗಿ ನೇಮಿಸಿತು. ಇದನ್ನು ಆ ಕಾಲದ ಅನೇಕ ಪ್ರತಿಕೆಗಳು ಸ್ವಾಗತಿಸಿದವು; ಸಾರ್ವಜನಿಕ ಮುಖಂಡರು ಸಂತೋಷವನ್ನು ವ್ಯಕ್ತಪಡಿಸಿದರು.

ಜೂನ್ 7ನೆಯ ತಾರೀಖಿನ 'ದಿ ಮೈಸೂರ್ ಪೇಟ್ರಿಯಟ್' ಪತ್ರಿಕೆ, ಶಿವಮೊಗ್ಗದ ಬಾತ್ಮಿದಾರರು ಕಳುಹಿಸಿದ ಈ ವರದಿಯನ್ನು ಪ್ರಕಟಿಸಿದೆ.

"A scholar in Kannada, keen student of politics, economy, pioneer in the field of "The Indian India" ,accomplished writer and speaker, journalist, publisher of no mean calibre, Mr. D.V.Gundappa long ago earned his title to a place in the Councils of the State. His present nomination to the Legislative Council adds lustre to the journalistic world in Mysore and redounds to the credit of the new regime in that it has broken new ground and shown both courage and fresh outlook. Such

* ಕೃಪೆ ಬಿ.ಆರ್.ವೆಂಕಟರಮಣನ್ ವಿರಕ್ತ ರಾಷ್ಟ್ರಕ ಡಿವಿಜಿ ಪುಟ 136-153.

nominations are on a par with the nominations in British India of tried and able publicists like Mr. V. S. Srinivasa Ṣastriar".

ಜೂನ್ 9ನೆಯ ತಾರೀಖು ಹಲವರು ಸ್ನೇಹಿತರು ಬೆಂಗಳೂರಿನ ಮಾಡರ್ನ್ ಹಿಂದೂ ಹೋಟಲಿನಲ್ಲಿ ಒಂದು ಸಂತೋಷಕೂಟವನ್ನು ಏರ್ಪಡಿಸಿ ಡಿ ವಿ ಜಿ ಯವರನ್ನು ಅಭಿನಂದಿಸಿದರು. ಅದರಲ್ಲಿ ಕೆ. ಶ್ರೀನಿವಾಸ ಅಯ್ಯಂಗಾರ್ಯರು, ಎಂ. ರಾಮಚಂದ್ರರಾಯರು, ಕೆ. ಶಂಕರನಾರಾಯಣರಾಯರು, ರಾವ್‌ಸಾಹೇಬ್ ತಂಗವೇಲು ಮೊದಲಿಯಾರ್, ಡಾ|| ಅಬ್ಬಾಯಿ ನಾಯುಡು, ಎಸ್.ಜಿ. ಶಾಸ್ತ್ರಿ, ಡಾ|| ಕುನ್ನಿ ಕಣ್ಣನ್, ಬಿ.ವಿ. ರಾಮ ಅಯ್ಯಂಗಾರ್, ಬಿ.ಕೆ. ಗರುಡಾಚಾರ್, ಬೇಲೂರು ಶ್ರೀನಿವಾಸ ಅಯ್ಯಂಗಾರ್, ಪಾಮಡಿ ಸುಬ್ಬರಾಮಶೆಟ್ಟಿ, ನಾಗೇಶ್ವರ ಅಯ್ಯರ್, ಕೆ.ಟಿ. ಭಾಷ್ಯಂ, ಮೋಕ್ಷಗುಂಡಂ ಕೃಷ್ಣಮೂರ್ತಿ ಮುಂತಾದವರು ಪಾಲುಗೊಂಡಿದ್ದರು.

ಡಿ ವಿ ಜಿ ಯವರು ನ್ಯಾಯವಿಧಾಯಕ ಸಭೆಗೆ ನೇಮಕವಾದದ್ದನ್ನು ಕುರಿತು The Wealth of Mysore ಎಂಬ ಪತ್ರಿಕೆ 11-6-1927 ರಲ್ಲಿ ಹೀಗೆ ಬರೆಯಿತು:

It is superfluous for us to narrate on this occasion the public services rendered by Mr. Gundappa to the state and its public, both in the press and on public platform. By his disinterested labours he has secured a unique position for himself in the body-politic of Mysore. He has always remained a bold and fearless critic of men and things. People might not agree with some of his views but all the same their admiration for his intellect and independence are spontaneous. Under a better atmosphere and more auspicious circumstances Mr. Gundappa would have been a greater man today."

ಹೀಗೆ ಪ್ರಾರಂಭವಾದ ಶಾಸನ ಸಭೆಯ ಜೀವನ 14 ವರ್ಷಗಳ ಕಾಲನಡೆಯಿತು.

ಇಷ್ಟರಲ್ಲಿ 2ನೆಯ ಜೂನ್, ಡಿ ವಿ ಜಿ ಯವರಿಗೆ ಅರಮನೆಯಿಂದ ಆಹ್ವಾನ ಬಂದಿತ್ತು."Invitation from the palace. What to do?" ಎಂಬ ಪ್ರಶ್ನೆ ಎದುರಾಯಿತು. 20-6-27 ರಲ್ಲಿ ಮಗಳು ತುಂಗ ತಂದೆಯವರಿಗೆ ಬರೆದ ಪತ್ರದಲ್ಲಿ "ನೀವು ಅರಮನೆಗೆ ಹೋಗಿದ್ದಿರೆಂದು ಕೇಳಿ ಬಹಳ ಸಂತೋಷವಾಯಿತು. ದರ್ಬಾರ್ ಡ್ರೆಸ್ಸಿನಲ್ಲಿ ನೀವು ಇರುವಾಗ ನಿಮ್ಮನ್ನು ನೋಡಬೇಕು ಎನ್ನಿಸಿತು " ಎಂದು ಬರೆದಿದ್ದಾರೆ.

ಡಿ ವಿ ಜಿ ಯವರು ತಾವು ಮಹಾರಾಜರನ್ನು ಕಂಡ ವಿಷಯವನ್ನು ಕುರಿತು ಯಾವಾಗಲೂ ಮಾತನಾಡಲಿಲ್ಲ; ಅದನ್ನು ಕುರಿತು ಬರೆಯಲೂ ಇಲ್ಲ.

ಅವರು ಪುನಃ 1933 ರಲ್ಲಿ 1937 ರಲ್ಲಿ ಮೈಸೂರು ವಿಶ್ವವಿದ್ಯಾನಿಲಯ ಚುನಾವಣಾ ಕ್ಷೇತ್ರದಿಂದ ಚುನಾಯಿಸಿ ಬಂದರು. 1937ರಲ್ಲಿ ಅವರು ಚುನಾವಣೆಗೆ ನಿಲ್ಲಬೇಕೆಂದು ಯೋಚಿಸುತ್ತಿದ್ದಾಗ, ಮೈಸೂರಿನ ಎ. ವೆಂಕಟೇಶಯ್ಯನವರೂ ಕಾಂಗ್ರೆಸ್ ಪಕ್ಷದ ಪರವಾಗಿ ಚುನಾವಣೆಗೆ ನಿಲ್ಲುತ್ತಾರೆಂಬ ಸುದ್ದಿ ಪತ್ರಿಕೆಗಳಲ್ಲಿ ಬಂತು. ಕಾಂಗ್ರೆಸ್ ಪಕ್ಷ ತನ್ನ ಕಾರ್ಯಕ್ಷೇತ್ರವನ್ನು ವಿಶ್ವ ವಿದ್ಯಾನಿಲಯಕ್ಕೂ ವಿಸ್ತರಿಸುವುದಿಲ್ಲವೆಂಬ ಊಹೆಯಿಂದ ತಾವು ಚುನಾವಣೆಗೆ ನಿಲ್ಲಲು ನಿರ್ಧರಿಸಿರುವುದಾಗಿಯೂ, ಕಾಂಗ್ರೆಸ್ ಸಂಸ್ಥೆಯು ಆ ಕಾಲದಲ್ಲಿ ಇಟ್ಟುಕೊಂಡಿದ್ದ ಗುರಿ ಮತ್ತು ಕಾರ್ಯಮಾರ್ಗಗಳಲ್ಲಿ ತಮಗೆ ಸಹಾನುಭೂತಿ ಮತ್ತು ಏಕಮನಸ್ಕತೆ ಇರುವುದರಿಂದ, ಸ್ಪರ್ಧೆಗೆ ಅವಕಾಶವಿಲ್ಲದಂತೆ ಮಾಡಬೇಕೆಂದೂ ಸ್ನೇಹಿತರಾಗಿದ್ದ, ಕಾಂಗ್ರೆಸ್ ಸಂಸ್ಥೆಯ ಅಧ್ಯಕ್ಷರಾಗಿದ್ದ ಸಂಪಿಗೆ ವೆಂಕಟಪತಯ್ಯನವರೊಡನೆ ಚರ್ಚಿಸಿ, ಕಾಂಗ್ರೆಸ್ ಸಂಸ್ಥೆ ಸ್ಪರ್ಧೆಗೆ ಬರುವುದಿಲ್ಲವೆಂದು ತೀರ್ಮಾನ ಕೈಗೊಳ್ಳಲಾಗಿ ಡಿ ವಿ ಜಿ ಯವರು ಚುನಾಯಿತರಾದರು.

ನ್ಯಾಯ ವಿಧಾಯಕ ಸಭೆಗೆ ಸದಸ್ಯರಾಗುವುದಕ್ಕೆ ಮೊದಲೆ ಅವರು ಅಲ್ಲಿನ ಸದಸ್ಯರು ಎಷ್ಟು ಸಾಧ್ಯವೋ ಅಷ್ಟರಮಟ್ಟಿಗೆ ಏಕಮನಸ್ಸಿನಿಂದ ಕೆಲಸ ಮಾಡಿದರೆ ಪರಿಣಾಮಕಾರಿಯಾಗಬಹುದು ಎಂಬ ಉದ್ದೇಶದಿಂದ ಅಂಥ ಸದಸ್ಯರ ಸಂಘಟನೆಯೊಂದಕ್ಕೆ ಪ್ರಯತ್ನಪಟ್ಟರು.

ಮೈಸೂರು ನ್ಯಾಯವಿಧಾಯಕ ಸಭೆಯ ರಾಷ್ಟ್ರೀಯ ಪಕ್ಷ (National Party of the Mysore Legislative Council) ಎಂಬ ಪಕ್ಷವೊಂದು 11-12-1924 ರಲ್ಲಿ ಸ್ಥಾಪಿತವಾಯಿತು. "ಮೈಸೂರು ಮೈಸೂರಿನವರಿಗೇ" ಎಂಬ ಉದ್ದೇಶವನ್ನು ಹೊಂದಿದ್ದ ಈ ಪಕ್ಷ ಜನಾಭಿಪ್ರಾಯವನ್ನು ಸಂಘಟಿಸಲು ಎಲ್ಲ ಪ್ರಶ್ನೆಗಳನ್ನು ನಿಷ್ಪಕ್ಷಪಾತ ದೃಷ್ಟಿಯಿಂದ, ಕೋಮುವಾರು ದೃಷ್ಟಿಗೆ ಎಡೆಗೊಡದೆ,ಪ್ರತಿಪಾದಿಸಲು, ಸ್ಥಾಪಿತವಾಯಿತು. ಮೈಸೂರಿನ ವೆಂಕಟಕೃಷ್ಣಯ್ಯನವರು, ಶ್ರೀರಂಗಪಟ್ಟಣದ ಬಿ.ನರಸಿಂಗರಾಯರು, ಹೊಸಕೊಪ್ಪ ಕೃಷ್ಣರಾಯರು, ತುಮಕೂರಿನ ಹೆಚ್. ವೆಂಕಟರಾಮಯ್ಯನವರು, ಕೋಲಾರದ ವೆಂಕಟೇಶಯ್ಯನವರು ಮುಂತಾದವರು ಇದರ ಪ್ರಾರಂಭ ಸದಸ್ಯರು. ನ್ಯಾಯವಿಧಾಯಕ ಸಭೆಯ ಸದಸ್ಯರಿಗೆ, ಮೀಸಲಾಗಿದ್ದ ಈ ಸಂಘವು ಡಿ ವಿ ಜಿ ಯವರನ್ನು ಗೌರವ ಸದಸ್ಯರನ್ನಾಗಿರಲು ಆಹ್ವಾನಿಸಿ, ಅವರನ್ನು ಗೌರವ ಕಾರ್ಯದರ್ಶಿಯನ್ನಾಗಿಯೂ ನೇಮಿಸಿತು. ಬಿ. ಕೆ. ಗರುಡಾಚಾರ್ಯರೂ, ಬಿ. ಅಬ್ದುಲ್ ರೆಹಮಾನ್ ಸಾಹೇಬರೂ ಆ ಮೇಲೆ ಈ ಸಂಘಕ್ಕೆ ಸೇರಿದರು.

ನ್ಯಾಯವಿಧಾಯಕ ಸಭೆಯ ಸದಸ್ಯರಾದ ನಂತರ ಅವರು ವಾಕ್ ಸ್ವಾತಂತ್ರ್ಯಕ್ಕಾಗಿ ಹೊಡೆದಾಡಬೇಕಾದ ಒಂದೆರಡು ಪ್ರಸಂಗಗಳನ್ನು ಇಲ್ಲಿ ಹೇಳಬಹುದು:

ನ್ಯಾಯವಿಧಾಯಕ ಸಭೆಯಲ್ಲಿ ಅಧಿಕಾರ ವರ್ಗ, ಚುನಾಯಿತರಾದ ಸದಸ್ಯರ ವರ್ಗವೊಂದಿದ್ದರೆ, ವಿಶೇಷವಾದ ವಿದ್ಯೆ, ಸಂಪತ್ತು, ಲೋಕಾನುಭವ ಮೊದಲಾದ ಕಾರಣಗಳಿಗಾಗಿ ನಿಯಮಿತರಾದ ಸದಸ್ಯರಿದ್ದರು – ಡಿ ವಿ ಜಿ ಯವರಿದ್ದಂತೆ. ಸಭೆಯ ಕಲಾಪಗಳಿಗೆ ಅಧ್ಯಕ್ಷತೆ ವಹಿಸುತ್ತಿದ್ದ ಮಂತ್ರಿಗಳಾದ ಮ್ಯಾಥ್ಸ್ ಸಾಹೇಬರು ನಿಯಮಿತರಾದ ಸದಸ್ಯರು ಯಾವ ವಿಭಾಗವನ್ನು –ಅಂದರೆ ವ್ಯಾಪಾರ, ಪರಿಶಿಷ್ಟವರ್ಗ, ವಿದ್ಯಾಭ್ಯಾಸ–ಪ್ರತಿನಿಧಿಸುತ್ತಾರೋ ಅದಕ್ಕೆ ಸಂಬಂಧಪಟ್ಟ ವಿಷಯಗಳನ್ನು ಕುರಿತು ಮಾತ್ರ ಪ್ರಶ್ನೆಗಳನ್ನು ಕೇಳಬಹುದು, ಗೊತ್ತುವಳಿಗಳನ್ನು ಕಳುಹಿಸಬಹುದು ಎಂಬ ಅಭಿಪ್ರಾಯವನ್ನು ಹೊಂದಿದ್ದರು. ಇದನ್ನು ಪ್ರತಿಭಟಿಸಿ ಡಿ ವಿ ಜಿ ಯವರು ಈ ವಿಶೇಷ ವರ್ಗದ ಸದಸ್ಯರೂ ಎಲ್ಲ ವಿಷಯಗಳನ್ನೂ ಕುರಿತು ಸಭೆಯಲ್ಲಿ ಕಲಾಪಗಳಲ್ಲಿ ಭಾಗವಹಿಸಬಹುದೆಂದು ವಾದಿಸಿದರು. ನ್ಯಾಯವಿಧಾಯಕ ಸಭೆಯಲ್ಲಿ 28–6–1929 ರಂದು ಮೂರನೆಯ ಮಂತ್ರಿಗಳಾದ ಕೆ. ಮ್ಯಾಥೆನ್ ಅವರು "I should have expected a gentleman who, as reminded by Mr. Abdul Rahman, has been nominated by government, at least to know the rules on the subject before condemning the actions of the President" ಎಂದಾಗ, ಅದಕ್ಕೆ ಉತ್ತರವಾಗಿ ಡಿ ವಿ ಜಿ : "I must very strongly protest against the implied censure. I think that Government nominated me not to represent the Government but to represent the public and I represent the public according to my light. I interpret the Rules according to my understanding and not according to Government's understanding" ಎಂದು ಹೇಳಿ ಅವರ ಬಾಯಿ ಮುಚ್ಚಿಸಬೇಕಾಯಿತು.

ನ್ಯಾಯವಿಧಾಯಕ ಸಭೆಯ ಹಕ್ಕುಗಳಿಗೆ ಚ್ಯುತಿ ಬಂದಿತೆಂಬ ಒಂದು ಪ್ರಕರಣ, ಡಿ ವಿ ಜಿ ಯವರಿಗೆ ಸಂಬಂಧಪಟ್ಟಿದ್ದು, 1934 ರಲ್ಲಿ ನಡೆಯಿತು.

ಆಗ ಸೇರಬೇಕಾಗಿದ್ದ ಸಭೆಯ ಅಧಿವೇಶನದ ಮುಂದಿಡಲು ಡಿ ವಿ ಜಿ ಎರಡು ಗೊತ್ತುವಳಿಗಳನ್ನು ಕಳುಹಿಸಿದ್ದರು: 1. ರಾಜಕೀಯ ಸುಧಾರಣೆಗಳನ್ನು ಸೂಚಿಸಲು ಒಂದು ಸಮಿತಿ. 2. ಸಂಯುಕ್ತ ಭಾರತ ರಾಷ್ಟ್ರದೊಡನೆ ವಿಲೀನವಾಗುವಾಗ ಬರುವ ಸಮಸ್ಯೆಗಳನ್ನು ಕುರಿತು ಚರ್ಚಿಸಲು ಸಮಿತಿ–ಇವುಗಳ ರಚನೆಯಾಗಬೇಕೆಂದು. ಸಭೆಯ ಅಧ್ಯಕ್ಷರಾದ ದಿವಾನರು ಈ ಗೊತ್ತುವಳಿಗಳನ್ನು ಸಭೆಯ ಮುಂದಿಡಲು ನಿರಾಕರಿಸಿದರು. ಆಗ ಡಿ ವಿ ಜಿ ಈ ಗೊತ್ತುವಳಿಗಳನ್ನು ಚರ್ಚಿಸಿ 23–6–1934 ರ ಹಿಂದೂ ಪತ್ರಿಕೆಯಲ್ಲಿ ಒಂದು ಲೇಖನವನ್ನು ಬರೆದರು. ಇದನ್ನು ಕಂಡ ಸಭಾಧ್ಯಕ್ಷರು ಅಧಿವೇಶನದ ಕೊನೆಯ ದಿನ, ಡಿ ವಿ ಜಿ ಯವರು

ತಾವು ನಿರಾಕರಿಸಿದ ಗೊತ್ತುವಳಿಯನ್ನು ಹೀಗೆ ಪತ್ರಿಕೆಗಳಲ್ಲಿ ಪ್ರಕಟಿಸಿದ್ದು ಸಭೆಯ ಹಕ್ಕುಬಾಧ್ಯತೆಗಳಿಗೆ ಚ್ಯುತಿ ತಂದಿತೆಂದು ಹೇಳಿದರು. ಅದಕ್ಕೆ ಜವಾಬು ಕೊಡಲು ಡಿ ವಿ ಜಿ ಯವರಿಗೆ ಅವಕಾಶ ಕೊಡಲೂ ಇಲ್ಲ. ನಿರಾಕರಿಸಲ್ಪಟ್ಟ ಗೊತ್ತುವಳಿಗಳನ್ನು ಪ್ರತಿಕೆಯಲ್ಲಿ ಪ್ರಕಟಿಸಿದ್ದು ಯಾವ ಹಕ್ಕಿಗೂ ಚ್ಯುತಿ ತರಲಿಲ್ಲವೆಂದು, ಡಿ ವಿ ಜಿ ಯವರ ನಿಲುವನ್ನು ಸಮರ್ಥಿಸಿ, ಹಿಂದೂ ಪತ್ರಿಕೆ ಸಂಪಾದಕೀಯವಾಗಿ ಡಿ ವಿ ಜಿ ಯವರಿಗೆ ಬೆಂಬಲ ನೀಡಿತು. ಆಗ ಮದರಾಸಿನಲ್ಲಿ ಪ್ರಕಟವಾಗುತ್ತಿದ್ದ " ಪ್ರಜಾಮತ" ಪತ್ರಿಕೆಯ ಪ್ರಾರ್ಥನೆಯಂತೆ, ಡಿ ವಿ ಜಿ ಯವರು ಮೈಸೂರು ಶಾಸನ ಸಭಾ ಮರ್ಯಾದೆಯನ್ನು ಕುರಿತು ಮಿರ್ಜಾರವರು ಮಾಡಿದ ಟೀಕೆಗೆ ಒಂದು ಉತ್ತರವನ್ನು ಕೊಟ್ಟಿದ್ದಾರೆ (13-7-1934). ಅದು "ಪ್ರಜಾಮತ "ದ 'ಸ್ಪೆಷಲ್ ಸಪ್ಲಿಮೆಂಟಾ'ಗಿ ಬಂದಿದೆ. ಸಭಾ ಮರ್ಯಾದೆಯನ್ನು ಕುರಿತು, ಸಭಾಧ್ಯಕ್ಷರನ್ನು ಕುರಿತು ಅವರು ಅಂದು ಹೇಳಿದ ಮತುಗಳು ಇಂದಿಗೂ ಜ್ಞಾಪಕದಲ್ಲಿಟ್ಟುಕೊಳ್ಳಬೇಕಾದವುಗಳು. ಶಾಸನ ಸಭೆಗಳ ಕಾರ್ಯವಿಧಾನವನ್ನು ಕುರಿತು ಅವರು ಎಷ್ಟು ಆಳವಾಗಿ ವಿಪುಲವಾಗಿ ಓದಿದ್ದರು ಎಂಬುದು ಆ ಲೇಖನದಿಂದ ತಿಳಿದು ಬರುತ್ತದೆ. ಆ ಲೇಖನದ ಒಂದೆರಡು ವಾಕ್ಯಗಳನ್ನು ಇಲ್ಲಿ ಉದಹರಿಸಬಹುದು.

The Mysore Legislative Council has not " Constantly" declared any act or forbearance as regards matter disallowed by its president to be a privilege.

It is however, very reassuring to see the analogy of the British Parliament commended and the authority of parliamentary practice invoked after the requiem on Parliamentary democracy heard from the lips of Sir Mirza Ismail just two weeks ago. If he would establish Parliamentary institutions and traditions in this country, why- we have no quarrel at all. That he is not doing it is our one grievance now. That he is actively discouraging it is our one chagrin today in an otherwise forward-looking Mysore.

In writing my article in 'The Hindu', my purpose was to show the limitations of the existing Constitution in Mysore, in other words to let the public see how under the existing Constitution it is impossible for a non-official to bring certain vital matters within the cognisance of the

Legislature. Sir Mirza desires not only that we should remain gagged on the floor of the House, but that we should remain gagged even outside as to what we suffer inside. He does not admit that the general public of the country is a higher tribunal than the Legislature which it creates.My position is different. I think that the public of the country which elects the legislature is a higher authority than the Legislature; and that if the representatives of the public are under any disabilities or handicaps they have not only the right, but also the duty of reporting their difficult position to the people who elects them.

**ಮದರಾಸಿನ "ಜಸ್ಟಿಸ್" ಪತ್ರಿಕೆ ಸಂಪಾದಕೀಯ ಲೇಖನದಲ್ಲಿ ಮಿರ್ಜಾರವರನ್ನು ಸಮರ್ಥಿಸಿ ಲೇಖನ ಬರೆಯಿತು.**

**ಈ ಪ್ರಕರಣದಂಥಾದ್ದೇ ಪುನಃ 1941 ರಲ್ಲಿ ನಡೆಯಿತು. ಆಗ ದಿವಾನ್ -ಅಧ್ಯಕ್ಷರ ಟೀಕೆಗೆ ಒಳಗಾದವರು ಕೆ. ಚೆಂಗಲರಾಯ ರೆಡ್ಡಿಯವರು. ಆಗ ಕಾಂಗ್ರೆಸ್‌ನ ಕಾರ್ಯದರ್ಶಿಯವರಾಗಿದ್ದ ಕೆ.ಪಟ್ಟಾಭಿರಾಮನ್ ಅವರು ಡಿ ವಿ ಜಿ ಯವರ ಮಾರ್ಗದರ್ಶನವನ್ನು ಕೋರಿದಾಗ ಡಿ ವಿ ಜಿ ಯವರು ಅವರಿಗೆ ಒಂದು ಪತ್ರ ಬರೆದು, 1934 ರ ಕಥೆಯನ್ನು ಜ್ಞಾಪಿಸಿಕೊಂಡು ಹೀಗೆ ಬರೆದರು (27-11-1941):**

But I would state the view I held, for what it may be worth, in the following form:

1. The member of a house of legislature, whose President is not amenable to its control and where rules of business are not of its own making, is free, when he is dissatisfied with any ruling or decision of the President, to lay a complaint before the public. The member's ultimate responsibility is to the public.

2 Even when the President is an elected one, if the subject matter of the member's complaint is the President's conduct,the question of the member's propriety or improiety is one fit to be considered by the whole house and not by the president alone.

3. Privilege cannot be a matter of arbitrary adoption. It must have an intelligible basis. The privileges of the British Parliament are a matter of historic growth and are a necessity for its free and efficient functioning. So the test to be applied is the need as viewed in relation to functioning; and the entire field of function should be kept in view. If you prefer to have Parliamentary forms in your country, you must take the essential points of the whole ideology, and not merely one convenient bit here and another convenient bit there, ignoring or rejecting the rest. The whole house, keeping in view its experience and also examples elsewhere must define what privileges are necessary to its functioning. and define also the machinery and method whereby questions may be decided.

**ಹಿಂದಿನ ಕಥೆಯ ಮುಕ್ತಾಯವನ್ನು ಕುರಿತು ಹೀಗೆ ಬರೆದರು:**

I should add that after my statement of July 1934 was published in the papers (' The Hindu' making an independent comment), there was no reference made to this action of mine (or of 'The Hindu') by the President of the Mysore Legislative Council although I attended many meetings of that body subsequently as a member. If I was guilty of a second breach of privilege, it was apparantly condoned. Or may I flatter myself that my article succeded in persuading the then President to appreciate my point of view and tacitly revise his previous ruling?

Holding the atove views, I do not see how Mr. Changalaraya Reddy can be found fault with. He has performed a public duty.

ಅವರ ಶಾಸಕ ಜೀವನದ ಇನ್ನೊಂದು ಪ್ರಕರಣವೂ ಬೋಧಪ್ರದವಾದದ್ದೇ. 28-11-1937 ರಲ್ಲಿ ಮೈಸೂರು ಕಾಂಗ್ರೆಸ್ ಬೋರ್ಡಿನ ಕಾರ್ಯದರ್ಶಿಯವರು ಡಿ ವಿ ಜಿ ಯವರಿಗೆ ಒಂದು ಪತ್ರ ಬರೆದು, ಡಿ ವಿ ಜಿ ಯವರು ಸುಮಾರು 28-10-37 ರ ಸಮಯದಲ್ಲಿ ಕೆಲವು ಜನ ಪ್ರಕಟಿಸಿದ ಹೇಳಿಕೆಯೊಂದಕ್ಕೆ ಸಹಿ ಹಾಕಿರುವುದು ಆಕ್ಷೇಪಣೀಯವೆಂದೂ, ತಾನು ಕಾಂಗ್ರೆಸಿನೊಂದಿಗೆ ಇರುವೆನೆಂದು ಮಾಡಿದ ಪ್ರತಿಜ್ಞೆಗೆ ವಿರೋಧವಾಗಿರುವುದೆಂದೂ, ಆದ್ದರಿಂದ ಅವರ ಈ ನಡವಳಿಕೆಗಾಗಿ

ವಿವರಣೆ ನೀಡಬೇಕೆಂದೂ, ಮತ್ತು ಬೋರ್ಡಿನವರ ತೀರ್ಮಾನದ ಪ್ರಕಾರ ಅವರು ಶಾಸನ ಸಭೆಯ ಸದಸ್ಯತ್ವಕ್ಕೆ ರಾಜೀನಾಮೆ ಕೊಡಬೇಕೆಂದೂ ಕೋರಿದರು.

ಡಿ ವಿ ಜಿ ಯವರು ತಮ್ಮ 1-12-1937 ರ ಉತ್ತರದಲ್ಲಿ ತಾವು ಎಲ್ಲ ವಿಷಯಗಳಲ್ಲೂ ಕಾಂಗ್ರೆಸ್ಸನ್ನೇ ಅನುಸರಿಸುವುದಾಗಿ ಯಾವ ವಾಗ್ದಾನವನ್ನೂ ಮಾಡಲಿಲ್ಲವೆಂದೂ, ಶ್ರೀಮನ್ಮಹಾರಾಜರ ಆಶ್ರಯದಲ್ಲಿ ಜವಾಬ್ದಾರಿ ಸರಕಾರದ ಸಾಧನೆಗೆ ತಾವು ಮೈಸೂರಿನಲ್ಲಿ ಕಾಂಗ್ರೆಸ್ ತನ್ನ ಚಟುವಟಿಕೆಗಳನ್ನು ಪ್ರಾರಂಭಿಸುವುದಕ್ಕೆ ಎಷ್ಟೋ ವರ್ಷಗಳಿಗೆ ಹಿಂದಿನಿಂದಲೂ ಹೋರಾಡುತ್ತಿರುವುದಾಗಿಯೂ, ಅದೇ ಗುರಿಯನ್ನು ಕಾಂಗ್ರೆಸ್ಸೂ ಹೊಂದಿದ್ದರಿಂದ ಅದನ್ನು ತಾವು ಒಪ್ಪಿಕೊಂಡದ್ದಾಗಿಯೂ ಮತ್ತಿತ್ತರ ವಿಷಯಗಳಲ್ಲಿ ತಾವು ಸ್ವತಂತ್ರರೆಂದೂ ಬರೆದರು. "May I say it is the Congress Board that has since changed? It seems to me that the Board of today is not, except in a technical sense,the same as the Board that was working seven months ago. I could not then detect in it any indications of the methodology now in vogue. While I subscribe to the Congress Board's old objective of responsible government I cannot accept its recent methods of work and would adhere to the old peaceful, lawful and constitutional methods contemplated in its own pledge".ಪಾರ್ಟಿಗಳ ಹಿಡಿತ ಎಂಥಾದ್ದು ಎಂಬುದರ ಮೊದಲ ಅನುಭವ ಡಿ ವಿ ಜಿ ಯವರಿಗೆ ಆದದ್ದು ಆಗ.

ಡಿ ವಿ ಜಿ ಯವರೊಡನೆ ನ್ಯಾಯವಿಧಾಯಕ ಸಭೆಯ ಸದಸ್ಯರಾಗಿದ್ದವರು ಅವರನ್ನು ಕುರಿತು ಹೇಳಿರುವ ಮಾತುಗಳನ್ನು ನೋಡಿದರೆ ಅವರ ಕಾರ್ಯನೀತಿಯ ಬಗೆಗೆ ನಮಗೆ ತಿಳಿಯುತ್ತದೆ.

"ಶಾಸನ ಸಭೆಗೆ ನಾನು ಪ್ರವೇಶಮಾಡಿದ್ದು 1937 ನೆಯ ವರ್ಷದ ಜೂನ್ ತಿಂಗಳಲ್ಲಿ. ಹೊಸದಾಗಿ ಸದಸ್ಯರಾದವರು ರಾಜಕೀಯ ಪ್ರಮಾಣ ವಚನವನ್ನು ಸ್ವೀಕರಿಸುವ ಸಮಯದಲ್ಲಿ ಇಂಗ್ಲಿಷ್ ನಮೂನೆಗೆ ಸಹಿ ಮಾಡಿ ಪ್ರಮಾಣ ಮಾಡುತ್ತಿದ್ದುದನ್ನು ಕಂಡ ನಾನು, ಕನ್ನಡದ ನಮೂನೆ ಇರುವಾಗ ಕೂಡ ಇಂಗ್ಲಿಷ್ ನಮೂನೆಯ ಗೋಜೇಕೆ ಎಂದು ಕನ್ನಡದಲ್ಲೇ ರಾಜಭಕ್ತಿಯ ಪ್ರಮಾಣ ಸ್ವೀಕರಿಸಿದೆ. ಹೀಗೆ ಮಾಡಲು ನನಗೆ ಶ್ರೀ ಡಿ ವಿ ಜಿ ಯವರಿಂದ ಬೆಂಬಲ ದೊರೆಯಿತು. ಅಲ್ಲಿಂದಾಚೆಗೆ ಸ್ವಲ್ಪ ಧೈರ್ಯ ತಂದುಕೊಂಡು ಅವರ ಮತ್ತು ಇತರ ಮಿತ್ರರ ಸಹಕಾರದಿಂದ ಅನೇಕರು ಕನ್ನಡದಲ್ಲಿ ಮಾತನಾಡಲಾರಂಭಿಸಿದೆವು"ಎಂದು ಶ್ರೀ ಬಿ. ಆರ್. ಪುಟ್ಟನಂಜಪ್ಪನವರು ಜ್ಞಾಪಿಸಿಕೊಳ್ಳುತ್ತಾರೆ. (ಕನ್ನಡ ನುಡಿ-20-9-1940)

ಜನಾಬ್ ಜೆ. ಮಹಮದ್ ಇಮಾಂ ಅವರು: " ಚುನಾಯಿಸಲ್ಪಟ್ಟ ಸದಸ್ಯರು ಮೇಧಾವಿಗಳೂ ವಾಚಾಳಿಗಳೂ ಆಗಿರುತ್ತಿದ್ದರು. ಅವರ ಭಾಷಣ ಮತ್ತು ಟೀಕೆಗಳು ಉನ್ನತ ಮಟ್ಟದಲ್ಲಿಯೂ ರಚನಾತ್ಮಕವಾಗಿಯೂ ಇರುತ್ತಿದ್ದವು. ಅನಾವಶ್ಯಕವಾದ ಟೀಕೆಗಳು ಬಹು ಅಪರೂಪ. ಶ್ರೀಗಳಾದ ಖಾನ್ ಬಹದ್ದೂರು ಅಬ್ಬಾಸ್‌ಖಾನ್, ಡಿ. ವಿ. ಗುಂಡಪ್ಪ, ಡಿ. ಹೆಚ್. ಚಂದ್ರಶೇಖರಯ್ಯ, ರಾವ್ ಸಾಹೇಬ್ ಚನ್ನಯ್ಯ, ನರಸಿಂಗರಾವ್, ಹೊಸಕೊಪ್ಪ ಕೃಷ್ಣರಾವ್, ಡಿ. ಎಸ್. ಮಲ್ಲಪ್ಪ, ಪರಮಶಿವಯ್ಯ, ಯಂ. ರಾಮಚಂದ್ರರಾವ್, ಸರ್ ಪುಟ್ಟಣ್ಣ ಶೆಟ್ಟರು, ಹಾಸನದ ವೆಂಕಟೇಶಯ್ಯ, ಎಸ್. ಎಲ್. ಮನ್ನಾಜಿರಾವ್, ಇವರ ಭಾಷಣಗಳ ಶೈಲಿ, ವಾಕ್ ಚಾತುರ್ಯ, ರಚನಾತ್ಮಕ ಟೀಕೆಗಳು, ಆದರ್ಶನೀಯವಾಗಿವೆ. ಈ ಮಟ್ಟದ ಭಾಷಣಗಳು ಈಗಿನ ಶಾಸನ ಸಭೆಗಳಲ್ಲಿ ಕೇಳುವುದು ಬಹಳ ವಿರಳವೆ." (ಮೈಸೂರು: ಆಗ ಮತ್ತು ಈಗ)

ಮಾರ್ಲೆ, ಗ್ಲಾಡ್‌ಸ್ಟನ್ ಮಹಾಪುರುಷನನ್ನು ಕುರಿತು: "Mr.Gladstone had given proof that he knew how to embody sentiment in acts of Parliament and he associated it with the broadest ideas of citizenship and policy. These speeches were not a manifesto or a programme; they were a survey of the princlples of the statesmanship that befitted the period" ಎಂದಿದ್ದಾನೆ.

ಡಿ ವಿ ಜಿಯವರು ನ್ಯಾಯವಿಧಾಯಕ ಸಭೆಯಲ್ಲಿ ಮಾಡಿದ ಭಾಷಣಗಳ ವಿಷಯದಲ್ಲಿಯೂ ಈ ಮಾತುಗಳನ್ನೇ ಹೇಳಬಹುದು. ಯಾವ ವಿಷಯವನ್ನು ಕುರಿತು ಮಾತನಾಡಲಿ, ಆ ಸಂಗತಿಯನ್ನು ಎಲ್ಲ ದೃಷ್ಟಿಕೋನಗಳಿಂದಲೂ ನೋಡಿ, ಅದರ ಅನುಕೂಲ ಅನಾನುಕೂಲಗಳನ್ನು ವಿವರಿಸಿ, ಅದರಿಂದ ದೇಶದ ಜನದ ಮೇಲಾಗುವ ಪರಿಣಾಮವನ್ನು ಎತ್ತಿತೋರಿಸುವುದು ಅವರ ಮಾರ್ಗವಾಗಿತ್ತು. ದೇಶಹಿತವೆಂಬುದನ್ನು ಒಂದು ನಿಯತ ಸ್ವರೂಪದಲ್ಲಿ ತೋರಿಸಿದ ಹಿರಿಮೆ ಅವರದು. ಅವರು ಅನುಸರಿಸುತ್ತಿದ್ದ ಮಾರ್ಗ " ರಿಆಕ್ಷನರಿ" ಪ್ರಗತಿ ವಿರೋಧವಾದದ್ದುಎಂದು ಮೇಲ್ನೋಟಕ್ಕೆ ಅನ್ನಿಸುವಂತಿದ್ದರೂ, ಅವರ ನಿಲುವು ಜನದ ಮನೋಗತವನ್ನು ತಿಳಿದದ್ದು ಎಂಬುದರಲ್ಲಿ ಸಂದೇಹವಿಲ್ಲ.ಮತ್ತು ಅವರು ಶಾಸನದಿಂದಲೇ ಎಲ್ಲವೂ ಸಾಧ್ಯವಾಗಿಬಿಡುತ್ತದೆ ಎಂಬ ಭ್ರಾಂತಿಯಿದ್ದವರಲ್ಲ. ಜನರಲ್ಲಿ ವಿದ್ಯಾಭ್ಯಾಸ ಹೆಚ್ಚಿದಂತೆ, ವಿವೇಕ ಬೆಳೆದಂತೆ ಅನೇಕ ಸುಧಾರಣೆಗಳು ಅರ್ಥಪೂರ್ಣವಾಗುತ್ತವೆ ಎಂಬುದೇ ಅವರ ಅಭಿಪ್ರಾಯ. ಅತಿ ಪ್ರಶ್ನೆಗಳು ಅವರಿಗೆ ವರ್ಜ್ಯವಾಗಿದ್ದುವು.

ಡಿ ವಿ ಜಿ ಯವರ ಎಲ್ಲ ಭಾಷಣಗಳ ಪಲ್ಲವಿಯೂ ಒಂದೇ ಆಗಿತ್ತು: ಜವಾಬ್ದಾರಿ ಸರಕಾರದ ಸ್ಥಾಪನೆ.

25–6–1929 ರಲ್ಲಿ ಮಾತನಾಡುತ್ತ ದೇಶದ ಎಲ್ಲೆಡೆಯಲ್ಲಿಯೂ ಒಂದು ಹೊಸದೃಷ್ಟಿ ಒಂದು ಹೊಸಮನೋಭಾವ ಬರುತ್ತಲಿದೆ ಎಂದು ಹೇಳಿ:

"These are matters which a statesmanly Government has to take account of and prepare the country for the changes that are to come. I therefore entreat the Government to prepare themselves and also to prepare us for the constitutional changes that are desired -constitutional changes tending in to direction of Responsible Government" ಎಂದು ಸರಕಾರದ ಜವಾಬ್ದಾರಿಯುತ್ತ ಗಮನ ಸೆಳೆದರು.

ಮೈಸೂರಿನಲ್ಲಿ ರಾಜಕೀಯ ಸುಧಾರಣೆಗಳನ್ನು ಶಿಫಾರಸ್ಸು ಮಾಡಲು ಒಂದು ಸಮಿತಿಯನ್ನು ನೇಮಿಸಬೇಕೆಂದು ಡಿ. ಎಸ್. ಮಲ್ಲಪ್ಪನವರು ಒಂದು ಗೊತ್ತುವಳಿಯನ್ನು 18–12–1928 ರಂದು ಸಭೆಯ ಮುಂದೆ ತಂದರು. ಅದಕ್ಕೆ ತಮ್ಮ ಸಮ್ಮತಿಯನ್ನು ಸೂಚಿಸುತ್ತ ಡಿ ವಿ ಜಿ, "I shall not go into the details of the philosophy of democracy. At this hour of the day it is playing king Canute to say that we in Mysore are not going to have Responsible Government. The waves of democratic ideals in British India have been beating even upon the borders of our state. Another argument in support of this claim for another step in advance towards constitutional Government is my very fervent hope that further political progress will act as solvent for all our communal misunderstanding and dissention"

ಮರುದಿನ ಈ ಪ್ರಶ್ನೆಯನ್ನೇ ಕುರಿತು ನಡೆದ ಚರ್ಚೆಯಲ್ಲಿ ಕೆಲವು ಸದಸ್ಯರು ಪ್ರಜಾಪ್ರಭುತ್ವದ ನ್ಯೂನತೆಗಳನ್ನು ಪ್ರಸ್ತಾಪಿಸಿ ಅದು ಪಾಶ್ಚಾತ್ಯ ದೇಶಗಳಲ್ಲಿಯೂ ಸಫಲವಾಗಿಲ್ಲ, ಜನಕ್ಕೆ ನೆಮ್ಮದಿಯನ್ನೂ ತಂದಿಲ್ಲ ಎಂಬ ಮಾತನ್ನಾಡಿದರು. ಅದನ್ನು ಕುರಿತು ಡಿ ವಿ ಜಿ "I wholly accept that soft impeachment of democrcy. I don't think anyone here is out to prove that demoracy is some substitute for the kind of peradise of which all of us read in the scriptures. Democracy has its imperfections. But all the same it is admitted everywhere that democracy even though handled by the incompetent

is, on the whole better than Government by a group or clique- let alone Government by one person ....Responsible Government, we all acknowledge, can be attained in its possible perfection,-perfection-only by successive stages, by several processes of education of the people.We therefore are not, in this Resolution, asking for one sudden forward lift to the acme of Responsible Government. To use the words of Cardinal Newman " I do not to ask to see the distant scene. One step is enough for me." It is in that spirit that we are now asking, not for the introduction of reforms, but merely for the appointment of a committee" ಎಂದಿದ್ದಾರೆ.

ಈ ಗೊತ್ತುವಳಿಯನ್ನು 22 ಸದಸ್ಯರು ಅನುಮೋದಿಸಿದರು. 23 ಸರಕಾರದ ಸದಸ್ಯರು ವಿರೋಧಿಸಿದರು.

ಸಮಾಜ ಸುಧಾರಣೆಯ ವಿಷಯ ಬಂದಾಗ, ಮತ ತತ್ವಗಳ ವಿಷಯ ಬಂದಾಗ ಅವರು ಯಾವಾಗಲೂ ಎಚ್ಚರಿಕೆಯ ಮಾತನ್ನೇ ಹೇಳುತ್ತಿದ್ದರು.

ಉದಾಹರಣೆಗೆ ವೇದ ಪಾಠವನ್ನು ಬ್ರಾಹ್ಮಣೇತರ ವಿದ್ಯಾರ್ಥಿಗಳಿಗೆ ಹೇಳಿಕೊಡುವ ವಿಷಯದಲ್ಲಿ "I may once for all say that I personally-consider the requst not only a reasonable one but a patriotic one"ಎಂದು ಆ ಸೂಚನೆಗೆ ಸಮ್ಮತಿಸಿ, ಆ ಪ್ರಶ್ನೆಯ ಇನ್ನೊಂದು ಮುಖವನ್ನು ನಾವು ಗಮನದಲ್ಲಿರಿಸಿಕೊಳ್ಳಬೇಕೆಂದರು. (26-6-1929). ವೇದ ಉಪಾಧ್ಯಾಯರ ಅಭಿಪ್ರಾಯವೂ ಒಂದುಂಟು. ಯಾವ ಕ್ರಮದಲ್ಲಿ ವೇದಪಾಠವಾಗಬೇಕು, ಯಾರಿಗೆ ಮತ್ತು ಯಾರಿಂದ ಇವೆಲ್ಲವನ್ನೂ ವೇದಗಳು ನಿರ್ಧರಪಡಿಸಿವೆ. ಅದನ್ನು ಗಮನದಲ್ಲಿರಿಸಿಕೊಂಡು ಮುಂದಿನ ಕ್ರಮ ಕೈಗೊಳ್ಳಬೇಕು. ಇದನ್ನು ಗಮನದಲ್ಲಿರಿಸಿಕೊಂಡಿದ್ದರೆ ಸಂತೋಷ ಎಂದು ತಮ್ಮ ಅಭಿಪ್ರಾಯವನ್ನು ವಿವರಿಸಿದ್ದಾರೆ.

2-7-1935 ರಂದು **ಬಾಲ ವಿವಾಹ ನಿರೋಧ** ಕಾನೂನೊಂಧನ್ನು ತರಬೇಕೆಂದು ಜಿ. ಚನ್ನಪ್ಪನವರು ಗೊತ್ತುವಳಿಯೊಂದನ್ನು ಸಭೆಯ ಮುಂದೆ ತಂದರು.ಬಾಲ ವಿವಾಹದ ಆಚರಣೆಯನ್ನು ತಾವು ವಿರೋಧಿಸುವುದಾಗಿಯೂ ಅದರಂತೆಯೇ ತಾವು ಜೀವನದಲ್ಲಿಯೂ ನಡೆದುಕೊಳ್ಳುತ್ತಿದ್ದರೂ ಆ ಗೊತ್ತುವಳಿಗೆ ತಾವು ಬೆಂಬಲ ನೀಡುವುದಿಲ್ಲವೆಂದು ಡಿವಿಜಿಯವರು ಹೇಳಿದರು. ಸರಿಯಾಗಿಯೋ ತಪ್ಪಾಗಿಯೋ ನಮ್ಮ

ಜನ ಕೆಲವು ವಿಚಾರಗಳನ್ನು ಶಾಸ್ತ್ರ ಸಮ್ಮತವೆಂದು ನಂಬಿಕೊಂಡಿದ್ದಾರೆ. ಅಂಥ ನಂಬಿಕೆಗಳ ಮೇಲೆ ನಾವು ಕೈಮಾಡಲಾಗದು. ಪಾಶ್ಚಾತ್ಯ ದೇಶಗಳಲ್ಲಿಯೂ ಈ ಪದ್ಧತಿಯು ವೈಜ್ಞಾನಿಕ ಬೆಳವಣಿಗೆಯ ಪರಿಣಾಮವಾಗಿ ತಪ್ಪಿಹೋದದ್ದು ಈಚೆಗೇ. ಹಾಗೆ ವಿಜ್ಞಾನದ ಮುನ್ನಡೆಯಿಂದ ನಮ್ಮ ಜನದ ತಿಳಿವಳಿಕೆಯಿಂದ ಇಂಥ ಪದ್ಧತಿಗಳು ತೊಲಗಬೇಕು. ಆದರೆ "There are I do not deny, certain cases in which even this sacred precinct of religion may be invaded by legislation. Where a particular practice is inhuman according to the verdict of a civilized man, or where a particular practice is against civilization itself, and where there is no other way of correcting or rectifying that practice, interference is justified. The case of sati is an instance in point. It was an inhuman practice though a religious practice. And in the name of civilization the legislature did interfere and I do not think there was any very large protest or disagreement." ಎಂದಿದ್ದಾರೆ ಮತ್ತು "If you are going to exempt from the operation of the measure Mussalmans because their conscience is against it and Brahmins because their conscience is against it whom is it going to benefit I ask?" ಎಂದು ಶಂಕೆಯನ್ನು ವ್ಯಕ್ತಪಡಿಸಿದ್ದಾರೆ.

ಅವರು ಮಠಗಳ ಲೆಕ್ಕಪತ್ರಗಳನ್ನು ವರ್ಷಕ್ಕೊಂದು ಬಾರಿಯಾದರೂ ತನಿಖೆಗೆ ಒಳಪಡಿಸಿ ಅದನ್ನು ಸಾರ್ವಜನಿಕರ ತಿಳಿವಳಿಕೆಗಾಗಿ ಪ್ರಕಟಿಸಬೇಕೆಂದು ಅನೇಕ ಬಾರಿ ಒತ್ತಾಯ ಪಡಿಸಿದ್ದಾರೆ.

ಮತಾಂತರಗಳಿಂದ ದ್ವೇಷಗಳು ಗಲಭೆಗಳು ಶಂಕೆಗಳು ಜನರಲ್ಲಿ ಹರಡುತ್ತಿದ್ದ ಕಾಲ ಅದು. ಈ ಸಮಸ್ಯೆಗೆ ಸ್ವಲ್ಪ ಪರಿಹಾರವನ್ನು ತರಲು ಡಿ ವಿ ಜಿ ಮತಾಂತರಗಳನ್ನು ರಿಜಿಸ್ಟರ್ ಮಾಡುವ ವಿಧಾನವೊಂದನ್ನು ಕಾನೂನು ನಿಗದಿಪಡಿಸಬೇಕೆಂದು ಗೊತ್ತುವಳಿಯೊಂದನ್ನು ತಂದಿದ್ದರು.ಅದರ ಪ್ರಕಾರ ಮತಾಂತರವಾಗಬೇಕಾದ ದಿನಕ್ಕೆ 15 ದಿನಗಳ ಮೊದಲೇ ಇದಕ್ಕಾಗಿ ನಿಯಮಿಸಲ್ಪಟ್ಟ ಅಧಿಕಾರಿಯ ಮುಂದೆ ಮತಾಂತರ ಹೊಂದುವ ಅಭಿಲಾಷೆಯನ್ನು ಘೋಷಿಸಿಕೊಳ್ಳಬೇಕು. ಹಾಗೆಯೇ ಮತಾಂತರವಾದ 7 ದಿನಗಳ ನಂತರ ಮತಾಂತರವಾದ ಘಟನೆಯನ್ನು ಘೋಷಿಸಿಕೊಳ್ಳಬೇಕು. ಹೀಗೆ ಈ ವಿಷಯ ಸಾರ್ವಜನಿಕವಾಗಿ ನಡೆದರೆ ಸಂದೇಹಗಳಿಗೆ ಎಡೆಯಿರದು ಎಂಬುದೇ ಅವರ ಇಂಗಿತವಾಗಿತ್ತು.

ಈ ಗೊತ್ತುವಳಿ ನ್ಯಾಯವಿಧಾಯಕ ಸಭೆಯ ಒಳಗೂ ದೇಶದ ಇತರ ಕಡೆಗಳಲ್ಲಿಯೂ ಬಿರುಗಾಳಿಯನ್ನೇ ಎಬ್ಬಿಸಿತು.

ಮತಾಂತರವು ಅಂತರಂಗದ ಬದಲಾವಣೆಯ ಕಾರಣದಿಂದ ಆಗುವುದೆಂಬ ನಂಬಿಕೆಯಿಲ್ಲ, ಇತರ ಆರ್ಥಿಕ ಸಾಮಾಜಿಕ ಒತ್ತಡಗಳಿಂದ ಆಗುವುದೆಂಬ ಸಂದೇಹವಿದೆ. ಆ ಕಾರಣದಿಂದ ಈ ಮಸೂದೆ ಅಗತ್ಯ ಎಂದು ಡಿ ವಿ ಜಿ ಯವರ ವಾದ.

ಸರಕಾರವು ಮತ ಸಂಬಂಧವಾದ ವಿಷಯದಲ್ಲಿ ಪ್ರವೇಶ ಮಾಡುವುದಿಲ್ಲವೆಂದೂ ಡಿ ವಿ ಜಿ ಯವರ ಶಂಕೆಗೆ ಯಾವ ಆಧಾರವು ಇಲ್ಲವೆಂದೂ ಸರಕಾರದ ಪ್ರತಿನಿಧಿ ಹೇಳಿದರು. 15 ಸದಸ್ಯರು ಒಪ್ಪಿಗೆ ಸೂಚಿಸಿದರು, 23 ಸದಸ್ಯರು ವಿರೋಧಿಸಿದರು.

ಈ ಗೊತ್ತುವಳಿಯನ್ನು ಕುರಿತು ಮದರಾಸಿನ "ದಿ ಮೈಲ್" ಮತ್ತು "ದಿ ಗಾರ್ಡಿಯನ್" ಪತ್ರಿಕೆಗಳೂ, ಮೈಸೂರಿನ " ವೃತ್ತಾಂತ ಪತ್ರಿಕೆ" ಯೂ ಟೀಕಿಸಿ ವಿರೋಧಿಸಿ ಸಂಪಾದಕೀಯ ಲೇಖನಗಳನ್ನೇ ಬರೆದುವು.

ಇಂದಿಗೂ ಮತಾಂತರ ಪ್ರಶ್ನೆಯು ದೇಶದ ಮುಂದೆ ಆಗಾಗ ಬರುತ್ತಲೇ ಇದೆ. ಡಿ ವಿ ಜಿ ಜೀವಿಸಿರುವವರೆಗೂ ತಮ್ಮ ಸೂಚನೆಯನ್ನು ಹೇಳುತ್ತಲೇ ಬಂದಿದ್ದರೂ ಅದಕ್ಕೆ ಸಿಕ್ಕಬೇಕಾದ ಪ್ರಾಮುಖ್ಯತೆ ಸಿಕ್ಕದೆ ಇರುವುದು ಶೋಚನೀಯ.

**ಹರಿಜನರ ದೇವಾಲಯ ಪ್ರವೇಶವನ್ನು** ಕುರಿತು ಗೊತ್ತುವಳಿಯೊಂದು ಸಭೆಯ ಮುಂದೆ ಬಂದಾಗ (26-1-1937) ಅವರು ತಿರುವಾಂಕೂರಿನಲ್ಲಿ ಇದನ್ನು ಕುರಿತ ಮಸೂದೆಗೆ ಬೆಂಬಲವೂ ವಿರೋಧವೂ ಇರುವುದನ್ನು ಹೇಳಿ "Therefore I appeal to the Government that in this matter they have got to take note of the spirit of the times and make what reasonable move they could towards meeting the wishes of the reformers", ಅದಕ್ಕೆ ಇರುವ ವಿರೋಧವನ್ನು ಸೂಚಿಸಿ "The duty of the Government and everybody else is to find a way of reconciliation between these two opposite schools and I think such a reconciliation is possible and it may be made possible if government will take a sympathetic view of the matter" ಎಂದಿದ್ದಾರೆ.

ಕೋಲಾರದ ಚಿನ್ನದ ಗಣಿಯನ್ನು ಕುರಿತು ಮಾತನಾಡುತ್ತಾ (25-6-1935) ಅವರು, ಸರಕಾರದವರು ಆ ಕಂಪೆನಿಯವರೊಡನೆ ಮಾಡಿಕೊಂಡ ಒಪ್ಪಂದದಲ್ಲಿ ಮೂರು ಕೊರತೆಗಳಿವೆಯೆಂದು ಹೇಳಿದರು: (1) ಆ ಕಂಪೆನಿಯಲ್ಲಿ ಎಷ್ಟರಮಟ್ಟಿಗೆ ಸಾಧ್ಯವೋ ಅಷ್ಟು ಷೇರುಗಳನ್ನು ಸರಕಾರ ತೆಗೆದುಕೊಳ್ಳುವ ಅವಕಾಶವನ್ನು ಮಾಡಿಕೊಳ್ಳಬೇಕಾಗಿತ್ತು. (2) ಗಣಿಗಳಲ್ಲಿ ಕೆಲಸಗಾರರ ಹಿತಕ್ಕೆ ಆಗಬೇಕಾದ ಕಾರ್ಯಗಳನ್ನು ಮಾಡಲು ಸರಕಾರ ಅಧಿಕಾರವನ್ನು ಉಳಿಸಿಕೊಳ್ಳಬೇಕಾಗಿತ್ತು, ಮತ್ತು (3) ಮೈಸೂರಿನ ಜನಕ್ಕೆ ಗಣಿಯ ಕೆಲಸದಲ್ಲಿ ತರಬೇತಿ ಕೊಟ್ಟು ಅವರನ್ನು ಅಲ್ಲಿಯ ದೊಡ್ಡ ಹುದ್ದೆಗಳಿಗೆ ನಿಯಮಿಸಲು ಅರ್ಹರನ್ನಾಗಿ ಮಾಡುವಂತೆ ಕಂಪೆನಿಯವರನ್ನು ಒತ್ತಾಯಿಸ ಬೇಕಾಗಿತ್ತು.

ಶಾಸನ ಸಭೆಯ ಕಛೇರಿಯಲ್ಲಿ ಹೆಚ್ಚು ಕನ್ನಡ ಷಾರ್ಟ್‌ಹ್ಯಾಂಡ್ ವರದಿಗಾರರನ್ನು ನೇಮಕಮಾಡಬೇಕೆಂದೂ, ಅವರಿಗೆ ಸಂಬಳಗಳನ್ನು ಹೆಚ್ಚಿಸಬೇಕೆಂದೂ ಕೇಳಿದ್ದಾರೆ (27-6-1935).

ಸಾರ್ವಜನಿಕ ಸಭೆಗಳನ್ನು ಸರಕಾರ ಅಡ್ಡಿಪಡಿಸುವ ಬಗ್ಗೆ ತಮ್ಮ ವಿರೋಧವನ್ನು ಅವರು ಆಗಾಗ್ಗೆ ವ್ಯಕ್ತಪಡಿಸುತ್ತಿದ್ದರು.

ಮಿರ್ಜಾಸಾಹೇಬರು ದಿವಾನರಾದ ಕೊಂಚ ದಿನದಲ್ಲೇ ಬಿನ್ನಿಮಿಲ್ಲಿನಲ್ಲಿ ಮುಷ್ಕರ ನಡೆಯಿತು. ಪೋಲಿಸರು ಗುಂಡು ಹಾರಿಸಬೇಕಾಯಿತು. ಅಲ್ಲಿಂದ ಸ್ವಲ್ಪ ತಿಂಗಳುಗಳ ಮೇಲೆ ಮಹಾರಾಜ ಮಿಲ್ಲಿನಲ್ಲಿ ಮುಷ್ಕರ. ಇದನ್ನು ಕುರಿತು ಡಿ ವಿ ಜಿ "They have not ended. I think the labourers do deserve what other citizens of His Highness's state deserve, viz., humane and prompt treatment at the hands of government and if the government find that the existing laws do not arm them with sufficient powers, I think they are competent under the emergency clause, to clothe themselves with such powers.Government have not done it. On the other hand, the complaint is bitter and loud that the police have been taking sides with the capitalists and doing all that they can to cripple the labour movement and to bring it on its knees. I should think that this is very unjust......I am asking for an equitable adjustment between capital and labour" ಎಂದು ಹೇಳಿದರು.

ಅವರು ಸಾಮಾನುಗಳನ್ನು ಮಾರುವ ನಿಗಮವೊಂದನ್ನೂ ವ್ಯಾಪಾರಸ್ಥರಿಗೆ ಬಂಡವಾಳ ಒದಗಿಸುವ ಸಂಸ್ಥೆಯೊಂದನ್ನೂ ಸರಕಾರ ಸ್ಥಾಪಿಸಬೇಕು; ಈಗಿರುವ ವ್ಯಾಪಾರ ಸಂಸ್ಥೆಗಳ ಪರಿಸ್ಥಿತಿಯನ್ನು ಪರಿಶೀಲಿಸಲು ಒಂದು ಸಮಿತಿಯನ್ನು ರಚಿಸಬೇಕು;

ಡಿಸ್ಟ್ರಿಕ್ಟ್ ಬೋರ್ಡ್, ಮುನಿಸಿಪಾಲಿಟಿ ಇವುಗಳ ಸಭೆಗಳ ಕಾರ್ಯ ಕಲಾಪಗಳು, ಮುನ್ಸಿಫ್ ಮತ್ತು ಮ್ಯಾಜಿಸ್ಟ್ರೇಟ್ ಕೋರ್ಟುಗಳಲ್ಲಿ ಕಾರ್ಯ ಕಲಾಪಗಳು ಕನ್ನಡದಲ್ಲೇ ನಡೆಯಬೇಕು;

ಮೈಸೂರು ವಿಶ್ವವಿದ್ಯಾಲಯಕ್ಕೆ ವರ್ಷಕ್ಕೆ 11 ಲಕ್ಷ ರೂಪಾಯಿಗಳಿಗೆ ಕಡಿಮೆ ಇಲ್ಲದಂತೆ ಗ್ರಾಂಟ್ ಕೊಡಬೇಕು;

- ಈ ವಿಷಯಗಳನ್ನು ಕುರಿತು ಗೊತ್ತುವಳಿಗಳನ್ನು 1934ರಲ್ಲಿ ಅವರು ಸೂಚಿಸಿದ್ದರು.

ಹೀಗೆ ಜನಹಿತಕ್ಕೆ ರಾಜ್ಯದ ಬೆಳವಣಿಗೆಗೆ ಸಂಬಂಧಪಟ್ಟ ಎಲ್ಲ ವಿಷಯಗಳನ್ನು ಕುರಿತ ಚರ್ಚೆಗಳಲ್ಲೂ ಅವರು ಭಾಗವಹಿಸುತ್ತಿದ್ದರು. ಅವರ ದೃಷ್ಟಿಯಿದ್ದದ್ದು ವ್ಯಕ್ತಿ ಸ್ವಾತಂತ್ರ್ಯದ ಮೇಲೆ, ಸಮಾಜದ ಸುಸ್ಥಿತಿಯ ಮೇಲೆ. ಸರಕಾರದ ಖರ್ಚು ಹೆಚ್ಚಾಗಿ ಜನದ ಮೇಲೆ ತೆರಿಗೆಯ ಭಾರ ಹೆಚ್ಚಬಾರದು, ಸರಕಾರದ ಎಲ್ಲ ನಡವಳಿಕೆಗಳೂ ಮಹಾಜನದ ಪರೀಕ್ಷೆಗೆ ಒಳಪಡಬೇಕು ಎಂಬುದೇ ಅವರು ಸರಕಾರಕ್ಕೆ ಹೇಳುತ್ತಿದ್ದ ಮಾತು.

ಅವರು ಸಭೆಯಲ್ಲಿ ಹೇಳುತ್ತಿದ್ದ ಮಾತು, ಮುಂದಿಡುತ್ತಿದ್ದ ವಾದ ಎಷ್ಟು ಸಮಗ್ರವಾಗಿರುತ್ತಿತ್ತೆಂದರೆ ಅದು ಮುಂದಿನ ಚರ್ಚೆಗೆ ಅನುಮಾಡಿ ಕೊಡುತ್ತಿತ್ತು.

ಜೂನ್ 28,1929 ರಂದು ಆಡಳಿತವನ್ನು ಕುರಿತು ಸಭೆಯಲ್ಲಿ ಸ್ವಲ್ಪ ಬಿಸಿಯಾದ ಚರ್ಚೆಯೇ ನಡೆಯಿತು. ಡಿ ವಿ ಜಿ ಯವರು "Repression will not crush the uprising spirit of the people. Bonds of steel cannot bind the genius and spirit of a nation growing selfconscious. Mere official correctitude, mere conventional forms and proprieties or mere show of authority and force characteristic of the type of public servants whom Morley calls Tehinovniks will not suffice for these times. You have got to be more fair- minded and take a vision of things that are bound to come. If Government will recognise this, will bring a certain amount of sympathy to the new movements,will try to get under the skins of even the so called agitators and fermenters of trouble, they will find that all there is not wickedess, that the intention is good and that the motive is pure" ಎಂದರು.

ಈ ಮಾತುಗಳನ್ನು ಕೇಳಿಯೋ ಏನೋ ಎಂ. ವೆಂಕಟಕೃಷ್ಣಯ್ಯನವರು ಡಿ ವಿ ಜಿ ಯವರಿಗೆ 4-7-1929 ರಲ್ಲಿ ಈ ಪತ್ರ ಬರೆದರು:

My dear Mr.Gundappa,

You have justified your existence. You have done your duty. If the history of Mysore is written you will occupy a respectable place in it .The sacrifice you have been making in the interest of public welfare and the invincible determination that you showed to throw a flood of lime light on the criminal caprices of irresponsible officials entitle you to a prominent place in the galaxy of real patriots.May God bless you with long life, robust health and a career of great usefulness to the cause of justice and fair play in this unhappy land, a land which appears to me have been forsaken by both god and man.

Yours affectionately,

M. Venkatakrishnayya

ಎಲ್ಲ ಒಳ್ಳೆಯ ಮಾತೇ ಬರಲಿಲ್ಲ. " ಚಾಣಕ್ಯ" ಎಂಬೊಬ್ಬರು, ."The net gain of the show in the last Legislative Council was cheap advertisement of Mr. D. V. Gundappa, the nominated member of the Legislative Council and a friend of the local Swarajya correspondent who is trying hard for the last ten months to instal Mr. Gundappa and Mr. Hosakoppa Krishna Rao to the 'Gadi' of public leadership in Mysore" ಎಂದು **3-7-1929** ರಲ್ಲಿ ಬರೆದರು.

# ವೇಶ್ಯಾವೃತ್ತಿಯನ್ನು ನಿರ್ಬಂಧಿಸುವ ಮಸೂದೆ ಕುರಿತು

ವೇಶ್ಯಾವೃತ್ತಿಯನ್ನು ಕಾನೂನಿಂದ ನಿರ್ಬಂಧಿಸಬೇಕೆನ್ನುವ ಖಾಸಗೀ ಗೊತ್ತುವಳಿ ಲೆಜಿಸ್ಲೇಟಿವ್ ಕೌನ್ಸಿಲಿನಲ್ಲಿ 1935ರ ಜುಲೈ 3 ರಂದು ಚರ್ಚೆಗೆ ಬಂದಿತು. ಇದರ ಚರ್ಚೆ 1935ರ ಡಿಸೆಂಬರ್ 19ರಂದು ಮುಂದುವರಿದು ಗೊತ್ತುವಳಿಯು ಆಯ್ಕೆ ಸಮಿತಿಗೆ (select committee) ಸಲ್ಲಿಸಲ್ಪಟ್ಟಿತು. ಮುಂದೆ 1936ರ ಜುಲೈ 1 ರಂದು ಅಂಗೀಕೃತವಾಯಿತು.

ಮೇಲ್ನೋಟಕ್ಕೆ ಈ ಖಾಸಗೀ ಗೊತ್ತುವಳಿಯನ್ನು ಡಿವಿಜಿಯವರು ವಿರೋಧಿಸಿದಂತೆ ತೋರುತ್ತದೆ. ಆದರೆ ಹಾಗಲ್ಲ. ಅವರು ವಿರೋಧಿಸಿದ್ದು ಗೊತ್ತುವಳಿಯ ಅಸಮಗ್ರತೆಯನ್ನು. ಕಾನೂನಿನಿಂದ ವೇಶ್ಯಾವೃತ್ತಿಯನ್ನು ನಿಗ್ರಹಿಸುವುದಷ್ಟೇ ಅಲ್ಲ. ಜೊತೆಗೆ ಅವರನ್ನು ರಕ್ಷಿಸುವ ರಕ್ಷಣಾ ಗೃಹಗಳನ್ನು ನಿರ್ಮಿಸಬೇಕು. ಅಂದಾಗ ಮಾತ್ರ ಇಂಥ ಕಾನೂನು ಸಾರ್ಥಕವಾಗಬಲ್ಲದು ಎನ್ನುವುದು ಅವರ ವಾದವಾಗಿದ್ದಿತು. – ಸಂ.

**ಶ್ರೀಯುತ ಡಿ.ವಿ.ಗುಂಡಪ್ಪ** .– ಈ ರೀತಿಯ ಕಾನೂನು ಮಾಡುವುದಕ್ಕೆ ಮೇಲ್ನೋಟಕ್ಕೆ ಯಾವುದಾದರೂ ಕಾರಣವಿದೆಯೇ ಎಂಬುದನ್ನು ತಿಳಿದುಕೊಳ್ಳುವುದಕ್ಕೆ ಇದೊಂದು ಸುಸಂದರ್ಭವೆಂದು ನಾನು ತಿಳಿಯುತ್ತೇನೆ. ನಾನು ಇದುವರೆಗೂ ಆದ ಚರ್ಚೆಯನ್ನು ಗಮನವಿಟ್ಟು ಆಲಿಸಿದ್ದೇನೆ. ಆದರೆ ಅಂಥ ಯಾವುದೇ ಕಾರಣ ಇದೆಯೆಂದು ನನಗೆ ಕಂಡುಬರಲಿಲ್ಲವೆಂಬುದನ್ನು ವಿಷಾದದಿಂದ ಹೇಳಬೇಕಾಗಿದೆ. ಭಾರತದ ಇತರ ಭಾಗಗಳಲ್ಲಿ ಇಂಥದೊಂದು ಕಾನೂನು ಇದೆ ಎಂಬುದು ಇದಕ್ಕೆ ಸಮರ್ಥನೆಯಾಗಲಾರದು. ಬೇರೆಡೆಗಳಲ್ಲಿ ಇರುವ ಪರಿಸ್ಥಿತಿ ಭಿನ್ನ. ಮೈಸೂರಿಗೆ ಸಂಬಂಧಪಡುವಷ್ಟರ ಮಟ್ಟಿಗೆ ಹೇಳುವುದಾದರೆ ಇಲ್ಲಿ ಯಾವುದೇ ಬೃಹತ್ ಪ್ರಮಾಣದ ಅನೈತಿಕ ವ್ಯವಹಾರ ಚಟುವಟಿಕೆ ನಡೆಯುತ್ತಿದೆಯೆಂದು ನನಗನ್ನಿಸುವುದಿಲ್ಲ. ನಾನು ಜನಗಣತಿಯ ಅಂಕಿಅಂಶಗಳನ್ನು ಗಮನಿಸಿದ್ದು ಅದರಲ್ಲಿ ನೀಡಿರುವ ಅಂಕಿಅಂಶಗಳು ಈ ಮುಂದಿನಂತಿವೆ:

ಬೆಂಗಳೂರಿನ ಸಿವಿಲ್ ಮತ್ತು ಮಿಲಿಟರಿ ಸ್ಟೇಷನ್ನೂ ಸೇರಿದಂತೆ ಇಡೀ ಮೈಸೂರು ರಾಜ್ಯಕ್ಕೆ ಸಂಬಂಧಿಸಿದ ಅಂಕಿ ಅಂಶ ಇಂತಿವೆ. ತಲೆಹಿಡುಕರು ಮತ್ತು ವೇಶ್ಯೆಯರು –1995

| | | |
|---|---|---|
| ಬೆಂಗಳೂರು ನಗರದಲ್ಲಿ | – | 74 |
| ಮೈಸೂರು ನಗರ | – | 57 |

(ಜನಗಣತಿ ವರದಿ, ಸಂಪುಟ–11, ಕೋಷ್ಟಕ–xನ್ನು ನೋಡಿ). ಕೋಲಾರ ಚಿನ್ನದಗಣಿ ಪ್ರದೇಶಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ ಜನಗಣತಿ ವರದಿಯಿಂದ ಯಾವುದೇ ತಲೆಹಿಡುಕಿಯರಾಗಲೀ ಅಥವಾ ವೇಶ್ಯೆಯರಾಗಲೀ ಇಲ್ಲವೆಂದು ತಿಳಿಯುತ್ತದೆ. ಅಗೇ ರೀತಿ ಬೆಂಗಳೂರು ಸಿವಿಲ್ ಮತ್ತು ಮಿಲಿಟರ್ ಸ್ಟೇಷನ್‌ನಲ್ಲಿ ಸಹ ಇದೇ ಪರಿಸ್ಥಿತಿಯಿದೆ.

**ಶ್ರೀಯುತ ಕೆ. ಮ್ಯಾಥನ್.–** ಅವರು ಹಾಗೆ ಅಧಿಕೃತವಾಗಿ ತಿಳಿಸಿದ್ದಾರೆಂದು ನಿಮ್ಮ ಅಭಿಪ್ರಾಯವೇ?

**ಶ್ರೀಯುತ ಡಿ.ವಿ.ಗುಂಡಪ್ಪ .–** ಜನಗಣತಿ ಕಾರ್ಯಾಚರಣೆಯ ಅಧೀಕ್ಷಕರೇ ಈ ಅಂಕಿಅಂಶಗಳ ನಿಖರತೆಯು ಸಂದೇಹಾತ್ಮಕವಾದುದೆಂದು ಹೇಳಿದ್ದಾರೆ. ಆದ್ದರಿಂದ ನಾವು ಜನಗಣತಿ ಅಧೀಕ್ಷಕರು ಒದಗಿಸಿರುವ ಅಂಕಿಅಂಶಗಳು ಸಮರ್ಪಕವಾಗಿವೆಯೆಂದು ತೆಗೆದುಕೊಳ್ಳಲು, ಯಾವುದೇ ಕಾರಣ ಕಂಡುಬರುವುದಿಲ್ಲ. ಈ ಶಾಸನವು ಅನೈತಿಕ ವ್ಯವಹಾರವನ್ನು ತೊಡೆದುಹಾಕುವುದಕ್ಕಾಗಿ ರಚಿತವಾಗಿದೆ. ತಮ್ಮನ್ನು ತಾವೇ ತಲೆಹಿಡುಕರು ಮತ್ತು ವೇಶ್ಯೆಯರೆಂದು ಹೇಳಿಕೊಂಡಿರುವವರು ಈ ವೃತ್ತಿಗೆ ಸೇರಿದವರೆಂದು ತಿಳಿದಿದ್ದೇನೆ. ಭಾರತದಲ್ಲಿ ದುರದೃಷ್ಟವಶಾತ್ ರಾಮಾಯಣದ ಕಾಲದಿಂದಲೂ ದೇವದಾಸಿ ವೃತ್ತಿ ಅಥವಾ ವೇಶ್ಯಾವೃತ್ತಿ ಎಂದು ಕರೆಯುವಂಥ ಈ ವೃತ್ತಿಯು ಅಸ್ತಿತ್ವದಲ್ಲಿದೆಯೆಂಬುದು ಸರ್ವವಿಧಿತ ಹಾಗೂ ಇದನ್ನು ಒಂದು ಗೌರವಾರ್ಹವಾದ ವೃತ್ತಿಗಳ ಪೈಕಿ ಒಂದು ವೃತ್ತಿಯೆಂದು ಪರಿಗಣಿಸಲಾಗಿತ್ತು. ಆಧುನಿಕ ದೃಷ್ಟಿಯಲ್ಲಿ ವೇಶ್ಯಾವೃತ್ತಿಯನ್ನು ವೃತ್ತಿಯೆಂದು ಪರಿಗಣಿಸುವುದು ಅಸಂಗತವಾದುದಾದರೂ ಸಹ, ನಾವು ಪ್ರಾಚೀನ ಸಂಸ್ಥೆಗಳನ್ನು ನಮ್ಮ ಆಧುನಿಕ ದೃಷ್ಟಿಕೋನದ ಮುಖಾಂತರ ನಿರ್ಧರಿಸಬಾರದು. ಇದು ಸಾಧುವೆಂದು ನಾನು ಭಾವಿಸುವುದಿಲ್ಲ. ಐತಿಹಾಸಿಕ ಪರಿಗಣನೆಯನ್ನು ಹೊರತುಪಡಿಸಿದರೂ ಸಹ ಕಾನೂನು ರಚಿಸುವುದಕ್ಕಾಗಿ ಈ ಸಂಖ್ಯೆ ಏನೇನೂ ಸಾಲದು ಎಂಬುದು ನನ್ನ ಭಾವನೆ. ಚರ್ಚೆಗಾಗಿ ನಾವು, ಈ ಅಂಶಗಳು ಸಮರ್ಪಕವಾದವುಗಳಲ್ಲ ಮತ್ತು ಇಂಥ ಸಂಖ್ಯೆ ಸಹ ಬಹು ದೊಡ್ಡ ಪ್ರಮಾಣದಲ್ಲಿರುತ್ತದೆಯೆಂದು ಭಾವಿಸೋಣ. ಹಾಗಾದರೆ ಅದು ಎಷ್ಟು ದೊಡ್ಡದಿರಬಹುದು? ಸದನದ ಮುಂದೆ ಪ್ರಸ್ತಾವವನ್ನು ಮಂಡಿಸಿದವರು ಈ ಅಂಕಿ ಅಂಶ ಸಂಗ್ರಹಿಸುವುದಕ್ಕಾಗಿ ಪ್ರಯತ್ನಪಟ್ಟಿದ್ದಾರೆಯೇ? ಅವರು ವಕ್ತಾರರಾಗಿರುವಂಥ ಸಂಸ್ಥೆಯು (ಅಂಥ ಯಾವುದೇ ಸಂಸ್ಥೆ ಇದ್ದರೆ) ಯಾವುದೇ ತನಿಖೆ ನಡೆಸಿದೆಯೇ? ಅದರ ವ್ಯಾಪ್ತಿಯ ಬಗ್ಗೆ ಅವರಿಗೆ ಅರಿವಿದೆಯೇ?

**ಶ್ರೀಯುತ ಡಿ.ಹೆಚ್.ಚಂದ್ರಶೇಖರಯ್ಯ.**– ನೀವು ನೈತಿಕ ಮತ್ತು ಸಾಮಾಜಿಕ ನೈರ್ಮಲ್ಯ ಪರಿಷತ್ತಿನ ವರದಿಯನ್ನು ದಯವಿಟ್ಟು ಓದಿ.

**ಶ್ರೀಯುತ ಮುತ್ತನ್.**– ಆದರೆ ಸದಸ್ಯರಿಗೆ ಯಾವುದೇ ಅಡಚಣೆಯುಂಟಾಗದಂತೆ ಮುಂದುವರಿಯಲು ಅವಕಾಶ ಕೊಡಿ.

**ಶ್ರೀಯುತ ಡಿ.ವಿ. ಗುಂಡಪ್ಪ.**– ನಾನು ಪ್ರಸ್ತಾವವನ್ನು ಮಂಡಿಸಿದವರಿಂದ ಮಾಹಿತಿಯನ್ನು ನಿರೀಕ್ಷಿಸುತ್ತೇನೆ. ಎಲ್ಲಾ ಅಗತ್ಯ ಅಂಕಿಅಂಶ ಮತ್ತು ಅಗತ್ಯ ವಿಷಯಗಳನ್ನು ಪ್ರಸ್ತಾವವನ್ನು ಮಂಡಿಸಿದವರು ಒದಗಿಸಬೇಕು. ಅವರು ಅದನ್ನು ಮಾಡದಿರುವುದರಿಂದ ದಸ್ತಾವೇಜುಗಳನ್ನು ನಾನೇ ಖುದ್ದಾಗಿ ಓದುತ್ತೇನೆ. ಈ ಮಧ್ಯೆ ಪ್ರಕರಣ ಸಮರ್ಥನೀಯವಲ್ಲವೆಂದೇ ನಾನು ಹೇಳುತ್ತೇನೆ.

ವಾದಕ್ಕಾಗಿ, ಜನಗಣತಿ ವರದಿಯಲ್ಲಿ ತೋರಿಸಲಾಗಿರುವುದಕ್ಕಿಂತ ಹೆಚ್ಚಾಗಿ ದುರ್ವ್ಯವಹಾರಗಳಿವೆಯೆಂದು ನಾವು ಭಾವಿಸೋಣ. ಅಂಥ ಸಂದರ್ಭದಲ್ಲಿ ಕಾನೂನಿನಲ್ಲಿ ಸೂಚಿಸಲಾದ ಪರಿಹಾರ ಕ್ರಮಗಳು ಸಾಕಷ್ಟಿಲ್ಲವೆಂದು ನನಗೆ ಕಂಡುಬರುತ್ತದೆ. ಉದಾಹರಣೆಗೆ ರಕ್ಷಣಾಲಯಗಳ ಬಗ್ಗೆ ಕೇವಲ ಉಲ್ಲೇಖವಿದೆ. ರಕ್ಷಣಾಲಯಗಳೇ ಎಲ್ಲವೂ ಅಲ್ಲ. ಅಲ್ಲದೆ ರಕ್ಷಣಾಲಯಗಳ ಬಗ್ಗೆ ಮಾಡಿರುವ ಉಪಬಂಧಗಳೂ ಸಹ ಯುಕ್ತವಾಗಿಲ್ಲ. ಅವರು ಪ್ರತಿಯೊಬ್ಬರನ್ನೂ ರಕ್ಷಣಾಲಯಗಳಲ್ಲಿ ಇಡಲು ಸಾಧ್ಯವಿಲ್ಲ. ತಲೆಹಿಡುಕಳಾಗಿರುವ ಅಥವಾ ವೇಶ್ಯೆಯಾಗಿರುವ ಒಬ್ಬ ಮಹಿಳೆಯನ್ನು ಎಷ್ಟು ದಿನ ರಕ್ಷಣಾಲಯದಲ್ಲಿಡಲು ಸಾಧ್ಯ?

**ಶ್ರೀಯುತ ಟಿ. ರಾಮಚಂದ್ರ .**– ಚಿಕಿತ್ಸೆಯ ತರುವಾಯ ಸಾಮಾನ್ಯವಾಗಿ ಅವರನ್ನು ಮನೆಗಳಿಗೆ ಕಳುಹಿಸಲಾಗುತ್ತದೆ ಅಥವಾ ಯಾರಿಗಾದರೂ ಮದುವೆ ಮಾಡಿಕೊಡಲಾಗುತ್ತದೆ.

**ಶ್ರೀಯುತ ಡಿ.ವಿ.ಗುಂಡಪ್ಪ.**– ಅವರನ್ನು ಯಾರು ಮದುವೆಯಾಗುತ್ತಾರೆ? ಈ ಪ್ರಸ್ತಾವವನ್ನು ಮಂಡಿಸಿದವರು ಈ ಎಲ್ಲಾ ಅಂಶಗಳನ್ನು ಟಿಪ್ಪಣಿ ಮಾಡಿಕೊಂಡು, ಉತ್ತರಿಸಬೇಕಾದ ಸಮಯದಲ್ಲಿ ಇವುಗಳಿಗೆ ಉತ್ತರಿಸುತ್ತಾರೆಂದು ಭಾವಿಸುತ್ತೇನೆ. ಈ ಮಧ್ಯೆ, ಈ ವಿಷಯವನ್ನು ಚರ್ಚಿಸಲು ನನಗೆ ಅವಕಾಶ ನೀಡಬೇಕು. ಪ್ರಸ್ತಾವಿತ ಈ ಕಾನೂನಿನಲ್ಲಿ, ಮದುವೆ ವಯಸ್ಸು ಮೀರಿರುವ ತಲೆಹಿಡುಕಿಯರ ಬಗ್ಗೆ ಯಾವ ಪರಿಹಾರವನ್ನು ಸೂಚಿಸುತ್ತದೆ ಎಂಬುದು ಸ್ಪಷ್ಟವಿಲ್ಲ ಮತ್ತು ಈ ನಿಯಮದ ಉಪಬಂಧಗಳ ಮೂಲಕ ಅವರ ಈ ಕೆಲಸವನ್ನು ಕೊನೆಗಾಣಿಸುವುದು

ಸಾಧ್ಯವಿಲ್ಲ. ಅಂಥಹವರನ್ನು ಏನು ಮಾಡಬೇಕೆಂಬ ಬಗ್ಗೆ ಈ ಪ್ರಸ್ತಾವ ಮಂಡಿಸುವವರು ಸೂಚಿಸುತ್ತಾರೆಯೇ?

**ಶ್ರೀಯುತ ಡಿ.ಎಸ್. ಮಲ್ಲಪ್ಪ.**– ಅವರನ್ನು ರಕ್ಷಣಾಲಯಗಳಲ್ಲಿ ಇಡುವುದು ಸಾಧ್ಯವಿಲ್ಲ.

**ಶ್ರೀಯುತ ಡಿ.ವಿ.ಗುಂಡಪ್ಪ.**– ಅವರು ಅವರ ವೃತ್ತಿಯನ್ನು ಅನುಸರಿಸುತ್ತಾರೆ ಮತ್ತು ಅದು ಅವರಿಗೆ ಜೀವನೋಪಾಯವಾಗಿರುತ್ತದೆ. ನಂತರ ನಮ್ಮ ಗೆಳೆಯರು ಆ ನಂತರ ಅವರಿಗೆ ಒಂದು ವೃತ್ತಿಯನ್ನು ಕಲ್ಪಿಸಬೇಕು. ರಕ್ಷಣಾಲಯಗಳು ಅವರಿಗೆ ಜೀವನೋಪಾಯವಾಗದಿದ್ದರೆ ಬೇರೆ ರೀತಿಯಲ್ಲಿ ಏನನ್ನು ನೀಡುತ್ತಾರೆ?

ನಾನು ಒತ್ತು ನೀಡಲಿಚ್ಛಿಸುವ ಮತ್ತೊಂದು ಪ್ರಮುಖ ಅಂಶವೆಂದರೆ, ಮೊದಲು ರಕ್ಷಣಾಲಯಗಳನ್ನು ತೆರೆಯಬೇಕು. ಆ ನಂತರ ಕಾನೂನನ್ನು ಜಾರಿಗೊಳಿಸಬೇಕು. ಆದರೆ ಇಲ್ಲಿ ತಿರುವುಮುರುವಾಗಿದೆ. ರಕ್ಷಣಾಲಯಗಳಿಗೆ ಸಂಬಂಧಿಸಿದಂತೆ ದಿನಪತ್ರಿಕೆಗಳಲ್ಲಿ ಕೆಲವು ವಿಷಯಗಳನ್ನು ಓದಿದ್ದೇನೆ. ಕೆಲವು ದಿನಗಳ ಹಿಂದೆ, ತಿನ್ನವೆಲ್ಲಿಯ ಮುನಿಸಿಪಲ್ ಕೌನ್ಸಿಲ್ಲು ಮುನಿಸಿಪಲ್ ಪ್ರದೇಶದೊಳಗೆ ಮದ್ರಾಸ್‌ನಲ್ಲಿ ಅನೈತಿಕ ವ್ಯವಹಾರ ನಿರ್ಬಂಧ ಅಧಿನಿಯಮವನ್ನು ಹೊರಡಿಸುವ ನಿರ್ಣಯ ಕೈಗೊಂಡಿತ್ತು. ಈ ಬಗ್ಗೆ ತಿನ್ನವೆಲ್ಲಿಯ ಜಿಲ್ಲಾ ಮ್ಯಾಜಿಸ್ಟ್ರೇಟನು ಕೌನ್ಸಿಲ್ಲು ರಕ್ಷಣಾಲಯಗಳನ್ನು ಒದಗಿಸಲು ಸಿದ್ಧವಿದೆಯೇ? ಮತ್ತು ಈ ಉದ್ದೇಶಕ್ಕಾಗಿ ನಿಧಿಗಳು ಲಭ್ಯವಿದೆಯೇ ಎಂದು ಕೇಳಿದ್ದರು. ತದನಂತರ ಮುನಿಸಿಪಲ್ ಕೌನ್ಸಿಲ್ಲು ತನ್ನ ಮುಂಚಿನ ನಿರ್ಣಯವನ್ನು ಹಿಂತೆಗೆದುಕೊಂಡಿತ್ತು. ತಿನ್ನವೆಲ್ಲಿಯಲ್ಲಿ ಆದದ್ದು ಇದು. ಅದರಿಂದ ಈ ಶೀರ್ಷಿಕೆಯುಡಿಯು ಈ ಕಾನೂನು ತುಂಬಾ ದೋಷಪೂರ್ಣವಾಗಿದೆಯೆಂದು ನನಗೆ ಕಂಡುಬರುತ್ತದೆ. ಇದು ನನ್ನ ಮೊದಲ ಆಕ್ಷೇಪಣೆ.

ನಂತರ, ಇದು ಸಾರ್ವಜನಿಕ ಆದಾಯಕ್ಕೆ ಹೊರೆಯನ್ನುಂಟು ಮಾಡುತ್ತದೆ. ಇದು ಮೂರು ವಿಭಿನ್ನ ರೀತಿಗಳಲ್ಲಿ ಸರ್ಕಾರದ ಸೇವೆಯನ್ನು ಕೋರುತ್ತದೆ: ............ ಸರ್ಕಾರ ರಕ್ಷಣಾಲಯಗಳನ್ನು ಒದಗಿಸಬೇಕು; ಎರಡನೆಯದಾಗಿ ಈ ವಿಧಿನಿಯಮದ ಉಪಬಂಧಗಳನ್ನು ಜಾರಿಗೆ ತರುವ ಉದ್ದೇಶಕ್ಕಾಗಿ ಪೊಲೀಸು ಸೇವೆಗಳನ್ನು ಸರ್ಕಾರ ಒದಗಿಸಬೇಕಾಗುತ್ತದೆ; ಮತ್ತು ಮೂರನೆಯದಾಗಿ ಮ್ಯಾಜಿಸ್ಟ್ರೇಟುಗಳ ನೆರವನ್ನು ಸರ್ಕಾರ ನೀಡಬೇಕಾಗುತ್ತದೆ. ಈ ವಿಧೇಯಕದ

ಕ್ರಮಗಳ ಕಾನೂನು ಸಮ್ಮತತೆಯನ್ನು ನಾನು ಪ್ರಶ್ನಿಸುತ್ತಿಲ್ಲ. ಈ ವಿಧೇಯಕ ಸಾರ್ವಜನಿಕ ಆದಾಯದ ಮೇಲೆ ಹೊರೆಯನ್ನುಂಟು ಮಾಡುವುದೆಂಬ ವಿಷಯದ ಮಹತ್ವವನ್ನು ಮಾತ್ರ ಅರುಹುತ್ತಿದ್ದೇನೆ. ಇದು ನನ್ನ ಎರಡನೇ ಆಕ್ಷೇಪಣೆ. ಸಾರ್ವಜನಿಕ ಆದಾಯದ ಮೇಲೆ ಹೆಚ್ಚಿನ, ಹೊಸ ಹೊರೆಯನ್ನು ಉಂಟುಮಾಡುವುದನ್ನು ಸಮರ್ಥಿಸುವಷ್ಟು ಈ ಪಿಡುಗು ದೊಡ್ಡದಲ್ಲವೆಂದು ಅಥವಾ ಅಪಾಯಕಾರಿಯಲ್ಲವೆಂದು ಮತ್ತು ಗಂಭೀರವಾದುದಲ್ಲವೆಂದು ಹೇಳಲು ನಾನು ಇಚ್ಛಿಸುತ್ತೇನೆ.

**(ಈ ಮಸೂದೆಯ ಬಗೆಗಿನ ಚರ್ಚೆಯು 19-12-1935 ರಿಂದ ಪುನಃ ನಡೆದು ಅಂತಿಮವಾಗಿ ಮಸೂದೆಯ ಆಯ್ಕೆ ಸಮಿತಿಗೆ ಸಲ್ಲಿಸಲ್ಪಟ್ಟಿತು. ಶ್ರೀಯುತ ಡಿ.ವಿ. ಗುಂಡಪ್ಪನವರು ಈ ಆಯ್ಕೆ ಸಮಿತಿಯ ಸದಸ್ಯರಲ್ಲಿ ಒಬ್ಬರಾಗಿದ್ದರು.)**

**ಶ್ರೀಯುತ ಡಿ.ವಿ.ಗುಂಡಪ್ಪ:**– ಈ ವಿಧೇಯಕದ ಮೇಲಿನ ಚರ್ಚಾ ಸಮಯದಲ್ಲಿ ಭಾಷೆಯನ್ನು ಹೆಚ್ಚು ಕ್ರೋಧದಿಂದ ಬಳಸಲಾಗಿದೆ. ಮಹನೀಯರು ನಮ್ಮ ನೈತಿಕ ಪ್ರಜ್ಞೆ, ಮಾನವೀಯ ಪ್ರಜ್ಞೆ, ಸಭ್ಯತೆ ಇತ್ಯಾದಿಗಳ ಬಗ್ಗೆ ಗಮನ ಸೆಳೆದಿದ್ದಾರೆ. ಆದರೂ, ಈ ರೀತಿಯ ಎಲ್ಲ ಮನವಿಗಳು ಕೇವಲ ವಿಶ್ವಾಸವನ್ನು ಗಳಿಸುವ ಪ್ರಯತ್ನಗಳಾಗಿವೆ. ಸಾರ್ವಜನಿಕ ನೈತಿಕತೆಯ ಅತ್ಯುನ್ನತ ಗುಣಮಟ್ಟವನ್ನು ಮತ್ತು ಸಾರ್ವಜನಿಕರ ಜೀವನದಲ್ಲಿ ಕಳಂಕರಹಿತವೆನ್ನುವಂಥ ನಡತೆಯನ್ನು ಅಳವಡಿಸುವುದಕ್ಕೆ ಅಗತ್ಯವಾದ ಎಲ್ಲ ಪ್ರಯತ್ನಗಳನ್ನು ಮಾಡಬೇಕೆಂಬುದನ್ನು ಇಲ್ಲಿ ಸೇರಿರುವ ನಾವೆಲ್ಲರೂ ಒಪ್ಪುತ್ತೇವೆ. ಈ ಸದನದಲ್ಲಿ ಅವುಗಳನ್ನೆಲ್ಲಾ ಪ್ರಚಾರ ಮಾಡುವ ಅವಶ್ಯಕತೆ ಇಲ್ಲವೆಂದು ನಾನು ಭಾವಿಸುತ್ತೇನೆ. ಅಲ್ಲದೆ, ತಮ್ಮನ್ನು ವಿರೋಧಿಸಿದವರ ಸಂಬಂಧದಲ್ಲಿ ಕೆಲವರು ಕೋಪವನ್ನು ವ್ಯಕ್ತಪಡಿಸಿದ್ದಾರೆ. ವಾಸ್ತವಾಂಶಗಳನ್ನು ಅಧ್ಯಯನ ಮಾಡಿಲ್ಲ, ವರದಿಗಳನ್ನು ಸರಿಯಾಗಿ ಗಮನಿಸಿಲ್ಲ, ಚರ್ಚೆಗಳಲ್ಲಿ ಭಾಗವಹಿಸಿಲ್ಲ ಎಂಬ ಮುಂತಾದ ಅಭಿಪ್ರಾಯಗಳನ್ನು ವ್ಯಕ್ತಪಡಿಸಲಾಗಿದೆ. ನಾವೆಲ್ಲರೂ ಇಲ್ಲಿ ನಮ್ಮ ಜವಾಬ್ದಾರಿಯನ್ನರಿತು, ನಮ್ಮ ಸ್ವಂತ ದೃಷ್ಟಿಕೋನಗಳ ಅನುಸಾರವಾಗಿ ನಮ್ಮ ಕೆಲಸ ಮಾಡಲು ಪ್ರಯತ್ನಿಸುತ್ತಿದ್ದೇವೆ. ಈ ಬಗೆಗಿನ ವಿವರಗಳನ್ನು ತಿಳಿದುಕೊಂಡಿಲ್ಲ ಅಥವ ಅದಕ್ಕೆ ಸಂಬಂಧಪಟ್ಟ ಅಂಶಗಳಿಗೆ ಉದ್ದೇಶಪೂರ್ವಕವಾಗಿ ಗಮನ ಕೊಡುತ್ತಿಲ್ಲ ಎಂದು ಇತರರ ಮೇಲೆ ಆರೋಪ ಹೊರಿಸುವುದು ಸಮಂಜಸವಲ್ಲ ಮತ್ತು ಅದನ್ನು ನಾವು ಒಪ್ಪುವುದಿಲ್ಲ.

ಈ ಪ್ರಾರಂಭಿಕ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ ನಂತರ ಮುಕ್ತ ಮನಸ್ಸುಳ್ಳ ವ್ಯಕ್ತಿಗಳಲ್ಲಿ ನಾನೂ ಒಬ್ಬನಾಗಿದ್ದೇನೆ ಎಂದು ಹೇಳಲಿಚ್ಛಿಸುತ್ತೇನೆ. ತಮ್ಮ ವಾದಗಳಿಗೆ ಅಥವಾ ಹೊಸ ವಿಚಾರಗಳಿಗೆ ನಾನು ಸಂಪೂರ್ಣವಾಗಿ ಕಿವಿಗೊಡುವುದಿಲ್ಲವೆಂದು ಸದಸ್ಯರು ಭಾವಿಸಿಲ್ಲವೆಂದು ನಾನು ತಿಳಿದಿದ್ದೇನೆ. ಆದರೆ, ಸ್ಪಷ್ಟವಾಗಿ ಹೇಳುವುದಾದರೆ, ಈ ಕ್ರಮದ ಬಗ್ಗೆ ಕಳೆದ ಸಂದರ್ಭದಿಂದಲೂ ಕೇಳಿದ ಭಾಷಣಗಳಿಗಿಂತ ಭಿನ್ನವಾದ ಮತ್ತು ವಿಧೇಯಕವನ್ನು ಸಮರ್ಥಿಸುವ ಯಾವುದೇ ಹೊಸ ಚರ್ಚೆ ಅಥವಾ ಮಾಹಿತಿಯು ಭಾಷಣಗಳಲ್ಲಿರುವುದನ್ನು ನಾನು ಕೇಳಲಿಲ್ಲ.

**ಶ್ರೀಯುತ ಎಂ. ರಾಮಚಂದ್ರರಾವ್ ಸಿಂದಿಯ–** ನೀವು ಯಾವ ಮಾಹಿತಿಯನ್ನು ಬಯಸುತ್ತೀರಾ?

ಶ್ರೀಯುತ **ಡಿ.ವಿ.ಗುಂಡಪ್ಪ–** ನನ್ನ ಗೌರವಾನ್ವಿತ ಹಿರಿಯರಾದ ರಾವ್ ಬಹದ್ದೂರ್ ಗರುಡಾಚಾರ್, ಖಾನ್ ಬಹುದ್ದೂರ್ ಅಬ್ಬಾಸ್ ಖಾನ್ ಮತ್ತು ದಿವಾನ್ ಬಹುದ್ದೂರ್ ಕೆ.ಆರ್.ಶ್ರೀನಿವಾಸ ಐಯ್ಯಂಗಾರ್‌ರು ಈ ವಿಧದ ಶಾಸನ ಕ್ರಮವನ್ನು ಅಗತ್ಯಪಡಿಸುವ ಅಂಶಗಳ ಬಗ್ಗೆ ಮಾಹಿತಿ ನೀಡಿಲ್ಲವೆಂದು ವಿಷಾದ ವ್ಯಕ್ತಪಡಿಸಿದ್ದಾರೆ. ಅಂಥ ಮಾಹಿತಿ ಮೊದಲಿಗೆ ಅಗತ್ಯವಿದೆ. ವೇಶ್ಯಾವೃತ್ತಿ ಇಲ್ಲ ಎಂಬುದನ್ನು ಯಾರೂ ಹೇಳಲಿಲ್ಲ ಅಥವಾ ಖಚಿತವಾಗಿ ಮತ್ತು ವೈಜ್ಞಾನಿಕವಾಗಿ ಹೇಳಬೇಕೆಂದರೆ ಸರ್ಕಾರಿ ಭಾಷೆಯನ್ನು ಅಳವಡಿಸಿಕೊಳ್ಳಬೇಕು ಎಂದರೆ ಆ ಬಗ್ಗೆ ಮಾಹಿತಿ ಇಲ್ಲ ಎಂದು ಹೇಳಬೇಕು. ಇಲ್ಲಿ ಮಾಹಿತಿಯನ್ನೇನಾದರೂ ಒದಗಿಸಿದ್ದರೆ, ಅದು ಖಾಸಗಿ ಮಹನೀಯರು ಮತ್ತು ಮಹಿಳೆಯರ ಸಂಸ್ಥೆ ಒದಗಿಸಿದ ಮಾಹಿತಿ ಎನ್ನುತ್ತಾರೆ. ನಾನು ಅವರ ಮಾತುಗಳನ್ನು ಗಂಭೀರವಾಗಿ ತೆಗೆದುಕೊಳ್ಳಲು ಸಿದ್ಧನಿಲ್ಲ. ಈ ವಿಷಯವನ್ನು ಗಂಭೀರವಾಗಿ ಪರಿಗಣಿಸಿ ಆ ಬಗ್ಗೆ ತನಿಖೆ ನಡೆಸುವ ತೊಂದರೆಯನ್ನು ತೆಗೆದುಕೊಂಡಿರುವುದಕ್ಕೆ ನಾನು ಅವರನ್ನು ಅಭಿನಂದಿಸುತ್ತೇನೆ. ಆದರೆ ಅವರು ಒದಗಿಸಿರುವ ಮಾಹಿತಿಯನ್ನು ಖಚಿತವಾದುದೆಂದು ಮತ್ತು ದೋಷಾತೀತವಾದುದೆಂದು ಪರಿಗಣಿಸಲು ಸಾಧ್ಯವಿಲ್ಲ. ಯಾರೂ ಸಂಗ್ರಹಿಸಲು ಸಾಧ್ಯವಾದ ಖಚಿತವಾದ ಹಾಗೂ ಸಂಪೂರ್ಣ ಮಾಹಿತಿಯನ್ನು ಹೊಂದಲು ನಾವು ಬಯಸುತ್ತೇವೆ. ಈ ತೆರನಾದ ವಿಷಯದ ಮೇಲಿನ ಮಾಹಿತಿಯನ್ನು ಸರ್ಕಾರದ ಏಜೆನ್ಸಿ ಮೂಲಕ ಮಾತ್ರ ಪಡೆಯಬಹುದು. ಸರ್ಕಾರ ಅಥವಾ ಪುರಸಭೆಗಳಂಥ ಸರ್ಕಾರದ ಏಜೆನ್ಸಿಗಳು ಇಂಥ ಒಂದು ವಿಚಾರಣೆ ಆರಂಭಿಸಬಹುದು. ತುಂಬಾ ಔಚಿತ್ಯಪೂರ್ಣವಾಗಿ, ದಿವಾನ್ ಬಹದ್ದೂರ್

ಕೆ.ಆರ್.ಶ್ರೀನಿವಾಸ ಐಯ್ಯಂಗಾರರು ನಿನ್ನೆಯ ದಿನ ಈ ವಿಷಯದಲ್ಲಿ, ಪ್ರಜೆಗಳ ಕಲ್ಯಾಣಕ್ಕಾಗಿ ಒಂದು ಜವಾಬ್ದಾರಿಯುತ ನಿಕಾಯವಾಗಿ ರಾಜ್ಯದಲ್ಲಿನ ಯಾವುದೇ ಪ್ರಮುಖ ಪುರಸಭೆ ಈ ವಿಷಯದಲ್ಲಿ ಯಾವುದೇ ಆಸಕ್ತಿ ತೆಗೆದುಕೊಂಡಿದೆಯೇ? ಅಥವಾ ಇಂಥದೊಂದು ಪಿಡುಗು ಇರುವುದರಿಂದಾಗಿ ಕ್ಷೋಭೆಗೊಂಡಿದೆಯೇ ಅಥವಾ ಈ ಪಿಡುಗಿನ ಬಗ್ಗೆ ಯಾವುದೇ ಕಳಕಳಿಯನ್ನು ವ್ಯಕ್ತಪಡಿಸಿದೆಯೇ ಎಂದು ಪ್ರಶ್ನಿಸಿದರು. ನನಗಿರುವ ಮಾಹಿತಿಯ ಪ್ರಕಾರ, ಯಾವುದೇ ಪುರಸಭೆ ಅಥವಾ ಯಾವುದೇ ಇತರೆ ಜವಾಬ್ದಾರಿಯುತ ಸಾರ್ವಜನಿಕ ಸಂಸ್ಥೆಯೂ ಈ ವಿಷಯದ ಬಗ್ಗೆ ಕಾಳಜಿ ತೋರಿಸಿಲ್ಲ. ಈ ಪಿಡುಗು ಅತ್ಯಂತ ತೀವ್ರವಾಗಿದ್ದರೆ ಪ್ರಸ್ತಾವವನ್ನು ಮಂಡಿಸಿದ ಮಾನ್ಯರು ಬಳಸಿದ ಪದ 'ತೀವ್ರ'- (ರ್‍ಯಾಂಪೆಂಟ್) ನಾವೆಲ್ಲರೂ ಆ ಬಗ್ಗೆ ಗಮನಹರಿಸಿಯೇ ಇಲ್ಲವಲ್ಲ ಹೇಗೆ? ಮತ್ತು ಇಪ್ಪತ್ತು ಮಹನೀಯರ ಮತ್ತು ಮಹಿಳೆಯರ ಮಂಡಲಿಗೆ ಬಿಟ್ಟು ಅವರು ಆ ಬಗ್ಗೆ ಒತ್ತುಕೊಟ್ಟು ನಮ್ಮ ಗಮನ ಸೆಳೆಯುವಂತೆ ಪ್ರತಿಯೊಬ್ಬರೂ ಅದನ್ನು ನಿರ್ಲಕ್ಷಿಸಿದ್ದು ಹೇಗೆ ? ಇಡೀ ರಾಜ್ಯದಲ್ಲಿರುವ ಎಲ್ಲ ಪುರಸಭೆಗಳು ಇದರ ಬಗ್ಗೆ ಹೇಗೆ ಗಮನ ಹರಿಸಿಲ್ಲ? ಈ ವಿಷಯ ತನಿಖೆಯಾಗಬೇಕೆಂದು ನನಗೆ ತೋರುತ್ತಿದೆ. ಇದೊಂದು ಸಾಬೀತಾದ ವಿಷಯುವೆಂದು ನಾನು ಭಾವಿಸುವುದಿಲ್ಲ. ಇಂಥ ವಿಧೇಯುಕದ ಅವಶ್ಯಕತೆಯಿದೆಯೆಂಬುದನ್ನು ಸಾಬೀತುಪಡಿಸಲಾಗಿಲ್ಲ.

**ಶ್ರೀಯುತ ಡಿ.ಹೆಚ್. ಚಂದ್ರಶೇಖರಯ್ಯ** – ನಾನು ಪ್ರಸ್ತಾಪ ಮಾಡಿದ ಅಂಶಗಳ ಬಗ್ಗೆ ಏನು ಹೇಳುತ್ತೀರಿ?

**ಶ್ರೀಯುತ ಡಿ.ವಿ.ಗುಂಡಪ್ಪ** – ಅದನ್ನು ತಿಳಿದು ನನಗೆ ಸಂತೋಷವಾಗಿದೆ. ಈ ವಿಧೇಯಕವು ಆ ವೇಶ್ಯಾವಾಟಿಕೆಗಳನ್ನು ಎಲ್ಲಿದ್ದರಲ್ಲೇ ಅವುಗಳ ತನಿಖೆ ನಡೆಸಬೇಕೆಂದು ಮತ್ತು ಅಲ್ಲಿಗೆ ಭೇಟಿ ನೀಡುವವರಿಗೆ ಗುಹ್ಯರೋಗದ ಸೋಂಕಿನ ವಿರುದ್ಧ ರಕ್ಷಣೆ ನೀಡಬೇಕೆಂದು ತಿಳಿಸುವುದಿಲ್ಲ. ಅದರ ಉದ್ದೇಶ ಇದಲ್ಲ.

**ಶ್ರೀಯುತ ಡಿ.ಹೆಚ್. ಚಂದ್ರಶೇಖರಯ್ಯ** – ನಾನು ಈ ಗುಹ್ಯ ಸೋಂಕು ರೋಗ ಮತ್ತು ಇದರ ನಡುವೆ ಇರುವ ಸಂಬಂಧದ ಬಗ್ಗೆ ನನ್ನ ಸ್ನೇಹಿತರಿಗೆ ಒಂದು ಉದಾಹರಣೆ ಹೇಳಲು ಇಚ್ಚಿಸುತ್ತೇನೆ.

**ಶ್ರೀಯುತ ಡಿ.ವಿ.ಗುಂಡಪ್ಪ** – ಅಲ್ಲಿಗೇ ಬರುತ್ತಿದ್ದೇನೆ...ಇದು ಗುಪ್ತರೋಗಗಳು ಹೆಚ್ಚುತ್ತಿರುವುದನ್ನು ಹೇಳುತ್ತಿದ್ದು.......

**ಶ್ರೀಯುತ ಡಿ.ಎಚ್. ಚಂದ್ರಶೇಖರಯ್ಯ**– ಅವೆರಡರ ನಡುವೆ ಸಂಬಂಧವಿದೆ.

"...............ಗುಹ್ಯರೋಗ–ವಾಣಿಜ್ಯೀಕರಣಗೊಂಡ ವೇಶ್ಯಾವೃತ್ತಿಯ ನಡುವಿನ ಪರಸ್ಪರಾವಲಂಬನೆಯ ಬಗೆಗಿನ ಇತ್ತೀಚಿನ ಅನುಭವ ಮತ್ತು ಮಾಹಿತಿಯನ್ನು ಸ್ಪಷ್ಟವಾಗುವ ರೀತಿಯಲ್ಲಿ............. ಪ್ರಸಾರ ಮಾಡಬೇಕು".

**ಶ್ರೀಯುತ ಡಿ.ವಿ.ಗುಂಡಪ್ಪ** – ನಾನು ನಿಯೋಗವನ್ನು ಗೌರವಿಸುತ್ತೇನೆ ಮತ್ತು ನಿಯೋಗವನ್ನು ಮೈಸೂರಿಗೆ ಆಹ್ವಾನಿಸಿರುವುದರ ಬಗ್ಗೆ ದಿವಾನರಿಗೆ ಅಭಾರಿಯಾಗಿದ್ದೇನೆ. ಮೈಸೂರಿನ ಚಟುವಟಿಕೆಗಳ ಬಗ್ಗೆ ನಿಯೋಗವು ಅದರ ಗಮನ ಹರಿಸಿದುದಕ್ಕೆ ನಾನು ತುಂಬಾ ಆಭಾರಿಯಗಿದ್ದೇನೆ. ಆದರೆ, ಮೈಸೂರಿನಲ್ಲಿ ಆ ನಿಯೋಗ ವಹಿಸಿದ ಶ್ರಮಕ್ಕೆ ಸಂಬಂಧಿಸಿದಂತೆ "ತನಿಖೆ" ಎಂಬ ಪದವನ್ನು ನಾನು ಖಂಡಿತವಾಗಿಯೂ ಬಳಸುವುದಿಲ್ಲ. ನಿಯೋಗವು ಒಂದರೆಡು ದಿನಗಳು ಇಲ್ಲಿ ತಂಗಿತ್ತು. ಬೆಂಗಳೂರು ಮತ್ತು ಮೈಸೂರುಗಳಲ್ಲಿ ಪ್ರವಾಸ ಮಾಡಿ ಒಂದು ಅಥವಾ ಎರಡು ಪ್ರಮುಖ ವೈದ್ಯಕೀಯ ಸಂಸ್ಥೆಗಳಿಗೆ ಭೇಟಿ ನೀಡಿತು. ಆದರೆ ಅದನ್ನು ಒಂದು ತನಿಖೆ ಎಂದು ನಾನು ಖಂಡಿತವಾಗಿಯೂ ಕರೆಯಲಾರೆ, ಮತ್ತು ನಿಯೋಗವು ತಾನು ನೀಡಿದ ಅಭಿಪ್ರಾಯಗಳಿಗೆ ವೈಜ್ಞಾನಿಕ ತನಿಖೆಯ ಮಾನ್ಯತೆಯನ್ನು ಮತ್ತು ಅಧಿಕೃತತೆಯನ್ನು ನಿರೀಕ್ಷಿಸುವುದಿಲ್ಲ ಎಂಬುದನ್ನು ನಾನು ಖಚಿತವಾಗಿ ಹೇಳಬಲ್ಲೆ. ಈಗ, ಬೆಂಗಳೂರು ನಗರದ ಆಸ್ಪತ್ರೆಗಳು ಮೈಸೂರು ರಾಜ್ಯದ ಹೊರಗಡೆಯಿಂದ ಬರುವ ರೋಗಿಗಳಿಂದ ತುಂಬಿದೆ ಎಂಬುದು ಚೆನ್ನಾಗಿ ತಿಳಿದಿರುವ ವಿಚಾರ. ವಿಕ್ಟೋರಿಯಾ ಆಸ್ಪತ್ರೆ ಮತ್ತು ಮಿಂಟೋ ಆಸ್ಪತ್ರೆಗಳಲ್ಲಿ ಅರ್ಧಕ್ಕಿಂತ ಹೆಚ್ಚಿನವರು ಮೈಸೂರಿನ ಹೊರಗಡೆಯವರು, ಮತ್ತು ಉಳಿದವರಲ್ಲಿ ಹೆಚ್ಚಿನವರು ಹಳ್ಳಿಗಳಿಂದ ಬಂದವರು. ವಿಕ್ಟೋರಿಯಾ ಆಸ್ಪತ್ರೆಯ ಎಲ್ಲ ರೋಗಿಗಳು ಬೆಂಗಳೂರಿನ ನಾಗರಿಕರಲ್ಲ. ಅನೇಕರು ಬೆಂಗಳೂರೇತರರು. ಅದೇ ರೀತಿ, ಮೈಸೂರಿನ ಆಸ್ಪತ್ರೆಗಳು ಸಹ. ಆದ್ದರಿಂದ, ಗುಹ್ಯರೋಗ ಪ್ರಕರಣಗಳ ಅಂಕಿಅಂಶಗಳ ಪ್ರಾಮುಖ್ಯತೆ ಈ ವಿಧೇಯಕದ ಉದ್ದೇಶಕ್ಕೆ ಸಂಬಂಧಪಡುವಷ್ಟರ ಮಟ್ಟಿಗೆ ತುಂಬಾ ಕಡಿಮೆ. ನಾನು ನಿಯೋಗದ ಅಧಿಕಾರವನ್ನು ಪ್ರಶ್ನಿಸುತ್ತಿಲ್ಲ. ಗುಹ್ಯರೋಗ ಹರಡಿರುವುದರ ಬಗ್ಗೆಯೂ ನಾನು ಅನುಮಾನಿಸುತ್ತಿಲ್ಲ. ಆ ವರದಿಯಲ್ಲಿ ನಮೂದಿಸಿರುವ ಅಂಶಗಳು ಈ ವಿಷಯಕ್ಕೆ ತುಂಬ ಸುಸಂಗತ ಅಥವಾ ತುಂಬಾ ಸಹಾಯಕವಲ್ಲ ಎಂದಷ್ಟೇ ಹೇಳುತ್ತಿದ್ದೇನೆ. ನಾನು ಅರ್ಥಮಾಡಿಕೊಂಡಂತೆ ಈ ವಿಧೇಯಕದ ಉದ್ದೇಶವೆಂದರೆ ನಮ್ಮ ನಡುವೆ ಕ್ರೈಸ್ತ ಸಾಮ್ರಾಜ್ಯವನ್ನು ಸ್ಥಾಪಿಸುವುದಕ್ಕೆ ಕೆಲವು ಮಹಾತ್ಮರು

ಮತ್ತು ಕೆಲವು ಚಿಂತನಶೀಲರು ತೋರಿಸುತ್ತಿರುವ ಆತುರ ಕಾತುರಗಳು. ಕ್ರೈಸ್ತರ ಕಾರ್ಯವನ್ನು ಪಾಲಿಸುತ್ತಿರುವ ಸಂಘಸಂಸಂಸ್ಥೆಗಳು ಮತ್ತು ವ್ಯಕ್ತಿಗಳನ್ನು ಸನ್ಮಾನಿತರಾದ ನನ್ನ ಸ್ನೇಹಿತರಂಥ ಶ್ರೀಯುತ ಇಮಾಮ್‌ರಂತೆಯೇ ನಾನೂ ಗೌರವಿಸುತ್ತೇನೆ. ಅದನ್ನು ಹೇಳದಿರಲು ನನಗೇನೂ ಕಾರಣವಿಲ್ಲ. ಆದರೆ ಕ್ರೈಸ್ತರ ಉದ್ದೇಶದ ಬಗ್ಗೆ ನನಗೆ ಗೌರವವಿದ್ದರೂ ಸಾಮಾನ್ಯ ಮನುಷ್ಯನಾಗಿ ನನಗೆ ಅವರ ಆತುರ ಹಾಗೂ ಮತಾಂಧತೆಯ ಬಗ್ಗೆ ಅಪನಂಬಿಕೆಯಿದೆ ಎಂಬುದನ್ನು ಹೇಳಲೇಬೇಕಾಗಿದೆ. ಈ ಗುಣಗಳೇ ಧರ್ಮಪ್ರಚಾರಕರ ಬಲವಾಗಿದೆ. ಒಬ್ಬ ಸಾಮಾನ್ಯ ಮನುಷ್ಯನ ದೃಷ್ಟಿಯಿಂದ ಅವರ ಬಲವೇ ಅವರ ದೌರ್ಬಲ್ಯವೂ ಆಗಿದೆ. ಆದರೆ ನಾನೊಬ್ಬ ಸಾಮಾನ್ಯ ಮನುಷ್ಯ. ಅವರು ನಮ್ಮ ಸುತ್ತಮುತ್ತಲು ಕ್ರೈಸ್ತ ಸಾಮ್ರಾಜ್ಯವನ್ನು ಸ್ಥಾಪಿಸಲು ತುಂಬಾ ಆತುರದಲ್ಲಿದ್ದಾರೆ. ಅವರಲ್ಲಿ ನನ್ನ ಮನವಿ ಏನೆಂದರೆ ಅವರು ಸ್ವಲ್ಪ ನಿಧಾನಿಸಬೇಕು. ಹೆಚ್ಚು ನಿಧಾನಿಸಬೇಕು. ಪಿಡುಗು ಅಸ್ತಿತ್ವದಲ್ಲಿದೆ. ನಾವೇನೂ ನಮ್ಮ ರಾಜ್ಯದಲ್ಲಿ ಈ ಪಿಡುಗು ಇಲ್ಲವೇ ಇಲ್ಲವೆಂದು ನಾನು ಖಡಾಖಂಡಿತವಾಗಿ ಹೇಳುವುದಿಲ್ಲ. ಆದರೆ ಒಂದು ಕಾನೂನನ್ನು ರಚಿಸುವಂಥ ಗಂಭೀರ ಕ್ರಮವನ್ನು ಸರ್ಕಾರ ತೆಗೆದುಕೊಳ್ಳುವುದನ್ನು ಸಮರ್ಥಿಸುವಷ್ಟು ಈ ಪಿಡುಗು ಅತಿರೇಕಕ್ಕೆ ಹೋಗಿಲ್ಲ ಅಥವಾ ವ್ಯಾಪಕವಾಗಿಲ್ಲ ಎಂದು ಮಾತ್ರ ಹೇಳಬಲ್ಲೆ.

ಈಗ, ಕಾನೂನು ಅದರ ಬಗ್ಗೆ ಏನನ್ನು ಮಾಡಲು ಉದ್ದೇಶಿಸಿದೆ? ಅದು ಸರ್ಕಾರದ ಮೇಲೆ ಎರಡು ವಿಧದ ಹೊರೆ ಹೊರಿಸಲು ಪ್ರಸ್ತಾವಿಸಿದೆ. ಅದಕ್ಕಿಂತ ಹೆಚ್ಚಿನದೇನನ್ನೂ ಮಾಡಿಲ್ಲ. ಮೊದಲನೆಯದಾಗಿ, ಪೊಲೀಸರ ಮತ್ತು ನ್ಯಾಯಾಂಗದ ಮೇಲೆ ಹೆಚ್ಚಿನ ಜವಾಬ್ದಾರಿಯನ್ನು ಹೊರಿಸುತ್ತದೆ. ಎರಡನೆಯದಾಗಿ, ರಕ್ಷಣಾ ಗೃಹಗಳನ್ನು ಸ್ಥಾಪಿಸುವ ಜವಾಬ್ದಾರಿಯನ್ನು ಸರ್ಕಾರದ ಹೆಗಲಿಗೆ ಹೊರಿಸಿದೆ. ಈಗ ಈ ರಕ್ಷಣಾ ಗೃಹಗಳ ಪ್ರಶ್ನೆ ಯೋಜನೆಯ ಮಹತ್ವದ ಭಾಗ. ಶ್ರೀಯುತ ಸಿಲ್ವ ಅವರು ಈ ವಿಷಯದ ನಿಜವಾದ ಸಮಸ್ಯೆಯತ್ತ ಬೆರಳು ಮಾಡಿ ತೋರಿಸಿದ್ದಾರೆ. ಅವರು, ನತದೃಷ್ಟ ಬಾಲಕಿಯು ಯಾವ ಸಮುದಾಯಕ್ಕೆ ಸೇರಿರುವಳೋ ಅಂಥ ಸಮುದಾಯವು ಸೇರಿದ ಧರ್ಮಕ್ಕೆ ಸಂಬಂಧಿಸಿದ ರಕ್ಷಣಾ ಗೃಹಗಳು ಇಲ್ಲದಿದ್ದಲ್ಲಿ, ಇರುವಂಥ ರಕ್ಷಣಾ ಗೃಹಗಳಲ್ಲಿ ಅವರನ್ನು ಇಡುವ ವ್ಯವಸ್ಥೆ ಮಾಡಿ ಎಂದು ಹೇಳಿದ್ದಾರೆ. ಇದು ಶ್ರೀಯುತ ಸಿಲ್ವರ ಮತ್ತು ನನ್ನ ಸ್ನೇಹಿತರಾದ ಶ್ರೀಯುತ ಇಮಾಮ್ ಅವರ ಅಭಿಪ್ರಾಯವೂ ಆಗಿದೆ. ಸ್ವಾಮಿ, ಇದು ಸಂಬಂಧಿಸಿದ ಸಮುದಾಯಗಳಿಗೆ ಮಾತ್ರ ಅಪಾಯವನ್ನುಂಟು ಮಾಡಲು ಕಾರಣವಾಗುವುದಿಲ್ಲ.

ಆದರೆ ಸಾರ್ವಜನಿಕರ ಶಾಂತಿ ಮತ್ತು ನಮ್ಮ ಸಾರ್ವಜನಿಕ ಜೀವನಕ್ಕೆ ಸಹ ಅಪಾಯವನ್ನೊದಗಿಸುತ್ತದೆ. 'ನೈತಿಕ ಮತ್ತು ಸಾಮಾಜಿಕ ಶುಚಿತ್ವ ಸಂಘದ' ಮುಖ್ಯ ಸದಸ್ಯರಲ್ಲಿ ಒಬ್ಬರು ಎರಡು ಅಥವಾ ಮೂರು ವರ್ಷಗಳ ಹಿಂದೆ ಬರೆದ ಒಂದು ವರದಿಯನ್ನು ನಾನು ಹೊಂದಿದ್ದೇನೆ. ಶಾಂತಿಸದನದ ವರದಿಯಲ್ಲಿ ಅವರು ಈ ರೀತಿ ಬರೆಯುತ್ತಾರೆ :

"ಶಾಂತಿ ಸದನದ ಸದಸ್ಯರು ಈ ಹಿಂದಿಗಿಂತಲೂ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ನಾವು 30ಕ್ಕಿಂತಲೂ ಕಡಿಮೆಯಿರುವುದು ಅಪರೂಪವಾಗಿದ್ದರೂ ಕೆಲವು ತಿಂಗಳಿಂದ 35ರ ಸಂಖ್ಯೆಯನ್ನು ತಲುಪಿದ್ದೇವೆ........ ಅನೇಕ ಬಾರಿ ಆತ್ಮಹತ್ಯೆ ಪ್ರಯತ್ನಗಳನ್ನು ಮಾಡಿದ್ದ ವಿಧವೆಯಾದ ಒಬ್ಬ ಬ್ರಾಹ್ಮಣ ಹುಡುಗಿ, ಬಲವಂತಕ್ಕೆ ಕಟ್ಟುಬಿದ್ದು ಅವಳ ಸಂಪ್ರದಾಯಸ್ಥ ತಾಯಿ ಅವಳಿಗೆ ಉಂಟುಮಾಡುತ್ತಿದ್ದ ಅವಮಾನದ ಹೊರೆಯಿಂದ ಮೊದಲ ಸಲ ಬಿಡುಗಡೆ ಹೊಂದಿದಳು................."

"ವರ್ಷಾವಧಿಯಲ್ಲಿ 4 ಮಹಿಳೆಯರು ದೀಕ್ಷೆ ಪಡೆದರು ಮತ್ತು ಆರು ಜನ ಪೂರ್ಣ ಸದಸ್ಯತ್ವ ಪಡೆದರು.........."

ಇದು ಈ ಚಳುವಳಿಯ ಪ್ರಮುಖ ಸದಸ್ಯರೊಬ್ಬರ ಇಷ್ಟ ಮತ್ತು ಆಸೆಯಾಗಿದೆ. ನಾನು ಹೇಳಿದಂತೆ, ನಾನು ಕ್ರೈಸ್ತ ಧರ್ಮ ಪ್ರಚಾರ ಅಥವಾ ಮತಾಂತರ ಕ್ರಿಯೆಯ ಬಗ್ಗೆ ಯಾವುದೇ ದ್ವೇಷ ಅಥವಾ ಕೆಟ್ಟ ಭಾವನೆಯನ್ನು ಅಥವಾ ಕೋಪದ ಭಾವನೆಯನ್ನು ಹೊಂದಿಲ್ಲ. ನಾನು, ಸಾಧ್ಯವಾದಷ್ಟು ಮಟ್ಟಿಗೆ ಧರ್ಮದಿಂದ ಬೇರ್ಪಟ್ಟವನಾಗಿ ತನ್ನ ಅಭಿಪ್ರಾಯಗಳನ್ನು ವ್ಯಕ್ತಪಡಿಸಲು ಸತತವಾಗಿ ಪ್ರಯತ್ನಿಸಿಯೂ ಯಶಸ್ವಿಯಾಗದ ಒಬ್ಬ ಸಾಮಾನ್ಯ ನಾಗರಿಕನ ದೃಷ್ಟಿಯಿಂದ ಈ ಕೃತ್ಯವನ್ನು ಸುಮ್ಮನೆ ನೋಡುತ್ತಿದ್ದೇನೆ. ನಾನು ಈ ಬಗ್ಗೆ ಪೂರ್ಣವಾಗಿ ಧಾರ್ಮಿಕವಲ್ಲದ ಮತ್ತು ಪಕ್ಷಾತೀತ ನಿಲುವನ್ನು ತೆಗೆದುಕೊಂಡಿದ್ದೇನೆ. ಇದರಲ್ಲಿನ ಈ ಮಹತ್ವದ ವಿಷಯ, ವಿಧೇಯಕವನ್ನು ಬೆಂಬಲಿಸುವವರ ನಡುವೆಯೇ ಭಿನ್ನಾಭಿಪ್ರಾಯಗಳನ್ನು ಉಂಟುಮಾಡಿದೆ. ಆ ಮಹತ್ವದ ವಿಷಯವೆಂದರೆ ರಕ್ಷಣಾ ಗೃಹಗಳನ್ನು ಒದಗಿಸುವುದು. ಈ ಸಮುದಾಯಗಳು ಪಂಗಡ ಧರ್ಮ ಮತ್ತು ಜಾತಿಗಳಾಗಿ ವಿಭಜನೆಗೊಂಡಿರುವುದರಿಂದಾಗಿ ಈ ದೇಶದಲ್ಲಿ ಅನಾಥಾಶ್ರಮಗಳ ಮತ್ತು ವಿದ್ಯಾರ್ಥಿ ನಿಲಯಗಳ ನಿರ್ವಹಣೆ ಜಟಿಲವಾಗಿದೆ ಮತ್ತು ಅಸಾಧ್ಯವೆಂಬಂತಾಗಿದೆ. ಪ್ರತಿಯೊಂದು ಜಾತಿಯವರು ತಮ್ಮ ಜಾತಿಗೆ ಪ್ರತ್ಯೇಕವಾದ ರಕ್ಷಣಾ ಗೃಹಗಳನ್ನು ಹೊಂದಲು ಇಚ್ಛಿಸುತ್ತಾರೆ. ಪ್ರತಿಯೊಂದು ಧರ್ಮದವರು ಪ್ರತ್ಯೇಕವಾದ ರಕ್ಷಣಾ

ಗೃಹಗಳನ್ನು ಹೊಂದುವುದು ಅವಶ್ಯಕ. ಅಂಥ ಗೃಹಗಳನ್ನು ನೀವು ಒದಗಿಸದಿದ್ದರೆ, ಖಂಡಿತವಾಗಿಯೂ, ಆಡಳಿತದ ದೃಷ್ಟಿಯಿಂದ, ಪರಿಸ್ಥಿತಿ ತುಂಬಾ ಕಷ್ಟಕರವಾಗುತ್ತದೆ. ನೀವು ಅಂಥ ರಕ್ಷಣಾ ವಲಯ ಗೃಹಗಳನ್ನು ಒದಗಿಸುತ್ತೀರಾ? ನಾನು ಈಗಲೇ ಮತ್ತು ಇಲ್ಲೇ ಈ ಪ್ರಶ್ನೆಗೆ ಉತ್ತರವನ್ನು ನೀಡಲು ಒತ್ತಾಯ ಮಾಡುವುದಿಲ್ಲ. ರಕ್ಷಣಾ ಗೃಹಗಳನ್ನು ಒದಗಿಸುವ ಅವಶ್ಯಕತೆ ಇರುವ ಬಗ್ಗೆ ಅನುಮಾನಕ್ಕೆ ಎಡೆ ಇಲ್ಲದಿದ್ದರೆ, ಸರ್ಕಾರ ಇವನ್ನು ಒದಗಿಸುವ ಮಾರ್ಗವನ್ನು ಸಹ ಕಂಡುಕೊಳ್ಳಬೇಕು. ಅವಶ್ಯಕತೆ ಇದ್ದರೆ, ಮೊದಲು ಅದನ್ನು ಸಾಬೀತುಪಡಿಸಬೇಕು. ಅವಶ್ಯಕತೆ ಇದ್ದರೆ, ಸರ್ಕಾರವು, ಎಷ್ಟೇ ಹಣ ವೆಚ್ಚವಾದರೂ, ಆಯಾ ಸಮುದಾಯಕ್ಕೆ ಸೇರಿದ ಬಾಲಕಿಯರಿಗಾಗಿ ಆಯಾ ಸಮುದಾಯದ ರಕ್ಷಣಾ ಗೃಹಗಳನ್ನು ಒದಗಿಸಬೇಕು ಅಥವಾ, ನಾವು ಶ್ರೀಯುತ ಇಮಾಮ್ ಮತ್ತು ಶ್ರೀ ಶಿಲ್ವ ಇವರ ನಿಲುವನ್ನು ಒಪ್ಪಬೇಕೇ? ಎಂದರೆ ಒಂದು ನಿರ್ದಿಷ್ಟ ಧರ್ಮಕ್ಕೆ ರಕ್ಷಣಾ ಗೃಹಗಳಿಲ್ಲದಿದ್ದರೆ ಅವರನ್ನು ಇರುವ ಯಾವುದೇ ರಕ್ಷಣಾ ಗೃಹಕ್ಕೆ ವಹಿಸಿಕೊಡುವುದೇ? ಈ ಸಂಬಂಧವಾಗಿ ಸರ್ಕಾರಕ್ಕೆ ಮತ್ತೊಂದು ವಿಧದ ಜವಾಬ್ದಾರಿಯೂ ಸಹ ಇದೆ. ಅವರು ರಕ್ಷಣಾ ಗೃಹಗಳಿಗೆ ಮಾನ್ಯತೆ ನೀಡಬೇಕು, ಎಂದರೆ, ರಕ್ಷಣಾ ಗೃಹಗಳ ಆರೋಗ್ಯಕರ ವಾತಾವರಣ, ನಿರ್ವಹಣೆಯ ಗುಣಮಟ್ಟ ಮತ್ತು ತತ್ವಗಳ ಬಗ್ಗೆ ಗ್ಯಾರಂಟಿಯಾಗಿ ನಿಲ್ಲಬೇಕು. ಇದನ್ನು ಸರ್ಕಾರ ಮಾಡುತ್ತದೆಯೇ? ಇವು ಸರ್ಕಾರದ ಮೇಲಿರುವ ನಿರ್ದಿಷ್ಟ ಜವಾಬ್ದಾರಿಗಳು.

ಪ್ರಾರಂಭದ ಹಂತದಲ್ಲಿ, ಪ್ರಸ್ತುತ ಪ್ರಥಮ ಸದಸ್ಯರು, ಸರ್ಕಾರದ ಪರವಾಗಿ ಮಾತನಾಡುತ್ತ, ಸರ್ಕಾರವು ಈ ವಿಷಯದ ಬಗ್ಗೆ ಪರಿಶೀಲನೆ ಮಾಡುವುದಕ್ಕೆ ಮೇಲ್ನೋಟದ ಕಾರಣಗಳಿವೆಯೆಂದು ಹೇಳಿದರು. ಅವರು ಸರ್ಕಾರವು ವಿಧೇಯಕದಲ್ಲಿರುವ ಉಪಬಂಧಗಳಿಗೆ ಪರವಾಗಿ ಅಥವಾ ವಿರೋಧವಾಗಿ ಬದ್ಧವಾಗುವುದಿಲ್ಲ ಎಂದು ಹೇಳುವ ಎಚ್ಚರಿಕೆಯನ್ನೂ ವಹಿಸಿದ್ದಾರೆ. ನನ್ನ ಪ್ರಕಾರ ಇದು ಅತ್ಯಂತ ಸರಿಯಾದ ನಿಲುವು. ಈಗ ಸರ್ಕಾರವು ಈ ವಿಷಯದ ಬಗ್ಗೆ ಪರಿಶೀಲನೆ ನಡೆಸಲು ಒಪ್ಪಿಕೊಂಡಿರುವುದರಿಂದ, ಅದಕ್ಕಾಗಿ ಅವರು ತನಿಖೆ ಮಾಡಲು ಇನ್ನು ಸ್ವಲ್ಪ ಕಾಲಾವಕಾಶ ನೀಡಬೇಕು ಮತ್ತು ಅಂಥ ಶಾಸನಾತ್ಮಕ ಕ್ರಮಗಳಿಗಾಗಿ ಅವರ ತೀರ್ಮಾನದಲ್ಲಿ ಅವಶ್ಯಕತೆ ಇದೆಯೇ ಎಂಬುದನ್ನು ದೃಢಪಡಿಸಬೇಕು. ಮತ್ತು, ಹಾಗಿದ್ದರೆ, ಅಂಥ ಶಾಸನದ ಪರಿಣಾಮವಾಗಿ ಉಂಟಾಗುವ ಜವಾಬ್ದಾರಿಗಳನ್ನು ಹೊರಲು ಅವರು ತಯಾರಿದ್ದಾರೆಯೇ, ಎಂದರೆ,

ರಕ್ಷಣಾ ಗೃಹಗಳನ್ನು ತಾವೇ ಅಥವಾ ಏಜೆನ್ಸಿ ಮೂಲಕ ಸ್ಥಾಪಿಸುವ ಜವಾಬ್ದಾರಿಗಳು ಈ ವಿಧೇಯಕದ ಸಂಬಂಧದಲ್ಲಿ ನಿರ್ಧಾರ ಕೈಗೊಳ್ಳುವ ಮೊದಲು ನಿರ್ಧರಿಸಬೇಕು. ಈ ವಿಷಯದ ಮೇಲಿನ ಉತ್ತರವು ತುಂಬ ಸುಸಂಗತವಾದುದು ಮತ್ತು ಮುಖ್ಯವಾದುದು ಎಂದು ನಾನು ಭಾವಿಸಿದ್ದೇನೆ.

**ಶ್ರೀಯುತ ಡಿ.ಹೆಚ್. ಚಂದ್ರಶೇಖರಯ್ಯ** – ನಿಮಗೆ ನಿಮ್ಮ ಸ್ವಂತ ನಿಲುವಿಲ್ಲವೆ?

**ಶ್ರೀಯುತ ಡಿ.ವಿ.ಗುಂಡಪ್ಪ**– ಮೊದಲನೆಯದಾಗಿ ಸರ್ಕಾರವು, ಈ ಶಾಸನ ರಚನೆಯ ಅವಶ್ಯಕತೆ ಇದೆ ಎನ್ನುವ ನಿಲುವನ್ನು ತಳೆಯುತ್ತದೆಯೇ ಮತ್ತು ಎರಡನೆಯದಾಗಿ ಅಂಥ ಶಾಸನ ರಚನೆಯಿಂದುಂಟಾಗುವ ಜವಾಬ್ದಾರಿ ನಿಭಾಯಿಸಲು ತಯಾರಿದೆಯೇ? ಎಂಬುದನ್ನು ತಿಳಿಸಬೇಕು. ಹಾಗಿದ್ದರೆ ನಾನು ಅಂಥ ಕ್ರಮವನ್ನು ಖಂಡಿತವಾಗಿಯೂ ಬೆಂಬಲಿಸುತ್ತೇನೆ. ಆದರೆ ಅಂಥ ಸಮಯ ಇನ್ನೂ ಬಂದಿಲ್ಲ. ಸರ್ಕಾರ ತಮ್ಮ ನಿರ್ಧಾರವನ್ನು ತಿಳಿಸಿಲ್ಲ.

**ಶ್ರೀಯುತ ಡಿ.ಹೆಚ್. ಚಂದ್ರಶೇಖರಯ್ಯ** – ನೀವು ಎಲ್ಲ ಖಾಸಗಿ ಶಾಸನಗಳ ಬಗ್ಗೆಯೂ ಇದೇ ಮನೋಭಾವ ಹೊಂದಿದ್ದೀರಾ?

**ಶ್ರೀಯುತ ಡಿ.ವಿ.ಗುಂಡಪ್ಪ** – ಇದು ಕಾಲ್ಪನಿಕ ಪ್ರಶ್ನೆಯಾಗಿದೆ. ಪ್ರತಿಯೊಂದು ವಿಧೇಯಕದ ಮೇಲಿನ ನನ್ನ ಮನೋಭಾವನೆ ಆಯಾ ವಿಧೇಯಕದ ಸನ್ನಿವೇಶಗಳ ಮೇಲೆ ಅವಲಂಬಿತವಾಗಿರುತ್ತದೆ. ಈ ವಿಧೇಯಕದ ಸಂಬಂಧದಲ್ಲಿ ನನ್ನ ಮನೋಭಾವ ಇದು. ಸ್ನೇಹಿತರು ನನ್ನನ್ನು ಕೇಳಿದರು: "ಈ ವಿಧೇಯಕವನ್ನು ಜಾರಿಗೆ ತರುವುದರಿಂದ ಏನಾದರೂ ತೊಂದರೆ ಇದೆಯೇ? ಅದು ಶಾಸನದ ಪುಸ್ತಕದಲ್ಲಿ ಇರಲಿ, ಬೇರೆ ಉದ್ದೇಶವಿಲ್ಲದಿದ್ದರೆ ಇದು ಒಳ್ಳೆಯ ಇಚ್ಛೆ". ನನ್ನ ಉತ್ತರ ಎರಡು ಬಗೆಯದ್ದಾಗಿದೆ. ಈ ಸ್ವರೂಪದ ಅಗತ್ಯವಿಲ್ಲದ ಕಾನೂನು ಹೊಂದಿರುವುದು ತೊಂದರೆಗೆ ದಾರಿ ಮಾಡಿಕೊಡುತ್ತದೆ. ನೀವು ಶಾಸನ ಪುಸ್ತಕದ ಮೇಲೆ ಎಲ್ಲ ಹಾನಿಕರವಲ್ಲದ ಕಾನೂನುಗಳನ್ನು ರಚಿಸುತ್ತಾ ಹೋದರೆ, ಇಸೋಪನ ನೀತಿಕತೆಗಳೆಲ್ಲ ಕಾನೂನು ಪುಸ್ತಕದಲ್ಲಿ ಸೇರುತ್ತವೆ. ನಾವು ಕೆಡುಕು ಮಾಡದ ಮತ್ತು ಹಾನಿಕರವಲ್ಲದ ಕಾನೂನುಗಳನ್ನು ಮಾತ್ರ ಪರಿಗಣಿಸಬಾರದು. ಪರಿಣಾಮಕಾರಿಯಾದ ಮತ್ತು ಅನುಕೂಲಕರವಾಗುವ ಕಾನೂನುಗಳನ್ನು ರಚಿಸಲು ಮಾತ್ರ ನಾವು ಇಲ್ಲಿ ಇರುವುದು. ಹಾಗಾಗಿದ್ದರೆ, ಅಂಥ ಶಾಸನ ರಚನೆಯ ಪರಿಣಾಮವೇನು? ಇದು ಎರಡು ರೀತಿಯದ್ದಾಗಿದೆ. ಪ್ರಥಮವಾಗಿ, ಇದು ನಮ್ಮ

ಹೆಸರನ್ನು ಅನಾವಶ್ಯಕವಾಗಿ ಕೆಡಿಸುವುದಾಗಿದೆ. ಎಲ್ಲ ಕಾಲದಲ್ಲಿಯೂ ಇಲ್ಲೊಂದು "ಪ್ರಗತಿ ಪರ" ಮತ್ತು "ಮಾದರಿ" ಎಂದು ತನ್ನನ್ನು ತಾನು ಕರೆದುಕೊಳ್ಳುವ ರಾಜ್ಯವಿತ್ತು, ಅಲ್ಲಿ ವ್ಯಭಿಚಾರದ ಪಿಡುಗು ಮತ್ತು ತಲೆಹಿಡುಕತನಗಳೆರಡೂ ಅನಿಯಂತ್ರಿತವಾಗಿದೆ; ಮತ್ತು ಒಬ್ಬ ಸಜ್ಜನ ಬಂದು ಎಲ್ಲ ಪುರುಷರ ಮತ್ತು ಮಹಿಳೆಯರ ಗಮನವನ್ನು ಸೆಳೆಯುವವರೆಗೆ ಆ ಬಗ್ಗೆ ಯಾರೂ ಯೋಚಿಸಿರಲಿಲ್ಲ ಮತ್ತು ಅದನ್ನು ಗುರುತಿಸಿರಲಿಲ್ಲ ಎಂಬುದನ್ನು ಮುಂಬರುವ ಎಲ್ಲ ಕಾಲದಲ್ಲಿಯೂ ಈ ಕಾನೂನು ಎತ್ತಿ ತೋರಿಸುತ್ತಿರುತ್ತದೆ.

**ಶ್ರೀಯುತ ಹೆಚ್. ಸಿದ್ದಯ್ಯ** – ನಿಮ್ಮ ವಾದ ಬಹಳ ಚೆನ್ನಾಗಿದೆ !

**ಶ್ರೀಯುತ ಡಿ.ವಿ.ಗುಂಡಪ್ಪ**– ನಾನು ಇಂಥ ಕಾನೂನು ಮಾಡುವ ವಿಷಯದಲ್ಲಿ ಏನನ್ನಾದರೂ ಮಾಡಲು ಸಾಧ್ಯವಿದ್ದರೆ ನಾನು ಅದಕ್ಕೆ ಒಪ್ಪಿಗೆ ಕೊಡದಿರುವುದು. ಆದರೆ ಮುಂದಿನ ವಿಷಯಕ್ಕೆ ಹೋಲಿಸಿದರೆ ಅದು ಸಣ್ಣ ವಿಷಯ. ನಾವು ನಮ್ಮ ಮನಸ್ಸಾಕ್ಷಿಗೆ ಅನ್ವಯವಾಗಿರಬಹುದು. ಈಗ ಕಲ್ಪಿಸಿಕೊಂಡಿರುವಂತೆ ಒಂದು ಪಿಡುಗು ವಾಸ್ತವವಾಗಿ ಇದ್ದಲ್ಲಿ, ವ್ಯಾಪಕವಾಗಿದ್ದಲ್ಲಿ ನಾವು ಈ ರೀತಿ ಹೇಳಬಹುದು : "ನಾವು ಅತ್ಯುತ್ತಮವಾದುದನ್ನು ಮಾಡಿದ್ದೇವೆ ; ನಾವು ಕಾನೂನು ಪುಸ್ತಕದಲ್ಲಿ ಕಾನೂನನ್ನು ಇಟ್ಟಿದ್ದೇವೆ; ನಾವು ಇದಕ್ಕಿಂತ ಇನ್ನೇನು ಮಾಡಬಹುದು?" ಏನೂ ಕ್ರಮ ಕೈಗೊಳ್ಳದಿದ್ದರೆ ನೀವು ಪೊಲೀಸಿನವರನ್ನು ದೂರಬಹುದು; "ಯಾವುದೇ ಗಮನ ಹರಿಸದ ಪೊಲೀಸು ಇಲ್ಲಿದೆ" ಎಂದು. ಏನಾದರೂ ಘಟನೆ ನಡೆದರೆ, "ಓ! ಪೊಲೀಸರು ಅತಿಯಾದ ಉತ್ಸಾಹ ತೋರುತ್ತಾರೆ. ಜನರನ್ನು ನೆಮ್ಮದಿಯಿಂದಿರಲು ಬಿಡುವುದಿಲ್ಲ"; ಈ ಎರಡೂ ಸಂದರ್ಭದಲ್ಲಿ, ನಾವು ಸರ್ಕಾರವನ್ನು ದೂಷಿಸುತ್ತೇವೆ ಮತ್ತು ನಾವು ನಮ್ಮ ಕೆಲಸ ಮಾಡಿದ್ದೇವೆಂದು ಸಮಾಧಾನಪಟ್ಟುಕೊಳ್ಳುತ್ತೇವೆ. ತಪ್ಪು ಒಪ್ಪುಗಳನ್ನು ನಿರ್ಧರಿಸುವ ಈ ಸಾಮಾಜಿಕ ಕಳಕಳಿ ದುರ್ಬಲವಾಗಿರುವುದೇ ಒಂದು ಪಿಡುಗು. ಮತ್ತು ಸಾಮಾಜಿಕ ಪ್ರಜ್ಞೆಯನ್ನು ದುರ್ಬಲಗೊಳಿಸುವ ಯಾವುದೇ ಬಗೆಯ ಶಾಸನ ಜಾರಿಗೆ ಬರಬಾರದು. "ಅಂಥ ಒಂದು ಪಿಡುಗು, ಸ್ವಲ್ಪ ಇದ್ದರೂ ಪರಿಹಾರವನ್ನು ನೀಡಬಾರದೇ?" ಎಂದು ಕೇಳಿದ್ದೀರಿ. ಶ್ರೀಯುತ ವಾಲ್ಡನ್ ಹೇಳಿದರು: " ಕನಿಷ್ಠ ಪಕ್ಷ ಒಂದು ಪ್ರಕರಣವಿದ್ದರೂ ಅದು ದುರದೃಷ್ಟಕರವೇ ಮತ್ತು ಅದಕ್ಕೆ ಗಮನ ನೀಡುವುದು ಅಗತ್ಯ. ಮಧ್ಯ ಪ್ರವೇಶಿಸುವುದು ರಾಜ್ಯದ ಕರ್ತವ್ಯ." ನಾನು ಒಪ್ಪಿಕೊಳ್ಳುತ್ತೇನೆ. ಆದರೆ ಹೇಗೆ? ಖಾಸಗಿ ಸಾಮಾಜಿಕ ಕಾರ್ಯಕರ್ತರು ಉತ್ಸಾಹಶಾಲಿಗಳಾಗಿರಬೇಕು. ನೈತಿಕ ಮತ್ತು

ಸಾಮಾಜಿಕ ಆರೋಗ್ಯದ ಬೆಳವಣಿಗೆಗಾಗಿ, ಅದು ಮೊದಲು ಸಾರ್ವಜನಿಕ ಅಭಿಪ್ರಾಯವನ್ನು ಉಂಟು ಮಾಡಬೇಕು. ಅಥವಾ ಸಂಬಂಧಪಟ್ಟ 184 ಪ್ರಕರಣವನ್ನು ಅನ್ವಯಿಸುವಂತೆ ನಗರ ಪುರಸಭೆಯ ಅಧ್ಯಕ್ಷರನ್ನು ಒತ್ತಾಯಿಸಿದ್ದಾರೆಯೇ? ಹಾಗೆ ಮಾಡುವಂತೆ ಎಷ್ಟು ಬಾರಿ ಕರೆ ನೀಡಿದ್ದಾರೆ. ಈ ಒಂದು ಪಿಡುಗನ್ನು ನಿರ್ನಾಮ ಮಾಡಲು ಬೀದಿ ಬೀದಿಗಳಲ್ಲಿ ಮನವಿ ಮಾಡಿದ್ದಾರೆಯೇ?

**ಶ್ರೀಯುತ ಟಿ. ರಾಮಚಂದ್ರ** – ಹೌದು.

**ಶ್ರೀಯುತ ಡಿ.ವಿ. ಗುಂಡಪ್ಪ**– ಆದರೆ ಫಲಿತಾಂಶವೇನೂ ಕಾಣುತ್ತಿಲ್ಲ. ಇದರರ್ಥ ಅವರು ವಿಫಲಾಗಿದ್ದಾರೆ ಎಂದಲ್ಲ. ಆದರೆ, ಮತ್ತೆ ಮತ್ತೆ ಪ್ರಯತ್ನಪಡಬೇಕು. ಅದಕ್ಕಾಗಿ ತೀವ್ರವಾಗಿ ಕೆಲಸ ಮಾಡಬೇಕು. ಶ್ರೀಯುತ ಟಿ.ರಾಮಚಂದ್ರ ಬ್ರಹ್ಮಚಾರಿ, ಅವರು ಇತ್ತೀಚೆಗೆ ಮದ್ರಾಸಿನಲ್ಲಿ ನಡೆದ ಸಮ್ಮೇಳನದ ಈ ವರದಿಯನ್ನು ನನ್ನ ಕೈಯಲ್ಲಿಟ್ಟಿದ್ದಾರೆ ಮತ್ತು ನನ್ನ ಸ್ನೇಹಿತರಾದ ಶ್ರೀಯುತ ಚಂದ್ರಶೇಖರಯ್ಯನವರು ಈ ಬಗ್ಗೆ ಉಲ್ಲೇಖ ಮಾಡಿದ್ದಾರೆ. ಘನತೆವೆತ್ತ ಶ್ರೀಯುತರು ವರದಿಯಲ್ಲಿ ಏನನ್ನು ಹೇಳಿದ್ದಾರೆ?

"ಯಾವುದೇ ಪರ್ಯಾಯ ವ್ಯವಸ್ಥೆ ಇಲ್ಲದಿರುವುದರಿಂದ ಹೆಚ್ಚು ಹೆಚ್ಚು ದುರದೃಷ್ಟಕ್ಕೆ ಒಳಗಾಗಿ ಇಂತಹದನ್ನು ಮುಚ್ಚುಮರೆಯಿಲ್ಲದೆ ನಡೆಸುತ್ತಿದ್ದಾರೆ"

ಇವು ಘನತೆವೆತ್ತ ಲಾರ್ಡ್ ಎರ್‌ಸ್ಕೈನ್‌ರವರ ನುಡಿಗಳು

**ಶ್ರೀಯುತ ಡಿ.ಹೆಚ್. ಚಂದ್ರಶೇಖರಯ್ಯ**.– ಇತರ ವಿಷಯಗಳನ್ನು ಬಿಟ್ಟುಬಿಡುವುದರಿಂದ ನಿಮಗೇ ಪ್ರಯೋಜನ !

**ಶ್ರೀಯುತ ಡಿ.ವಿ. ಗುಂಡಪ್ಪ** – ಅಂಥ ಪ್ರಯೋಜನಗಳನ್ನು ಹೊಂದುವುದಕ್ಕೆ ನಾನು ಉತ್ಸುಕನಾಗಿಲ್ಲ. ಅಂಥ ಅವಕಾಶಗಳನ್ನೆಲ್ಲಾ ನಾನು ನನ್ನ ಸ್ನೇಹಿತರಿಗೇ ಬಿಟ್ಟುಕೊಡುತ್ತೇನೆ. ನಾನು ಎಲ್ಲವನ್ನೂ ಸಂಪೂರ್ಣ ಓದಿ ಹೇಳಬಲ್ಲೆ. ಆದರೆ ಕೇಳುಗರು ಅದನ್ನು ಅಪ್ರಸ್ತುತವೆಂದು ತಿರಸ್ಕರಿಸಿಬಿಡಬಹುದೆಂಬ ಆತಂಕ ನನಗೆ.

ಸರ್ಕಾರ ಈ ಹೊಣೆಗಾರಿಕೆಗಳನ್ನು ಹೊತ್ತುಕೊಳ್ಳಬೇಕೆಂದು ಹೇಳುವುದು ಸಮಂಜಸವಾಗಲಾರದು. ಹಾಗಾದರೆ "ನಮ್ಮ ಸಾರ್ವಜನಿಕ ವ್ಯಕ್ತಿಗಳು ಈ ಸವಾಲು ಸ್ವೀಕರಿಸಲು ಸಿದ್ಧರಿರುವರೇ? ಅವರು ಜನರ ಧಾರ್ಮಿಕ ಶ್ರದ್ಧೆಗನುಸಾರವಾಗಿ ಆರೋಗ್ಯಕರ ಮತ್ತು ಉತ್ತಮ ಪರಿಸರದಲ್ಲಿ ದಕ್ಷ ಸಂಸ್ಥೆಗಳನ್ನು ನಡೆಸಲು

ತಯಾರಿರುವರೇ?" ಎಂದು ನಾನು ಕೇಳುತ್ತೇನೆ. ಅವರು ಇದನ್ನು ಮಾಡಿದ್ದೇ ಆದರೆ, ಯಾರೇ ಅಧಿಕಾರೇತರ ಮಹನೀಯರು ಮುಂದೆ ಬಂದದ್ದೇ ಆದರೆ ಇದಕ್ಕೆ ನನ್ನ ಒಪ್ಪಿಗೆ ಇದೆ. ಮಾನ್ಯರೇ, ಈ ವಿಷಯದ ಮೇಲಿನ ಇಡೀ ವಿಚಾರವನ್ನು ಇದೇ ವರದಿಯಲ್ಲಿ ಉಲ್ಲೇಖಿಸಿರುವಂಥ ಶ್ರೀಯುತ ಭೂಪೇಂದ್ರನಾಥ್ ಮಿತ್ರರವರು ಬಹಳ ಸಂಕ್ಷಿಪ್ತವಾಗಿ ನಿರೂಪಿಸಿದ್ದಾರೆಂದು ನನಗೆ ತೋರುತ್ತದೆ:–

" ಇಂಥ ಅನಿಷ್ಠ ಪದ್ಧತಿಗಳನ್ನು ತೊಡೆದುಹಾಕುವುದಕ್ಕೆ ಸಂಬಂಧಿಸಿದಂತೆ ನಮ್ಮ ಪ್ರಜ್ಞೆ ಸಂಪೂರ್ಣವಾಗಿ ಜಾಗೃತವಾಗಿದೆ ಎಂಬುದರಲ್ಲಿ ನನಗೆ ಯಾವುದೇ ಸಂದೇಹವಿಲ್ಲ. (ಅವರು ಇಡೀ ದೇಶವನ್ನು ಕುರಿತು ಮಾತನಾಡುತ್ತಿರುವರು) ಮೈಸೂರು ಸೇರಿದಂತೆ ಇಡೀ ಭಾರತವು ಯಾವುದೇ ಮತಪಂಥಗಳ ಬೇಧವಿಲ್ಲದೆ ಸಮಾಜ ಸುಧಾರಣಾ ಕೈಂಕರ್ಯದಲ್ಲಿ ಸಹಕರಿಸಲು ಆಸಕ್ತರಾಗಿರುವದೆಂದು ಈ ಸಭೆಗೆ ಭರವಸೆ ನೀಡುತ್ತೇನೆ ............ ಭಾರತೀಯರಾದ ನಾವು ಇಂಥ ಸಾಮಾಜಿಕ ಅನಿಷ್ಠಗಳು ನಮ್ಮ ಸ್ವಂತ ನೆಲ ಹಾಗೂ ಇತರೆಡೆಗಳಲ್ಲೂ ಅಸ್ತಿತ್ವದಲ್ಲಿವೆಯೆಂಬುದನ್ನು ಒಪ್ಪುತ್ತೇವೆ ........."

ಇದು ಬಹು ಸಂಕ್ಷಿಪ್ತವಾಗಿ ಹೇಳಿರುವ ಅವರ ಅಭಿಪ್ರಾಯ. ಇನ್ನು ಅಧಿಕಾರೇತರರು ಈ ಬಗ್ಗೆ ಕಾರ್ಯತತ್ಪರರಾಗುವುದಕ್ಕೆ ತಾವು ಸಿದ್ಧರಿರುವುದನ್ನು ತಮ್ಮ ಶ್ರದ್ಧೆಯನ್ನು ತೋರಿಸಬೇಕಿದೆ. ನಾನು ಈ ಪರಿಷತ್ತಿನಲ್ಲಿರುವ ಅಧಿಕಾರೇತರರನ್ನು ಕುರಿತು ಮಾತನಾಡುತ್ತಿಲ್ಲ. ಅವರಿಗೆ ನಾನೆಷ್ಟು ವಿನಮ್ರ ವ್ಯಕ್ತಿಯೆಂಬುದು ತಿಳಿದಿದೆ. ನಾನು ಅವರಿಗೆ ಯಾವುದೇ ಸವಾಲು ಒಡ್ಡುತ್ತಿಲ್ಲ. ನಾನು ಅವರನ್ನು ಯಾವುದೇ ಸವಾಲನ್ನು ಸ್ವೀಕರಿಸುವಂತೆಯೂ ಕೇಳುತ್ತಿಲ್ಲ. ರಾಜ್ಯಾದ್ಯಂತ ಇರುವ ಅಧಿಕಾರೇತರರು, ಪುರಸಭೆಗಳು ಮೊದಲು ಇಂಥ ಅನಿಷ್ಠಗಳು ಅಸ್ತಿತ್ವದಲ್ಲಿವೆಯೆಂಬುದನ್ನು ಮತ್ತು ಅವುಗಳನ್ನು ತೊಡೆದು ಹಾಕಲು ತ್ವರಿತವಾಗಿ ಕ್ರಮಕೈಗೊಳ್ಳಬೇಕಾಗಿದೆಯೆಂಬುದನ್ನು ಘೋಷಿಸಲಿ. ಕ್ರಮ ಕೈಗೊಳ್ಳುವುದಕ್ಕೆ ಸಾವಿರಾರು ರೂಪಾಯಿಗಳು ಅಥವಾ ಹತ್ತಾರು ಸಾವಿರಗಳಷ್ಟು ಖರ್ಚಾದರೂ ಸರಿಯೆ, ಸರ್ಕಾರ ಇದನ್ನು ಕೈಗೊಳ್ಳಲೇಬೇಕೆಂಬುದನ್ನು ಹೇಳುವುದಕ್ಕೆ ನನಗೆ ಯಾವುದೇ ಹಿಂಜರಿಕೆಯಿಲ್ಲ. ಉದಾಹರಣೆಗೆ ಮೈಸೂರು ಮತ್ತು ಬೆಂಗಳೂರಿನ ಎರಡು ನಗರಗಳ ಪುರಸಭೆಗಳಿಗೆ ಈ ರೀತಿಯ ಕ್ರಮ ಕೈಗೊಳ್ಳಬೇಕಾದ ಅಗತ್ಯವಿದೆಯೆಂಬುದನ್ನು ಅಧಿಕೃತವಾಗಿ ಘೋಷಿಸುವಂತೆ ಮನ ಒಲಿಸಿದ್ದೇ ಆದರೆ ಸರ್ಕಾರ ಆ ಬಗ್ಗೆ ಗಮನ ಹರಿಸುವುದಕ್ಕೆ ಬದ್ಧವಾಗಿರುತ್ತದೆಂಬುದರ ಬಗೆಗೆ ನನಗೆ ಲವಲೇಷವಾದ ಅನುಮಾನವೂ ಇರುವುದಿಲ್ಲ. ಅಲ್ಲಿಯವರೆಗೆ

ಸುಧಾರಣಾಲಯಗಳನ್ನು ಒದಗಿಸಲಾಗುತ್ತದೆಂಬುದು ಖಾತ್ರಿಯಾಗುವವರೆಗೆ ನಾವು ಕಾಯೋಣ. ಆದ್ದರಿಂದ, ದಿವಾನ್ ಬಹದ್ದೂರ್ ಕೆ.ಆರ್. ಶ್ರೀನಿವಾಸ ಅಯ್ಯಂಗಾರ್‌ರವರ ಉತ್ತಮ ಉದಾಹರಣೆಯನ್ನು ಅನುಸರಿಸಿ ಸಧ್ಯಕ್ಕೆ ಪ್ರಸ್ತುತ ವಿಷಯವನ್ನು ಸರ್ಕಾರದ ನಿರ್ಣಯಕ್ಕೆ ಬಿಡಬೇಕೆಂದು ವಿಷಯವನ್ನು ಮಂಡಿಸಿದ ಪ್ರಾಜ್ಞರಲ್ಲಿ ನಾನು ಮನವಿ ಮಾಡಿಕೊಳ್ಳುತ್ತೇನೆ. ಮತ್ತೊಂದು ಅಭಿಪ್ರಾಯವನ್ನು ನಾನು ಅವರ ಪರಿಗಣನೆಗಾಗಿ ಮುಂದಿಡುತ್ತೇನೆ. ತಯಾರಿಸಿರುವ ಕರಡಿನಲ್ಲಿ ತುಂಬ ದೋಷಗಳಿವೆ. ನನ್ನ ಸ್ನೇಹಿತರು ಈ ಅಭಿಪ್ರಾಯವನ್ನು ತಪ್ಪಾಗಿ ಭಾವಿಸದಿದ್ದರೆ, ನನಗೆ, ಕರಡನ್ನು ಮತ್ತೊಮ್ಮೆ ಸಂಪೂರ್ಣವಾಗಿ ಪರಿಶೀಲಿಸಬೇಕಾದ ಅಗತ್ಯವಿದೆಯೆಂದು ಕಂಡುಬರುತ್ತಿದೆ. ಈ ಕ್ರಮ ನಿರ್ವಹಣೆಯ ವಾಸ್ತವ ಹೊಣೆಗಾರಿಕೆಯು ಅಂತಿಮವಾಗಿ ಸರ್ಕಾರದ ಮೇಲೇ ಬೀಳುವುದರಿಂದ, ಈ ವಿಧೇಯಕದ ಉಪಬಂಧಗಳ ಕರಡು ತಯಾರಿಸುವುದರಲ್ಲಿ ಸರ್ಕಾರವೂ ತೊಡಗಿಕೊಳ್ಳುವುದು ಎಲ್ಲ ದೃಷ್ಟಿಯಿಂದಲೂ ಸೂಕ್ತವಾದುದು. ಆದ್ದರಿಂದ ಪ್ರಸ್ತುತ ಅವರು, ತಾವು ಈ ವಿಷಯವನ್ನು ಕುರಿತು ಎಚ್ಚರಿಕೆಯಿಂದ ವಿಚಾರಣೆ ಮಾಡುತ್ತೇವೆಂಬ ಭರವಸೆಯನ್ನು ಸರ್ಕಾರದಿಂದ ಪಡೆದುಕೊಂಡು ಈ ವಿಷಯವನ್ನು ಸರ್ಕಾರಕ್ಕೆ ಬಿಟ್ಟುಬಿಡಬೇಕೆಂದು ನಾನು ಮನವಿ ಮಾಡಿಕೊಳ್ಳುತ್ತೇನೆ; ಮತ್ತು ಅವರು ವಿಧೇಯಕದಲ್ಲಿ ಸೂಚಿಸಿರುವ ರೀತಿಯಲ್ಲಿ ಅಂಥ ಕ್ರಮಕೈಗೊಳ್ಳುವುದು ಅಗತ್ಯವೆಂದು ಭಾವಿಸಿದರೆ, ಅವರು ಅಂಥ ಕ್ರಮ ಕೈಗೊಳ್ಳುವರೆಂಬ ಭರವಸೆ ನನಗಿದೆ. ಆದ್ದರಿಂದ ಈಗಿರುವ ರೂಪದಲ್ಲಿ ವಿಧೇಯಕಕ್ಕೆ ನನ್ನ ಬೆಂಬಲ ಇಲ್ಲ.

(ಈ ಹಂತದಲ್ಲಿ ಪರಿಷತ್ತನ್ನು ಮಧ್ಯಾಹ್ನದ ಊಟದ ಸಲುವಾಗಿ ಮುಂದೂಡಲಾಯಿತು ಮತ್ತು ಮಧ್ಯಾಹ್ನ 3.30ಕ್ಕೆ ಮುಂದೂಡಲಾಯಿತು ಮತ್ತು ಮಧ್ಯಾಹ್ನ 3.30ಕ್ಕೆ ಪುನ: ಸಭೆ ಸೇರಿತು).

**ಶ್ರೀಯುತ ಡಿ.ವಿ. ಗುಂಡಪ್ಪ** – ಕ್ರಿಯಾಲೋಪ ಕುರಿತು ಸರ್ಕಾರದ ಪರವಾದ ಈ ಹೇಳಿಕೆಯ ತರುವಾಯ ಅಧಿಕೃತ ಸದಸ್ಯರು ತಮಗಿಷ್ಟ ಬಂದಂತೆ ಮತ ಚಲಾಯಿಸುವುದಕ್ಕೆ ಸ್ವತಂತ್ರರಾಗಿರುವರು ಎಂದು ಅಧ್ಯಕ್ಷರು ನಿನ್ನೆ ಮಾಡಿದ ಘೋಷಣೆಯ ಪರಿಣಾಮವೇನು?

**ಶ್ರೀಯುತ ಎಸ್.ಪಿ. ರಾಜಗೋಪಾಲಾಚಾರಿ**– ಕಳೆದ ಬಾರಿ ಏನಾಯಿತೆಂಬುದನ್ನು ನಾನು ಮಾನ್ಯ ಸದಸ್ಯರಿಗೆ ನೆನಪಿಸಬೇಕಾಗುತ್ತದೆ.

**ಶ್ರೀಯುತ ಡಿ.ವಿ. ಗುಂಡಪ್ಪ** – ನಿನ್ನೆಯಷ್ಟೇ ಏನಾಯಿತೆಂಬುದನ್ನು ನಾನು ಪ್ರಥಮ ಸದಸ್ಯರಿಗೆ ನೆನಪಿಸಬಹುದೇ?

**ಶ್ರಿ ಎಸ್.ಪಿ. ರಾಜಗೋಪಾಲಾಚಾರಿ**– ಮೊದಲನೆಯದಾಗಿ ಕಳೆದ ಬಾರಿ ಏನಾಯಿತು. ಆನಂತರ ನಿನ್ನೆ ಏನು ನಡೆಯಿತು.

ಕಳೆದ ಬಾರಿ ಮಾನ್ಯ ಇದೇ ಸದಸ್ಯರು ಇದೇ ಪ್ರಶ್ನೆ ಎತ್ತಿದರು. ಆಗ ಅದನ್ನು ತೀರ್ಮಾನಿಸಲಾಯಿತು. ನಿನ್ನೆ ಮಾನ್ಯ ಸದಸ್ಯರು, ಅಧಿಕೃತ ಸದಸ್ಯರಿಗೆ ತಮ್ಮ ಇಚ್ಛಾನುಸಾರ ಮತ ಚಲಾಯಿಸುವ ಹಕ್ಕು ನೀಡಲಾಗಿದೆಯೆಂದು ಸ್ಪಷ್ಟವಾಗಿ ಹೇಳಿದರು. ಅದು ಸರಿಯಲ್ಲ.

**ಶ್ರೀಯುತ ಡಿ.ವಿ. ಗುಂಡಪ್ಪ** – ಆ ಸದಸ್ಯರು ತಮ್ಮ ಇಚ್ಛಾನುಸಾರ ಮತ ಚಲಾಯಿಸಲು ಸ್ವತಂತ್ರರೆಂದು ನಾನೆಂದೂ ಹೇಳಿಲ್ಲ. ಅದರ ಬದಲು ಸರ್ಕಾರಿ ಸದಸ್ಯರು ಸೂಚಿಸಿದಂತೆ ಅವರು ಮತ ಚಲಾಯಿಸಿದರು. ಆದರೆ, ನಿನ್ನೆ ದಿನ ಅಧ್ಯಕ್ಷರು, ಅಧಿಕೃತ ಸದಸ್ಯರು ತಮ್ಮ ಇಚ್ಛಾನುಸಾರವಾಗಿ ಮತ ಚಲಾಯಿಸಲು ಸ್ವತಂತ್ರಾಗಿರುತ್ತಾರೆಂದು ಹೇಳಿದರು.

**ಶ್ರೀಯುತ ಎಸ್.ಪಿ. ರಾಜಗೋಪಾಲಾಚಾರಿ**– ಕಳೆದ ಸಲ ಅಧಿಕೃತ ಸದಸ್ಯರು ಸರ್ಕಾರಿ ಸದಸ್ಯರು ಸರ್ಕಾರದ ಧೋರಣೆಯನ್ನು ಸೂಚಿಸಿದ ನಂತರ ಮತ ಚಲಾಯಿಸಿದ್ದರು. ಈಗ ಸರ್ಕಾರವು, ಈ ವಿಧೇಯಕಕ್ಕೆ ಸಂಬಂಧಪಡುವಷ್ಟರ ಮಟ್ಟಿಗೆ, ಕೆಲವು ವಿಚಾರಗಳನ್ನು ಒಪ್ಪಿಕೊಳ್ಳುವುದಕ್ಕೊಳಪಟ್ಟು ಆಯ್ಕೆ ಸಮಿತಿಗೆ ಸಲ್ಲಿಸಬೇಕು ಎಂದು ನಿರ್ಧರಿಸಿದೆ. ಇದು ಸರ್ಕಾರದ ಹೇಳಿಕೆ. ಮತ್ತು ಕಳೆದ ಬಾರಿಯಂತೆ ಅಧಿಕೃತ ಸದಸ್ಯರು ಸರ್ಕಾರದ ಪರವಾಗಿ ಮತ ಚಲಾಯಿಸುವರು.

**ಶ್ರೀಯುತ ಡಿ.ವಿ. ಗುಂಡಪ್ಪ**– ಹಾಗಾದರೆ ನಿನ್ನೆ ಮಾಡಿದ ಘೋಷಣೆ ರದ್ದಾಗುವುದೇ?

**ಶ್ರೀಯುತ ಎಸ್.ಪಿ. ರಾಜಗೋಪಾಲಾಚಾರಿ** – ಮಾರ್ಪಾಡುಗೊಳಿಸಲಾಗಿದೆ.

**ಶ್ರೀಯುತ ಡಿ.ವಿ.ಗುಂಡಪ್ಪ** – ಮಾರ್ಪಾಟುಗೊಳಿಸಿಲ್ಲ, ಸಂಪೂರ್ಣವಾಗಿ ರದ್ದುಗೊಳಿಸಿದೆ. ಈ ಪ್ರಕ್ರಿಯೆಯು ನಮ್ಮಲ್ಲಿ ಬಹಳಷ್ಟು ಜನರನ್ನು ಪೇಚಿಗೆ ಸಿಲಿಕಿಸುತ್ತೆಂಬ ಅಭಿಪ್ರಾಯವನ್ನು ನಾನು ವ್ಯಕ್ತಪಡಿಸಬಹುದೇ? ನಾನು ಪ್ರಕ್ರಿಯೆ, ಮೊದಲಾದವುಗಳನ್ನು ಕುರಿತು ನನ್ನ ಅಭಿಪ್ರಾಯ ವ್ಯಕ್ತ ಪಡಿಸುವ ಇಂಗಿತ ಹೊಂದಿದ್ದೆ. ನಾನು ನನ್ನ ಭಾವನೆಗಳನ್ನು ವ್ಯಕ್ತಪಡಿಸಿದ್ದರೆ ಚೆನ್ನಾಗಿರುತ್ತಿತ್ತು.

**ಶ್ರೀಯುತ ಎಸ್.ಪಿ. ರಾಜಗೋಪಾಲಾಚಾರಿ** – ಆ ವಿಷಯ ಕುರಿತೇ ನಾನು ಒಂದರೆಡು ಮಾತನಾಡಬಯಸುತ್ತೇನೆ.

**ಶ್ರೀಯುತ ಡಿ.ವಿ. ಗುಂಡಪ್ಪ** – ನಾನು ತುಂಬ ಉಪಕೃತನಾಗಿರುತ್ತೇನೆ.

(1–7–1936)

**ಶ್ರೀಯುತ ಡಿ.ವಿ. ಗುಂಡಪ್ಪ**.– ಇಂಥ ಕ್ರಮದ ಉಪಯೋಗದ ಕುರಿತು ನನಗೆ ಅನುಮಾನಗಳಿದ್ದವು. ನಾನು ಆಯ್ಕೆ ಸಮಿತಿಯಲ್ಲಿದ್ದರೂ, ಮತ್ತು ಅಲ್ಲಿ ನಡೆದ ಚರ್ಚೆಗಳ ಪ್ರಯೋಜನ ಪಡೆದರೂ, ನನ್ನ ಅನುಮಾನಗಳು ಹಾಗೆಯೇ ಮುಂದುವರೆದಿವೆಯೆಂದು ಒಪ್ಪಿಕೊಳ್ಳುತ್ತೇನೆ. ಆದಾಗ್ಯೂ, ನಾನು ಆಯ್ಕೆ ಸಮಿತಿಯ ವರದಿಗೆ ಅರೆಮನಸ್ಸಿನಿಂದ ಸಹಿ ಮಾಡಿಲ್ಲ. ಏಕೆಂದರೆ ಈ ಕಾನೂನು ನೇರವಾಗಿ ಏನೂ ಪ್ರಯೋಜನವನ್ನುಂಟು ಮಾಡದಿದ್ದರೂ ಸಹ ಇದು ಈ ರಾಜ್ಯವನ್ನು ಇತರ ಮುಂದುವರೆದ ರಾಷ್ಟ್ರಗಳ ಸಾಲಿನಲ್ಲಿ ತರಬಹುದೆಂಬ ಕಾರಣದಿಂದಾಗಿ ಸಹಿ ಮಾಡಿದ್ದೇನೆ. ನಾನು ಇದಿಷ್ಟನ್ನೇ ಅದರಿಂದ ನಿರೀಕ್ಷಿಸಬಹುದಾಗಿರುವುದು. ಹೆಚ್ಚು ಸಕಾರಾತ್ಮಕವಾದ ಫಲಿತಾಂಶಗಳನ್ನು ನೀಡುವುದು ಇದಕ್ಕೆ ಸಾಧ್ಯವಾದಲ್ಲಿ, ನೀಡಿದ್ದೇ ಆದಲ್ಲಿ, ಶ್ರೀಯುತ ಮಲ್ಲಪ್ಪನವರು ಋಣಿಯಾಗಿರುವುದಕ್ಕಿಂತಲೂ ನಾನು ಹೆಚ್ಚು ಋಣಿಯಾಗಿರುತ್ತೇನೆ.

ಹೀಗೆ ಹೇಳುವ ಮೂಲಕ ನಾನು, ಸಮಿತಿಯ ಸನ್ಮಾನ್ಯ ಅಧ್ಯಕ್ಷರಿಂದ ಪಡೆದ ಅಪಾರವಾದ ಸಹಾಯಕ್ಕೆ ಕೃತಜ್ಞತೆಗಳನ್ನು ಅರ್ಪಿಸುವಲ್ಲಿ ಶ್ರೀಯುತ ಮಲ್ಲಪ್ಪನವರೊಂದಿಗೆ ಜೊತೆಗೂಡುತ್ತೇನೆ. ಶ್ರೀಯುತ ಮಲ್ಲಪ್ಪನವರು ತಮ್ಮ ಕರಡು ದೋಷರಹಿತವಾಗಿದೆಯೆಂದು ಕ್ಲೇಮು ಮಾಡುತ್ತಾರೆಂದು ನಾನು ಭಾವಿಸುವುದಿಲ್ಲ. ಅದೊಂದು ಕಠಿಣ ಕೆಲಸ, ಹಲವಾರು ಕಾನೂನುಗಳನ್ನು ಮನಸ್ಸಿನಲ್ಲಿಟ್ಟುಕೊಳ್ಳಬೇಕಾಗಿತ್ತು ಮತ್ತು ಮೈಸೂರಿನಲ್ಲಿ ಚಾಲ್ತಿಯಲ್ಲಿರುವ ಪರಿಸ್ಥಿತಿಗಳ ದೃಷ್ಟಿಯಿಂದ ಇಡೀ ವಿಧೇಯಕವನ್ನು ಮರುರೂಪಿಸಬೇಕಾಗಿತ್ತು. ಹಾಗಾಗಿ ಇದೊಂದು ಬಹುತೊಡಕಿನ ಕೆಲಸವಾಗಿತ್ತು. ಆದ್ದರಿಂದ ನಾನು, ವಿಧೇಯಕವು ಈಗಿರುವಂತೆ ಇಷ್ಟು ಸುಧಾರಿತ ರೂಪದಲ್ಲಿ ಕಾಣುವುದಕ್ಕೆ ಶ್ರೀಯುತ ಮಲ್ಲಪ್ಪನವರ ಸ್ವಂತ ವಿವೇಚನಾಶಕ್ತಿಯು ಅಪಾರವಾಗಿ ಕೊಡುಗೆ ನೀಡಿದೆಯೆಂಬುದನ್ನು ಇಲ್ಲಿ ಸ್ಮರಿಸಲೇಬೇಕು.

ಮಾನ್ಯರೇ ನಾನು ಈಗ ಶ್ರೀಯುತ ಮಲ್ಲಪ್ಪನವರು ಸೂಚಿಸಿರುವ ತಿದ್ದುಪಡಿಯ ವಿಚಾರಕ್ಕೆ ಬರುತ್ತೇನೆ. "ಆ ಪ್ರದೇಶದಲ್ಲಿ" ಎಂಬ ಪದಗಳನ್ನು ತೆಗೆದುಹಾಕಬೇಕೆಂದು ಶ್ರೀಯುತ ಮಲ್ಲಪ್ಪನವರು ಸೂಚಿಸಿರುವ ತಿದ್ದುಪಡಿಗೆ ಸಂಬಂಧಿಸಿದಂತೆ ಶ್ರೀಯುತ ಭಾಷ್ಯಂ ಅಯ್ಯಂಗಾರ್‌ರವರ ಪ್ರಶ್ನೆಗೆ ನೀಡಿರುವ ಪ್ರತಿಕ್ರಿಯೆಯೇ ಇಲ್ಲಿ ಅನ್ವಯವಾಗುತ್ತದೆ. ಎಂದು ಹೇಳಬಯಸುತ್ತೇನೆ. ಅವರು ಇದನ್ನು ಔಪಚಾರಿಕ ವಿಧಾನದಲ್ಲಿ ಒತ್ತಿ ಹೇಳುವುದಿಲ್ಲವೆಂದು ಭಾವಿಸುತ್ತೇನೆ.

**ಅಧ್ಯಕ್ಷರು**– ಯಾರೂ ಯಾವುದೇ ತಿದ್ದುಪಡಿಗೆ ಒತ್ತಾಯಿಸುತ್ತಿಲ್ಲ.

**ಶ್ರೀಯುತ ಡಿ.ವಿ.ಗುಂಡಪ್ಪ** – ಶ್ರೀಯುತ ಮಲ್ಲಪ್ಪನವರು ತಮ್ಮ ತಿದ್ದುಪಡಿಯನ್ನು ತರಬೇಕೆಂದು ಒತ್ತಾಯ ಮಾಡುತ್ತಿಲ್ಲವೆಂದು ಭಾವಿಸುತ್ತೇನೆ.

**ಅಧ್ಯಕ್ಷರು**– ಶ್ರೀಯುತ ಮಲ್ಲಪ್ಪನವರು ಸರ್ಕಾರ ಈ ಎಲ್ಲಾ ಅಂಶಗಳನ್ನು ಪರಿಗಣನೆಗೆ ತೆಗೆದುಕೊಂಡ ನಂತರ ಅಧಿಸೂಚನೆ ಹೊರಡಿಸಬಹುದೆಂದು ಹೇಳಿದರೆಂದು ನಾನು ಭಾವಿಸಿದೆ.

**ಶ್ರೀಯುತ ಡಿ.ಎಸ್. ಮಲ್ಲಪ್ಪ** – ಸರ್ಕಾರ, ವಿಧೇಯಕ ಕಾರ್ಯಾಚರಣೆಗಳನ್ನು ವಿಸ್ತರಿಸುವ ಹಕ್ಕು ಹೊಂದಿರುವುದರಿಂದಾಗಿ, ಆ ಖಂಡದಲ್ಲಿ "ಆ ಪ್ರದೇಶದಲ್ಲಿ" ಎಂಬ ಪದಗಳು ಇದ್ದರೆ ಅನಾನುಕೂಲವಾಗುತ್ತದೆ.

**ಅಧ್ಯಕ್ಷರು**– ಅವರು ಈ ಎಲ್ಲಾ ಸಂಗತಿಗಳನ್ನು ಪರಿಗಣನೆಗೆ ತೆಗೆದುಕೊಳ್ಳುವರು. ಪ್ರದೇಶ ಎಂಬುದು ಸಣ್ಣ ವಿಷಯವಲ್ಲ. ಅದು ರಾಜ್ಯ ಅಥವಾ ಜಿಲ್ಲೆಯ ಭಾಗವಾಗಿರಬಹುದು. ಆದ್ದರಿಂದ ಅದು ಪಟ್ಟಣಕ್ಕೆ ಮಾತ್ರ ಸೀಮಿತವಾಗಿರುವುದಿಲ್ಲ. ಸರ್ಕಾರ, ಈ ಎಲ್ಲಾ ಅಂಶಗಳನ್ನು ಗಣನೆಗೆ ತೆಗದುಕೊಂಡು ಉದಾರ ಮನೋಭಾವದಿಂದ ಅಧಿಸೂಚನೆ ಹೊರಡಿಸುವುದು. ಅದಕ್ಕೆ ಕೆಲವು ಇತಿಮಿತಿಗಳಿರಬೇಕು. ಉದಾಹರಣೆಗೆ,ಅವರು ಮದ್ರಾಸ್‌ನಲ್ಲಿ ಒಂದು ಹಾಗೂ ಬಾಂಬೆಯಲ್ಲಿ ಮತ್ತೊಂದು ರಕ್ಷಣಾಲಯವಿದೆ ಎಂದು ಹೇಳಬಹುದು. ಹಾಗೆ ಅದನ್ನು ವಿಸ್ತರಿಸುವುದಕ್ಕೆ ಸಾಧ್ಯವಿದೆ. ಸ್ಥಳೀಯ ಪ್ರದೇಶ ಎಂದರೆ ಒಂದು ನಿರ್ದಿಷ್ಟ ಹಳ್ಳಿ ಎಂದರ್ಥವಲ್ಲ. ಅದು ಇಡೀ ಜಿಲ್ಲೆಯೇ ಆಗಬಹುದು. ಆ ಹಳ್ಳಿಯಲ್ಲಿ ರಕ್ಷಣಾಲಯಗಳನ್ನು ಹೊಂದಿಲ್ಲದಿದ್ದರೂ ಆ ಜಿಲ್ಲೆಯಲ್ಲಿ ಎಲ್ಲಾದರೂ ಹೊಂದಿರಬಹುದು. ಅದು ಈ ರೀತಿ ಇರುವುದರಿಂದ ಯಾವ ತೊಂದರೆಯೂ ಇಲ್ಲ. ಕಾರ್ಯಾಚರಣೆಗೊಳಿಸುವಾಗ ಸಾಧ್ಯವಾದಷ್ಟು ಉದಾರವಾಗಿ ಅರ್ಥೈಸುವಂತೆ ನೋಡಿಕೊಳ್ಳೋಣ.

**ರಾಜಸಭಾಭೂಷಣ ದಿವಾನ್ ಬಹದ್ದೂರ್ ಕೆ.ಆರ್.ಶ್ರೀನಿವಾಸ ಅಯ್ಯಂಗಾರ್**– ಕ್ರಿಯಾಲೋಪ: ಶ್ರೀಯುತ ಮಲ್ಲಪ್ಪನವರು ಈ ಹಂತದಲ್ಲಿ ತಿದ್ದುಪಡಿಯನ್ನು ಮಂಡಿಸಲು ಸಾಧ್ಯವಿಲ್ಲ.

**ರಾಜಚರಿತವಿಶಾರದ ರಾವ್ ಸಾಹೇಬ್ ಸಿ. ಹಯವದನರಾವ್** – ಇದು ಕಾನೂನಿನ ಮೂಲಬೇರನ್ನೇ ಕತ್ತರಿಸಿ ಹಾಕುತ್ತದೆ.

**ಅಧ್ಯಕ್ಷರು** – ಸರ್ಕಾರ ಇದನ್ನು ವಿಶಾಲ ಪ್ರದೇಶಗಳಿಗೂ ಅನ್ವಯಿಸುತ್ತದೆ.

**ಶ್ರೀ. ಡಿ.ಎಸ್. ಮಲ್ಲಪ್ಪ** – ಹಾಗಾದರೆ ಸರಿ. ಸರ್ಕಾರದ ಭರವಸೆಯ ಕಾರಣದಿಂದ ನಾನು ತಿದ್ದುಪಡಿಗಾಗಿ ಒತ್ತಾಯಿಸುವುದಿಲ್ಲ.

**ಶ್ರೀಯುತ ಡಿ.ವಿ.ಗುಂಡಪ್ಪ** – ಶ್ರೀಯುತ ಮಲ್ಲಪ್ಪನವರು ತಾವು ಆಕ್ಷೇಪಣೆ ವ್ಯಕ್ತಪಡಿಸಿದ ನುಡಿಗಟ್ಟನ್ನು ಉಳಿಸುಕೊಳ್ಳುವಂತೆ ಮನವೊಲಿಸಿದುದಕ್ಕಾಗಿ ನನಗೆ ಸಂತಸವೆನಿಸುತ್ತದೆ. ಏನೇ ಆದರೂ ಈ ಕಾನೂನು ಕಾರ್ಯ ನಿರ್ವಹಿಸಬೇಕಾದರೆ ನಾವು ಪ್ರತಿಯೊಂದಕ್ಕೂ ಸರ್ಕಾರವನ್ನೇ ಅವಲಂಬಿಸಬೇಕು. ಇದು ಬಹು ಮುಖ್ಯವಾಗಿ ಸರ್ಕಾರ ಕೈಗೊಳ್ಳಬೇಕಾದ ಕ್ರಮವಾಗಿರುವುದರಿಂದ ಅವರು ಸರ್ಕಾರದ ತೀರ್ಪಿನ ಸದುದ್ದೇಶ ಮತ್ತು ವಿವೇಚನೆಯಲ್ಲಿ ಭರವಸೆಯಿಟ್ಟು ಒಳ್ಳೆಯ ಕೆಲಸ ಮಾಡಿದ್ದಾರೆ.

ರಾಜ್ಯದಲ್ಲಿ ಪ್ರಪ್ರಥಮ ಅಧಿಕಾರೇತರ ಕಾಯಿದೆಯ ಯಶಸ್ವೀ ರಚನಕಾರರಾದ ಶ್ರೀಯುತ ಮಲ್ಲಪ್ಪನವರಿಗೆ ನನ್ನ ತುಂಬು ಹೃದಯದ ಅಭಿನಂದನೆಗಳನ್ನು ಅರ್ಪಿಸುತ್ತಾ ನಾನು ನನ್ನ ಮಾತುಗಳನ್ನು ಮುಕ್ತಾಯಗೊಳಿಸಬಯಸುತ್ತೇನೆ. ಪರಿಷತ್ತಿನ ಚರಿತ್ರೆಯಲ್ಲಿ ಇದು ಸ್ಮರಣೀಯವಾದುದು. ಖಂಡಿತವಾಗಿಯೂ ಇಡೀ ಸದನ ಶ್ರೀ ಮಲ್ಲಪ್ಪ ಅವರಿಗೆ ಅಭಿನಂದನೆ ಸಲ್ಲಿಸುತ್ತದೆ.

ಮಾನ್ಯರೇ, ನಾನು ಈ ಸಂಬಂಧವಾಗಿ ಸರ್ಕಾರಕ್ಕೆ ಒಂದು ಮನವಿ ಮಾಡಿಕೊಳ್ಳಬಯಸುತ್ತೇನೆ. ಈಗ ವಿಧೇಯಕವನ್ನು ಶಾಸನ ಪುಸ್ತಕದಲ್ಲಿ ಸೇರಿಸಲಾಗುವುದು ಎಂಬುದು ಖಚಿತವಾದಂತೆಯೇ. ಇದು ಸರ್ಕಾರದ ಎರಡು ಅಂಶಗಳಿಗೆ ಸಂಬಂಧಿಸಿದಂತೆ ಬಹು ಮುಖ್ಯವಾದ ಹೊಣೆಗಾರಿಕೆಯನ್ನು ಹೊರಿಸುತ್ತದೆ. ಮೊದಲನೆಯದಾಗಿ ರಕ್ಷಣಾಲಯಗಳನ್ನು ಒದಗಿಸುವುದು ಮತ್ತು ಎರಡನೆಯದಾಗಿ ಪೊಲೀಸ್ ಇಲಾಖೆಯ ದಕ್ಷತೆ, ನಿಷ್ಠೆ ಮತ್ತು ಪ್ರಾಮಾಣಿಕತೆಯ ಮೇಲೆ. ಈ ಕಾನೂನು ಮನೆಗಳನ್ನು ಶೋಧಿಸುವುದು ಮತ್ತು ಜನರನ್ನು ತಪಾಸಣೆ

ಮಾಡುವುದು ಹಾಗೂ ಅವರ ನಡೆಯನ್ನು ಪರಿಶೀಲಿಸುವುದು ಮತ್ತು ಅವರನ್ನು ಪರಿವೀಕ್ಷಣೆಯಡಿಯಲ್ಲಿ ಇಡುವುದರ ಉದ್ದೇಶಗಳಿಗಾಗಿ ಪೊಲೀಸ್ ಅಧಿಕಾರಿಗಳಿಗೆ ಬಹಳ ಗಣನೀಯವಾದ ಅಧಿಕಾರಗಳನ್ನು ನೀಡುತ್ತದೆ. ಇವು ಶಾಂತಿ ಪ್ರಿಯರಾದ ಸಾರ್ವಜನಿಕರ ಖಾಸಗಿ ಸ್ವಾತಂತ್ರ್ಯಕ್ಕೆ ಕಿರುಕುಳವುಂಟು ಮಾಡಬಹುದಾದ ಮತ್ತು ಹಸ್ತಕ್ಷೇಪವುಂಟು ಮಾಡಬಹುದಾಂಥ ಅಪರಿಮಿತವಾದ ಅಧಿಕಾರಗಳಾಗಿವೆ. ಈ ಅಪರಿಮಿತ ಅಧಿಕಾರಗಳನ್ನು ಪೊಲೀಸರಿಗೆ ಕೊಟ್ಟಿರುವುದರಿಂದ ಸರ್ಕಾರ ಈ ಕಾಯಿದೆಯಲ್ಲಿ ತಿಳಿಸಿರುವ ದರ್ಜೆಗಳಿಗೆ ಅಧಿಕಾರಿಗಳನ್ನು ನೇಮಕ ಮಾಡುವಾಗ ವಿಶೇಷವಾದ ಎಚ್ಚರಿಕೆ ವಹಿಸಬೇಕಾಗುತ್ತದೆಯೆಂಬುದು ನನ್ನ ಭಾವನೆ. ಸೂಪರಿಂಟೆಂಡೆಂಟ್ ಆಫ್ ಪೊಲೀಸ್‌ರವರಿಗೆ ಹೆಚ್ಚಿನ ಅಧಿಕಾರಗಳನ್ನು ನೀಡಲಾಗಿದೆ ಮತ್ತು ಅವರು ಈಗ ಸೇವೆ ಸಲ್ಲಿಸುತ್ತಿರುವ ಹಲವರಿಗಿಂತ ಹೆಚ್ಚು ಉತ್ತಮ ವ್ಯಕ್ತಿಗಳಾಗಿರುತ್ತಾರೆಂಬುದು ನನ್ನ ನಂಬಿಕೆ. ಇದನ್ನು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್‌ರವರ ಕ್ಷಮೆ ಕೋರಿ ಹೇಳುತ್ತೇನೆ. ಈ ಅಧಿಕಾರಗಳನ್ನು ಅನುಭವ, ವಯಸ್ಸಿನಲ್ಲಿ ಹಿರಿಯರಾದ ಮತ್ತು ನಿಷ್ಕಳಂಕ ನಡತೆಯುಳ್ಳ ವ್ಯಕ್ತಿಗಳು ಮಾತ್ರವೇ ಯಾವುದೇ ದೂಷಣೆಯಿಲ್ಲದೆ ಚಲಾಯಿಸಬಹುದು. ಸರ್ಕಾರ ಪೊಲೀಸ್ ಅಧಿಕಾರಿಗಳಾಗಿ ನೇಮಕ ಮಾಡುವುದಕ್ಕಾಗಿ ಜನರನ್ನು ಆಯ್ಕೆ ಮಾಡಿಕೊಳ್ಳುವುದಕ್ಕೆ ಅತಿ ಹೆಚ್ಚಿನ ಜಾಗರೂಕತೆ ವಹಿಸಿದೆ ಎಂದು ನಾನು ಭಾವಿಸುವುದಿಲ್ಲ. ಅವರು ಪೊಲೀಸ್ ಇಲಾಖೆಯಲ್ಲಿ ನೇಮಕಾತಿಗಳನ್ನು ಮಾಡುವ ವಿಷಯದಲ್ಲಿ ವಹಿಸಿರುವ ಜಾಗರೂಕತೆಗೆ ಸಂಬಂಧಿಸಿದಂತೆ ಮಾಡುವ ಯಾವುದೇ ಕ್ಲೇಮನ್ನು ನಾನು ಸಾರಾಸಗಟಾಗಿ ನಿರಾಕರಿಸುತ್ತಿಲ್ಲ. ಅವರು ಪೊಲೀಸ್ ಇಲಾಖೆಯಲ್ಲಿನ ಉನ್ನತ ಹುದ್ದೆಗಳಿಗೆ ವ್ಯಕ್ತಿಗಳನ್ನು ಆಯ್ಕೆ ಮಾಡಲು ಅನುಸರಿಸುತ್ತಿರುವ ನೀತಿಯಲ್ಲಿ ಗಮನಾರ್ಹ ಸುಧಾರಣೆಯನ್ನು ಮಾಡಲು ಅವಕಾಶವಿದೆ ಎಂಬುದಷ್ಟೇ ನನ್ನ ಭಾವನೆ. ಇದೂ ಸಹ ಪ್ರಾಸಂಗಿಕವಾಗಿ ಹೇಳಿದುದು. ಒಟ್ಟಾರೆಯಾಗಿ ನನಗೆ ಈ ವಿಧೇಯಕ ಸುಗಮವಾಗಿ ಅಂಗೀಕಾರವಾದ ಬಗ್ಗೆ ಸಂತಸವಿದೆ ಮತ್ತು ಶ್ರೀಯುತ ಮಲ್ಲಪ್ಪನವರು, ಯಾವುದೇ ಪ್ರಾಮಾಣಿಕ ಪ್ರಯತ್ನಕ್ಕೂ ಕೆಡಕನ್ನುಂಟು ಮಾಡದ ಮತ್ತು ದೇಶಕ್ಕೆ ಸ್ವಲ್ಪಮಟ್ಟಿಗೆ ಒಳಿತನ್ನೇ ಉಂಟುಮಾಡುತ್ತದೆಂದು ಅವರು ಭಾವಿಸುವಂಥ ಕಾನೂನಿನ ಖಂಡವನ್ನು ಶಾಸನ ಪುಸ್ತಕಕ್ಕೆ ಸೇರಿಸುವಂತೆ ಮಾಡಿದ ಸಂತೋಷ ಮತ್ತು ಆತ್ಮತೃಪ್ತಿ ಅವರಿಗೆ ದೊರೆಯಲೆಂದು ನಾನು ಹಾರೈಸುತ್ತೇನೆ.

**ಅಧ್ಯಕ್ಷರು**– ಈಗ ನಮ್ಮ ಮುಂದಿನ ಪ್ರಶ್ನೆ–

"ಮೈಸೂರು ರಾಜ್ಯದಲ್ಲಿ ಅನೈತಿಕ ವ್ಯವಹಾರವನ್ನು ತೊಡೆದುಹಾಕುವ ಕಾಯಿದೆಯನ್ನು ಜಾರಿಗೊಳಿಸುವುದಕ್ಕಾಗಿ, ರಚಿಸಿದ ಆಯ್ಕೆ ಸಮಿತಿಯ ವರದಿಯನ್ನು ಮತ್ತು ಅವರು ತಿದ್ದುಪಡಿ ಮಾಡಿದ ರೂಪದಲ್ಲಿರುವ ವಿಧೇಯಕವನ್ನು ಪರಿಗಣನೆಗೆ ತೆಗೆದುಕೊಳ್ಳಬಹುದು"

ಪ್ರಸ್ತಾವವನ್ನು ಅಂಗೀಕರಿಸಲಾಯಿತು.

(ಬಿ) ವಿಧೇಯಕವನ್ನು ತಿದ್ದುಪಡಿ ಮಾಡಿರುವಂತೆಯೇ ಅಂಗೀಕರಿಸುವ ಬಗ್ಗೆ ಪ್ರಸ್ತಾವ ಮಂಡನೆ.

**ಶ್ರೀಯುತ ಡಿ.ಎಸ್. ಮಲ್ಲಪ್ಪ.**– ಮಾನ್ಯರೇ ವಿಧೇಯಕವನ್ನು ತಿದ್ದುಪಡಿ ಮಾಡಿರುವಂತೆಯೇ ಅಂಗೀಕರಿಸಬೇಕೆಂಬ ಪ್ರಸ್ತಾವವನ್ನು ಮಂಡಿಸುತ್ತೇನೆ.

**ಶ್ರೀಯುತ ಡಿ. ಚನ್ನಪ್ಪ .**– ಮಾನ್ಯರೇ ನಾನು ಪ್ರಸ್ತಾವವನ್ನು ಸಮರ್ಥಿಸುತ್ತೇನೆ.

**ಅಧ್ಯಕ್ಷರು.**– ನಮ್ಮ ಮುಂದಿರುವ ಪ್ರಶ್ನೆ –

"ಮೈಸೂರು ರಾಜ್ಯದಲ್ಲಿ ಅನೈತಿಕ ವ್ಯವಹಾರವನ್ನು ತೊಡೆದು ಹಾಕುವ ಕಾಯಿದೆಯನ್ನು ಜಾರಿಗೊಳಿಸುವುದಕ್ಕಾಗಿನ ವಿಧೇಯಕವನ್ನು ತಿದ್ದುಪಡಿಯಾಗಿರುವಂತೆ ಅಂಗೀಕರಿಸಬಹುದು"

1–7–1936 ರಂದು ಪ್ರಸ್ತಾವವನ್ನು ಅಂಗೀಕರಿಸಲಾಯಿತು.

●

# ಅಸ್ಪೃಶ್ಯರಿಗೆ ದೇವಸ್ಥಾನದ ಪ್ರವೇಶ ನೀಡಬೇಕೆನ್ನುವ ಖಂಡನಾನಿರ್ಣಯ (Cut Motion) ಕುರಿತು

1936ರ ಜುಲೈ 25 ಮತ್ತು 27 ರದು ಶ್ರೀ ಟಿ. ರಾಮಚಂದ್ರ ಅವರು ಅಸ್ಪೃಶ್ಯರಿಗೆ ದೇವಸ್ಥಾನ ಪ್ರವೇಶದ ಹಕ್ಕನ್ನು ದೊರಕಿಸಿ ಕೊಡಬೇಕೆನ್ನುವ ಖಂಡನಾ ನಿರ್ಣಯ ಮಂಡಿಸಿದಾಗ ನಡೆದ ಚರ್ಚೆಯಲ್ಲಿ ಡಿವಿಜಿಯವರು ನಿರ್ಣಯವನ್ನು ವಿರೋಧಿಸಿ ಮಾತಾಡುತ್ತಾರೆ. ಆರಂಭದಲ್ಲಿ ಅವರ ಚರ್ಚೆಯು ವಿಧಾಯಕವಾದದ್ದು ಮತ್ತು ಪ್ರಯೋಗ ಸಾಧ್ಯತೆಯ ಕುರಿತು ಗಮನ ಹರಿಸುವಂತಹದು ಎನ್ನಿಸುತ್ತದೆಯಾದರೂ ಚರ್ಚೆಯ ಕೊನೆಯಲ್ಲಿ ಡಿವಿಜಿಯವರು ಕರ್ಮಠರಂತೆ–ಮೂಲಭೂತವಾದಿಯಂತೆ ಕಾಣಿಸುತ್ತಾರೆ. ಹರಿಜನರಿಗೆ ಪ್ರತ್ಯೇಕ ದೇವಸ್ಥಾನಗಳನ್ನು ನಿರ್ಮಿಸಿ ಕೊಡಬೇಕೆನ್ನುವ ಅವರ ವಾದ ಪ್ರಗತಿಶೀಲ ಮನಸ್ಸುಗಳಿಗೆ ಮುಜುಗರವನ್ನುಂಟು ಮಾಡುತ್ತದೆ.

– ಸಂ.

**ಶ್ರೀಯುತ ಡಿ.ಹೆಚ್. ಚಂದ್ರಶೇಖರಯ್ಯ**– ಸ್ವಾಮಿ, ಖೋತಾ ಪ್ರಸ್ತಾವವನ್ನು ಕುರಿತು ಮಾಡನಾಡುವಾಗ, ನಾನು ಕೆಲವು ಅಭಿಪ್ರಾಯಗಳನ್ನು ವ್ಯಕ್ತಪಡಿಸಲಿಚ್ಛಿಸುತ್ತೇನೆ. ಅಸ್ಪೃಶ್ಯರೆಂದು ಕರೆಯಲಾಗುವ ವರ್ಗ ಹಿಂದು ಸಮುದಾಯದ ಪ್ರಮುಖ ವರ್ಗಗಳಲ್ಲಿ ಒಂದು ಎಂಬುದು ಒಪ್ಪಿಕೊಂಡಿರುವ ವಿಷಯವಾಗಿದೆ. ನಾವು ನಮ್ಮನ್ನು ಹಿಂದೂಗಳೆಂದು ಗುರುತಿಸಿಕೊಳ್ಳುತ್ತೇವೆ. ನಮ್ಮ ಉನ್ನತ ತತ್ವ ಮತ್ತು ನೀತಿ ಸಂಹಿತೆಗಳ ಕುರಿತು ಅಭಿಮಾನದಿಂದ ಹೇಳಿಕೊಳ್ಳುತ್ತೇವೆ ಮತ್ತು ಮಾತನಾಡುತ್ತೇವೆ. ಆದರೆ ಹಿಂದೂ ಸಮುದಾಯದ ವರ್ಗವೊಂದು ಅಗೌರವಕ್ಕೆ ಮತ್ತು ಸಾಮಾಜಿಕ ಅಸಮಾನತೆಗೆ ಒಳಗಾಗಿದೆಯೆಂದಾಗ ಮಾತ್ರ ನಮ್ಮ ಹೃದಯಗಳು ಮುದುಡಿಕೊಳ್ಳುತ್ತವೆ. ಈ ಎಲ್ಲ ವರ್ಷಗಳಲ್ಲಿಯೂ ಇದು ಹಿಂದು ಸಮುದಾಯಕ್ಕೆ ಕಳಂಕಪ್ರಾಯವಾಗಿದೆ. ಹಿಂದೂ ಸಮುದಾಯದ ಎಲ್ಲ ವರ್ಗಗಳೂ ಒಂದು ಮತ್ತು ತಾವು ಒಗ್ಗಟ್ಟಾಗಿದ್ದೇವೆ ಎಂದು ಭಾವಿಸುವ ರೀತಿಯಲ್ಲಿ ಹಿಂದೂ ಸಮುದಾಯದಲ್ಲಿರುವ ಎಲ್ಲಾ ಅಸಮಾನತೆಗಳನ್ನು ತೊಡೆದುಹಾಕಲು ಸಿದ್ಧರಾಗಬೇಕಾದ ಕಾಲ ಹಾಗೂ ನಮ್ಮ ಅಧಿಕಾರದಲ್ಲಿರುವ ಎಲ್ಲವನ್ನು ಮಾಡುವಂಥ ಕಾಲ ಈಗ ಬಂದಿದೆ. ಅಸ್ಪೃಶ್ಯ ವರ್ಗಗಳಿಗೆ ಸಂಬಂಧಿಸಿರುವ ಮಟ್ಟಿಗೆ ಹೇಳುವುದಾದರೆ ಅವರ ಸಮಸ್ಯೆಯ ನಿವಾರಣೆ ಹಿಂದೆ ಒಂದು ಕಾಲದಲ್ಲಿದ್ದಂತೆ ಈಗ ಕಷ್ಟವಲ್ಲ. ಇದಕ್ಕೆ ಕಾರಣ ಮಹಾತ್ಮ ಗಾಂಧೀಜಿಯವರ ಮಹತ್ವದ ಪ್ರಯತ್ನಗಳು. ಅವರಿಗೆ

ನಾವು ಕೃತಜ್ಞರಾಗಿರಬೇಕು. ಅಧಿಕಾರೇತರ ವರ್ಗ ಮತ್ತು ಸರ್ಕಾರಗಳೆರಡೂ, ಅವರಿಗೆ ನ್ಯಾಯವನ್ನು ಒದಗಿಸಬೇಕೆಂಬ ವಿಷಯಕ್ಕೆ ಈಗ ಸ್ಪಷ್ಟವಾಗಿ ಮಾನ್ಯತೆ ನೀಡುತ್ತವೆ.

**ಶ್ರೀಯುತ ಡಿ.ವಿ. ಗುಂಡಪ್ಪ.**– ಈ ಪ್ರಶ್ನೆಯ ಬಗ್ಗೆ ಈವರೆಗೆ ಭಾಷಣಗಳಲ್ಲಿ ಹೇಳಿದ ಅಭಿಪ್ರಾಯವನ್ನು ನಾವು ತಿಳಿಸುವುದಕ್ಕಾಗಿ ನಾನು ಮಾಡನಾಡುತ್ತೇನೆ. ಈ ಹಿಂದೆ ಮಾಡನಾಡಿರುವವರು ಹೇಳಿರುವ ಆಯಾಮಕ್ಕೆ ಬದಲಾಗಿ ಮತ್ತೊಂದು ಆಯಾಮವಿದೆಯೆಂದು ಮತ್ತು ಆ ಆಯಾಮವೂ ಸಹ ಈ ಪರಿಷತ್ತಿನ ಪರಿಶೀಲನೆಗೆ ಯೋಗ್ಯವಾಗಿರುತ್ತದೆಂದು ನನ್ನ ಭಾವನೆ. ಈ ವಿಷಯಕ್ಕೆ ಮತ್ತೊಂದು ಆಯಾಮವಿದೆಯೆಂದು ತಿಳಿಸಿದ ಮಾತ್ರಕ್ಕೆ ಆ ಪಂಥವನ್ನು ನಂಬುವುದರಲ್ಲಿ ಒಬ್ಬನಾಗಿ ಮಾತನಾಡುತ್ತಿಲ್ಲವೆಂದು ನಾನು ಸ್ಪಷ್ಟಪಡಿಸಲು ಇಚ್ಛಿಸುತ್ತೇನೆ. ನನ್ನ ಸ್ನೇಹಿತರಾದ ಶ್ರೀಯುತ ರಾಮಚಂದ್ರರು ವಾದಿಸಿದಂತೆ ಸಮಾನತೆಯಲ್ಲಿ ಮತ್ತು ನ್ಯಾಯದಲ್ಲಿ ನಂಬಿಕೆಯಿರಿಸಿದವನು ನಾನು. ನ್ಯಾಯದ ಅತ್ಯಂತ ಪ್ರಾಥಮಿಕ ತತ್ವವೇ ಸಮಾನತೆಯನ್ನು ಆಧರಿಸಿರುತ್ತದೆ ಎಂದು ನಾನು ಭಾವಿಸುತ್ತೇನೆ. ನಾವು ನ್ಯಾಯಪರರಾಗಿರಬೇಕಾದರೆ ಇಲ್ಲಿ ಉಪಸ್ಥಿತರಿಲ್ಲದಿರುವ ಯಾವುದೇ ಗುಂಪು ಯಾವುದೇ ಅಭಿಪ್ರಾಯವನ್ನು ಹೊಂದಿದೆಯೇ ಅಥವಾ ಅವರ ಮನವಿಯನ್ನು ಪರಿಶೀಲಿಸಬೇಕಾಗಿದೆಯೇ ಎಂಬುದನ್ನು ಸಹ ನೆನಪಿಟ್ಟುಕೊಳ್ಳಬೇಕಾಗುತ್ತದೆ. ಆದ್ದರಿಂದ ನಾನು ಈ ಧಾರ್ಮಿಕ ಅಥವಾ ಸಮಾಜೋ–ಧಾರ್ಮಿಕ ವಿಷಯಕ್ಕೆ ಸಂಬಂಧಿಸಿದ ಚರ್ಚೆಯಲ್ಲಿ ಪ್ರಾತಿನಿಧ್ಯವಿಲ್ಲದ ಸಮುದಾಯದ ವಿಷಯವನ್ನು ಮಂಡಿಸಬಯಸುತ್ತೇನೆ.

ನಾನು, ಸ್ವತ: ಅವರ ಭಾವನೆಗಳನ್ನು ವೈಯುಕ್ತಿಕವಾಗಿ ಹಂಚಿಕೊಳ್ಳುವುದಿಲ್ಲವೆಂದು ಈಗಾಗಲೇ ಹೇಳಿದ್ದೇನೆ. ಆದರೆ ಶ್ರೀಯುತ ರಾಮಚಂದ್ರರವರು ವ್ಯಕ್ತಪಡಿಸಿದ ಎಲ್ಲಾ ಅಭಿಪ್ರಾಯಗಳ ಬಗ್ಗೆ ನನಗೆ ಸಹಾನುಭೂತಿಯಿದೆ. ಅವರ ಮತ್ತು ಅವರ ಬೆಂಬಲಿಗರ ಆದರ್ಶಗಳನ್ನು ನಾನು ಸಂಪೂರ್ಣವಾಗಿ ಒಪ್ಪುತ್ತೇನೆ. ಆದರೆ ಅವರು ಪ್ರತಿಪಾದಿಸಿರುವ ವಿಧಾನಗಳನ್ನು ಮತ್ತು ಅವರು ಮುಂದಿಟ್ಟಿರುವ ಚರ್ಚೆಗಳನ್ನು ಒಪ್ಪಿಕೊಳ್ಳಲು ನನಗೆ ಸಾಧ್ಯವಿಲ್ಲ.

ನಾನು ಈಗ ವಿಷಯಕ್ಕೆ ಬರುತ್ತೇನೆ. ಅತ್ಯಂತ ಹಿಂದಿನಿಂದಲೂ, ಹಿಂದು ಸಾಮಾಜಿಕ ಮತ್ತು ಧಾರ್ಮಿಕ ಸಂಸ್ಥೆಗಳ ಭಾಗವಾಗಿ ಮುಂದುವರಿದಿರುವ, ಕೆಲವು ಅನಿಷ್ಟಗಳನ್ನು ನಿವಾರಿಸಲು ಸರ್ಕಾರವೇ ಕ್ರಮ ಕೈಗೊಳ್ಳಬೇಕೆಂಬುವ ಪ್ರಸ್ತಾವವನ್ನು

ಶ್ರೀಯುತ ರಾಮಚಂದ್ರರು ಮಂಡಿಸಿದ್ದಾರೆ. ಹಿಂದೂ ಸಮಾಜ ವ್ಯವಸ್ಥೆಯಲ್ಲಿ ಗುರುತಿಸಲಾಗದ ಸ್ಥಾನ ಹೊಂದಿರುವವರ ಸಮುದಾಯಕ್ಕೆ ಅನ್ಯಾಯವಾಗಿದೆಯೆಂದು ದೂರಲಾಗಿದೆ. ವಾಸ್ತವವಾಗಿ, ಹರಿಜನ ಅಥವಾ ಶೋಷಿತ ವರ್ಗಗಳೆಂದು ಕರೆಯಲಾಗುವ ಸಮುದಾಯ ನಿಜವಾಗಿ ಹಿಂದೂಗಳಾಗಿದ್ದಾರೆಯೇ ಎಂದು ಪ್ರಶ್ನಿಸುವವರಿದ್ದಾರೆ. ನಾನು ವೈಯಕ್ತಿಕವಾಗಿ ಮತ್ತು ವಿನಮ್ರವಾಗಿ ಅವರನ್ನು ಹಿಂದೂಗಳೆಂದು ಒಪ್ಪುತ್ತೇನೆ. ಆದರೆ, ಅವರು ಹಿಂದೂಗಳಾಗಿರುವುದನ್ನೇ ಪ್ರಶ್ನಿಸುವವರಿದ್ದಾರೆ. ಎರಡನೆಯದಾಗಿ, ಅವರು ಹಿಂದೂ ಸಮುದಾಯದ ಭಾಗವಾಗಿದ್ದಾರೆಂದು ಒಪ್ಪಿಕೊಂಡರೂ ಸಹ, ಒಟ್ಟಾರೆ ಹಿಂದೂಗಳ ಜನಸಂಖ್ಯೆಯನ್ನು ಪರಗಣನೆಗೆ ತೆಗೆದುಕೊಂಡರೆ ಪ್ರಸ್ತುತ ಅವರು ಅಲ್ಪಸಂಖ್ಯಾತರಾಗಿದ್ದಾರೆ. ಹಿಂದೂ ಸಮಾಜವೆಂಬ ಸಮಾಜೋ–ಧಾರ್ಮಿಕ ಸಂಸ್ಥೆಯ ಅಲ್ಪಸಂಖ್ಯಾತರ ಹಕ್ಕುಗಳನ್ನು ಸರ್ಕಾರವು ಸುಭದ್ರಗೊಳಿಸಬೇಕೆಂದು ಶ್ರೀಯುತ ರಾಮಚಂದ್ರರು ಬಯಸುತ್ತಾರೆ. ಈ ಅಲ್ಪಸಂಖ್ಯಾತರ ಸ್ಥಾನವನ್ನು ಸರ್ಕಾರ ಪ್ರಯತ್ನದ ಮೂಲಕ ಉತ್ತಮಪಡಿಸಬೇಕು. ದೇವಸ್ಥಾನಗಳ ನಿರ್ವಹಣೆಯಲ್ಲಿ ಸರ್ಕಾರವು ಭಾಗವಹಿಸಬೇಕು ಮತ್ತು ಸಂಪ್ರದಾಯದ ಮೂಲಕವಾಗಿ ಈವರೆಗೆ ಅವರಿಗೆ ನಿರಾಕರಿಸಲಾಗಿರುವ ಈ ವಿಶೇಷ ಹಕ್ಕನ್ನು ಅವರಿಗೆ ದೊರಕಿಸಿಕೊಡಬೇಕು ಎನ್ನುತ್ತಾರೆ. ಸರ್ಕಾರವು ಮಸೀದಿಗಳು, ಚರ್ಚುಗಳು ಮತ್ತು ಮೊದಲಾದವುಗಳ ಸಂಬಂದದಲ್ಲಿರುವಂತೆ ದೇವಸ್ಥಾನಗಳಿಗೆ ಸಂಬಂಧಿಸಿದಂತೆಯೂ ಸಹ ಸರ್ಕಾರವು ಕೇವಲ ಟ್ರಸ್ಟಿಯಾಗಿರುತ್ತದೆಯೇ ವಿನ: ಅದು ಅವುಗಳ ನಿರುಪಾಧಿಕ ಮಾಲೀಕ ಅಥವಾ ಒಡೆಯನಾಗಿರಲು ಸಾಧ್ಯವಿಲ್ಲ ಎಂಬುದನ್ನು ನಿಮ್ಮ ಗಮನಕ್ಕೆ ತರಲು ಬಯಸುತ್ತೇನೆ. ಸರ್ಕಾರವು ದೇವಸ್ಥಾನಗಳು ಅಥವಾ ಅವುಗಳ ಸಂಪ್ರದಾಯಗಳಲ್ಲಿ ಅದು ಅಂದುಕೊಂಡ ಹಾಗೆ ಮಧ್ಯೆ ಪ್ರವೇಶಿಸಲು ಸ್ವಾತಂತ್ರ್ಯ ಹೊಂದಿದೆಯೆಂದು ನಾನು ಭಾವಿಸುವುದಿಲ್ಲ. ಈ ದೇವಸ್ಥಾನಗಳನ್ನು ಕಟ್ಟಿಸಿರುವ ಮತ್ತು ಅನೇಕ ಬಗೆಯ ಆಸ್ತಿಗಳನ್ನು ದತ್ತಿಕೊಟ್ಟಿರುವವರು ವಿಧಿಸಿದ ಸಂಪ್ರದಾಯಗಳು ಮತ್ತು ತತ್ವಗಳು ಮತ್ತು ನೀತಿಗಳನ್ನು ನಿರ್ವಹಿಸುವುದಷ್ಟೇ ಸರ್ಕಾರದ ಕರ್ತವ್ಯ. ಒಬ್ಬ ಟ್ರಸ್ಟಿಯಂತಿರುವ ಸರ್ಕಾರವು ಶ್ರೀಯುತ ರಾಮಚಂದ್ರ ಮತ್ತು ಅವರ ಬೆಂಬಲಿಗರು ಸೂಚಿಸಿರುವಂತೆ ಸರ್ಕಾರ ಧಾರ್ಮಿಕ ಸುಧಾರಕನ ಪಾತ್ರ ವಹಿಸಹೊರಡುವುದು ಸರಿಯೆಂದು ನಾನು ಭಾವಿಸುವುದಿಲ್ಲ. "ಹಿಂದೂ ಧರ್ಮದಲ್ಲಿ ಈಗಿರುವ ಪರಿಸ್ಥಿತಿಗಳಲ್ಲಿ ಅನ್ಯಾಯವಿದೆ. ಮತ್ತು ಹಿಂದೂ ಸಮುದಾಯದ ಒಂದು ವರ್ಗವು ತನ್ನ ನ್ಯಾಯಸಮ್ಮತ ಹಕ್ಕಿನಿಂದ ವಂಚಿತವಾಗಿದೆ. ಆದ್ದರಿಂದ ಈಗ ಮಧ್ಯ ಪ್ರವೇಶಿಸಿ ಈ ಅನ್ಯಾಯವನ್ನು ಸರಿಪಡಿಸುವುದು ನಿಮ್ಮ ಕೆಲಸ"

ಎಂದು ಹೇಳುತ್ತಾರೆ. ಇದು ಸರ್ಕಾರ ಮಾಡಬೇಕಾದ ಕೆಲಸ ಎಂದು ನಾನು ಭಾವಿಸುವುದಿಲ್ಲ. ಇದು ಸಮುದಾಯವೇ ಮಾಡಬೇಕಾದ ಕೆಲಸ. ಆದ್ದರಿಂದ ಸರ್ಕಾರ ಮಧ್ಯ ಪ್ರವೇಶಿಸಿದಲ್ಲಿ ಅದು ಸಮರ್ಥನೀಯವಾಗುವುದಿಲ್ಲ. ಅಷ್ಟೇ ಅಲ್ಲ. ನಾನು ತರುವಾಯ ಸೂಚಿಸುವ ಕೆಲವು ಷರತ್ತುಗಳಿಗೆ ಒಳಪಟ್ಟು ಈ ವಿಷಯದಲ್ಲಿ ಮಧ್ಯೆ ಪ್ರವೇಶಿಸದಿದ್ದಲ್ಲಿ ಸರ್ಕಾರ ಟೀಕೆಗೂ ಗುರಿಯಾಗಬೇಕಾಗುತ್ತದೆ.

ಈ ವಿಷಯದ ಮತ್ತೊಂದು ಮುಖವನ್ನು ನೋಡೋಣ. ಶ್ರೀಯುತ ರಾಮಚಂದ್ರ ಹಾಗೂ ಶ್ರೀಯುತ ಸುಬ್ಬರಾಮ ಶೆಟ್ಟಿ ಅವರು ಸಹ ಸಾರ್ವಜನಿಕ ಅಭಿಪ್ರಾಯದಲ್ಲಿ ಬದಲಾವಣೆ ಉಂಟಾಗಿದೆ ಎಂಬುದನ್ನು ಕುರಿತಂತೆ ದೀರ್ಘ ಚರ್ಚೆಯನ್ನು ಮಾಡಿದ್ದಾರೆ. ಸಾರ್ವಜನಿಕ ಅಭಿಪ್ರಾಯವು ವಾಸ್ತವವಾಗಿ ಬದಲಾಗಿದ್ದರೆ, ನಿಜವಾಗಿ ಹಿಂದೂ ಸಮುದಾಯ– ಜನತೆಯ ಮನಸ್ಸು ಅದರ ಪರವಾಗಿದ್ದರೇ ಸರ್ಕಾರ ಆ ಬಗ್ಗೆ ಯಾವ ನಿಲುವನ್ನು ತಳೆಯುತ್ತದೆ ಎಂಬುದು ನಮ್ಮನ್ನು ಚಿಂತಿಸುವಂತೆ ಮಾಡಬೇಕಿಲ್ಲ. ಏನೇ ಆದರೂ, ಬದಲಾವಣೆ ಉಂಟಾಗಿಯೇ ಆಗುತ್ತದೆ. ಜನರ ಧೋರಣೆಗಳು, ಆದರ್ಶಗಳು ಮತ್ತು ನಂಬಿಕೆಗಳಲ್ಲಿ ಅಗಾಧ ಪ್ರಮಾಣದ ಬದಲಾವಣೆಗಳುಂಟಾಗಿರುವುದಾದರೆ ಸರ್ಕಾರ ಪ್ರಶ್ನೆಯನ್ನು ಕುರಿತು ಯಾವ ದೃಷ್ಟಿಕೋನವನ್ನು ತಳೆದರೂ ಚಿಂತಿತರಾಗಬೇಕಿಲ್ಲ. ಸರ್ಕಾರ ಸಾರ್ವಜನಿಕ ಅಭಿಪ್ರಾಯವನ್ನು ತಡೆಯುವುದಿಲ್ಲ. ಆದ್ದರಿಂದ ಸಾರ್ವಜನಿಕ ಅಭಿಪ್ರಾಯವು ನಿಜವಾಗಿ ಪ್ರಗತಿಪರವಾಗಿದ್ದರೆ ಸರ್ಕಾರ ಯಾವ ನಿಲುವು ತಳೆಯುತ್ತದೆ ಎಂಬ ಬಗ್ಗೆ ನಾವು ಯೋಚಿಸಬೇಕಿಲ್ಲ. ಸಾರ್ವಜನಿಕ ಅಭಿಪ್ರಾಯವು ಅಷ್ಟು ಸುಲಭವಾಗಿ ಬದಲಾಗುತ್ತಿಲ್ಲ ಎಂಬುದು ನನ್ನ ಸ್ವಂತ ತಿಳಿವಳಿಕೆ. ಸಾರ್ವಜನಿಕ ಅಭಿಪ್ರಾಯವು ಮಹಾತ್ಮ ಗಾಂಧಿಯ ಉಪವಾಸ ಸತ್ಯಾಗ್ರಹದಂಥ ತುರ್ತು ಪರಿಸ್ಥಿತಿಯ ಒತ್ತಡದಲ್ಲಿ ಪ್ರಗತಿಪರವಾದಂತೆ ಕಂಡುಬರುವ ಪ್ರತಿಕ್ರಿಯೆಯನ್ನು ತೋರಿಸಿದರೂ ನಂತರ ಹಳೆಯ ಅಭಿಪ್ರಾಯಕ್ಕೆ ಅಂಟಿಕೊಳ್ಳುತ್ತದೆ. ನಮ್ಮ ದೇಶದಲ್ಲಿ ಸಾರ್ವಜನಿಕ ಅಭಿಪ್ರಾಯವು ತುಂಬಾ ಜಡವಾದುದು. ಅದು ಧಾರ್ಮಿಕ ವಿಷಯಗಳಲ್ಲಿ ಸುಲಭವಾಗಿ ಬದಲಾಗುವಂಥದಲ್ಲ. ಅದರಲ್ಲಿ ಸಾಂಪ್ರದಾಯಿಕ ನಂಬಿಕೆಗಳು ಮತ್ತು ರೂಢಿಗಳು ಸೇರಿಕೊಂಡಿದ್ದರೆ ಸಾರ್ವಜನಿಕ ಅಭಿಪ್ರಾಯ ಅದಾಗುವುದು ಅತ್ಯಂತ ನಿಧಾನ. ಸಾರ್ವಜನಿಕರ ಮನೋಭಾವದಲ್ಲಿ ದೊಡ್ಡ ಕ್ರಾಂತಿಕಾರಕ ಬದಲಾವಣೆಗಳಾಗಿವೆ ಎಂದು ಹೇಳುವುದು ಸರಿಯೆಂದು ನಾನು ಭಾವಿಸುವುದಿಲ್ಲ.

ಸಾರ್ವಜನಿಕರ ಅಭಿಪ್ರಾಯವನ್ನು ಗಣನೆಗೆ ತೆಗೆದುಕೊಳ್ಳಬೇಕಾದ ಕ್ಷೇತ್ರವಲ್ಲ ಇದು ಎಂಬುದನ್ನು ಹೇಳಲಿಚ್ಛಿಸುತ್ತೇನೆ. ಏಕೆಂದರೆ, ಈ ಕ್ಷೇತ್ರ ಧಾರ್ಮಿಕ ತತ್ವಗಳಿಗೆ ಸಂಬಂಧಿಸಿದುದಾಗಿದೆ. ಆದ್ದರಿಂದ ಎಲ್ಲಾ ಧಾರ್ಮಿಕ ತತ್ವಗಳ ಎಲ್ಲ ವಿಷಯಗಳಲ್ಲಿ ಸಾರ್ವಜನಿಕ ಅಭಿಪ್ರಾಯಗಳು ನಿರ್ಣಾಯಕ ಪಾತ್ರವನ್ನು ಹೊಂದಿರುವುದಿಲ್ಲ. ಉದಾಹರಣೆಗೆ ಮತ ಎಣಿಸುವುದರ ಮೂಲಕ ದ್ವೈತ ಸರಿಯೋ ಅಥವಾ ಅದ್ವೈತ ಸರಿಯೋ ಎಂಬುದನ್ನು ನಿರ್ಧರಿಸಲು ಸಾಧ್ಯವಿಲ್ಲ. ಧಾರ್ಮಿಕ ತತ್ವಗಳ ವಿಷಯಗಳನ್ನು ಮತಕ್ಕೆ ಹಾಕಲಾಗದು ಎಂಬುದನ್ನು ನನ್ನ ಗೆಳೆಯರಿಗೆ ಹೇಳಬೇಕು. ಉದಾಹರಣೆಗೆ, ಚುನಾವಣೆಯಲ್ಲಿ ಬಹುಮತ ಪಡೆದಿರುವ ವ್ಯಕ್ತಿಗೆ ಈ ಆಧಾರದ ಮೇಲೆ ಸ್ವರ್ಗಕ್ಕೆ ಪ್ರವೇಶ ಪಡೆಯಲು ಸಾಧ್ಯವೇ? ಇದರರ್ಥ ನಾನು ಅಲ್ಲಿಗೆ ಹೋಗುವ ಆತುರದಲ್ಲಿದ್ದೇನೆ ಎಂದಲ್ಲ. ಆದರೆ ಆ ಭರವಸೆಯನ್ನು ನೀವು ನೀಡಬಲ್ಲಿರಾ? ಇದು ಬಹುಸಂಖ್ಯಾತರ ಮತ್ತು ಅಲ್ಪಸಂಖ್ಯಾತರ ಪ್ರಶ್ನೆಯಲ್ಲ. ನೂರರಲ್ಲಿ ಒಬ್ಬನೇ ಒಬ್ಬ ವ್ಯಕ್ತಿ ಏಕಾದಶಿಯ ದಿನದಂದು ಉಪವಾಸ ಮಾಡುವುದರಿಂದ ಆತ್ಮೋನ್ನತಿಯಾಗುತ್ತದೆಂದು ನಂಬಬಹುದು. ನೀವು ಇದನ್ನು ನಂಬದಿದ್ದರೆ, ಬಲವಂತವಾಗಿ ಅವನಿಗೆ ನೀವು ಆಹಾರ ಸೇವನೆ ಮಾಡಿಸಲಾರಿರಿ. ಹಾಗೆಯೇ ತೊಂಬತ್ತೊಂಬತ್ತು ಜನ ಉಪವಾಸ ಮಾಡುವಾಗ, ಒಬ್ಬ ವ್ಯಕ್ತಿ ಭೂರಿ ಭೋಜನ ಮಾಡುತ್ತಿರಬಹುದು. ಹಾಗೆಂದ ಮಾತ್ರಕ್ಕೆ ಅವನನ್ನು ನೀವು ಉಪವಾಸ ಮಾಡುವಂತೆ ಬಲಾತ್ಕರಿಸಲಾಗದು. ಇದು ನಂಬಿಕೆಯ ಪ್ರಶ್ನೆ. ತತ್ವಪಾಲನೆಯ ಪ್ರಶ್ನೆ. ಇದನ್ನು ಸಂಖ್ಯೆಗಳ ಮತ್ತು ಬಹುಮತದ ಆಧಾರದ ಮೇಲೆ ಚರ್ಚಿಸಲಾಗುವುದಿಲ್ಲ.

ನಂತರ, ಶ್ರೀಯುತ ರಾಮಚಂದ್ರ ಅವರು ಇಡೀ ಹಿಂದುತ್ವವು ಸಮಾನತೆಯನ್ನು ಬೆಂಬಲಿಸುತ್ತದೆ ಎಂದು ಹೇಳಿದರು. ನಾನು ಹಿಂದೂವಾಗಿರಲು ನನಗೆ ತುಂಬಾ ಹೆಮ್ಮೆಯೆನಿಸುತ್ತದೆ; ನಾನೊಬ್ಬ ಸಾಂಪ್ರದಾಯಿಕ ಹಿಂದೂ. ಆದರೆ ನಾನು ಈ ಅಭಿಪ್ರಾಯವನ್ನು ಒಪ್ಪುವುದಿಲ್ಲ. ಹಿಂದುತ್ವದ ಮೂಲ ಸೆಲೆಯು ಸಮಾನತೆಯೆಂದಾದರೆ ಜಾತಿ ಪದ್ಧತಿ ಏಕಿದೆ? ತಮ್ಮ ವಾದಕ್ಕೆ ಅವರು ಆಚಾರ್ಯರು, ಮನುಸ್ಮೃತಿ ಮುಂತಾದವುಗಳನ್ನು ಉದಾಹರಿಸಿದ್ದಾರೆ. ನನ್ನ ಈ ಗೆಳೆಯರಿಗೆ ಆ ಮನುಸ್ಮೃತಿಯ ಕೆಲವು ಕುಪ್ರಸಿದ್ಧ ಸಾಮಾನ್ಯ ಪದ್ಯಗಳ ಪರಿಚಯವಿರಬೇಕು. ಶ್ರೀಯುತ ರಾಮಚಂದ್ರರವರು ಯಾವ ಅರ್ಥದಲ್ಲಿ 'ಸಮಾನತೆ' ಎಂಬ ಪದವನ್ನು, ಬಳಸುತ್ತಾರೋ ಆ ಅರ್ಥವನ್ನು ಮನುಸ್ಮೃತಿ ಪ್ರತಿಪಾದಿಸುವುದಿಲ್ಲ. ಹಿಂದುತ್ವದಲ್ಲಿ ಸಮಾನತೆಯನ್ನು ತರಲು ಪ್ರಯತ್ನಿಸಿರುವ ಹಲವು ಸುಧಾರಕರು ನಮ್ಮಲ್ಲಿದ್ದಾರೆ.

5750 - 11

ಇದರಲ್ಲಿ ಅನುಮಾನವಿಲ್ಲ. ಶ್ರೀಯುತ ಬಸವೇಶ್ವರರು ಅಂಥ ಸಮಾಜ ಸುಧಾರಕರಲ್ಲೊಬ್ಬರಾಗಿದ್ದರು. ಅವರು ಸಮಾನತೆಯನ್ನು ಸಮಾಜದಲ್ಲಿ ತರಲು ಪ್ರಯತ್ನಿಸಿದರು. ರಾಮಾನುಜಾಚಾರ್ಯರಿಗಿಂತ ಇವರು ಹೆಚ್ಚು ಯಶಸ್ಸನ್ನು ಪಡೆದರೆಂದು ನನಗನ್ನಿಸಿಲ್ಲ. ಇವರು ಇದರಲ್ಲಿ ಯಶಸ್ವಿಯಾದರೆಂದು ನಾನು ಹೇಳುತ್ತಿಲ್ಲ.

**ಶ್ರೀಯುತ ಡಿ.ಹೆಚ್. ಚಂದ್ರಶೇಖರಯ್ಯ** – ಅದು ಅವರ ತಪ್ಪಲ್ಲ.

**ಶ್ರೀಯುತ ಡಿ.ವಿ.ಗುಂಡಪ್ಪ** – ಅಲ್ಲವೇ ಅಲ್ಲ. ಈ ಜಾತಿಯ ಮನಸ್ಥಿತಿ ಎನ್ನುವುದು ಸಮಾನತೆಯನ್ನು ಒಪ್ಪುವುದಿಲ್ಲವೆಂಬುದನ್ನು ತೋರಿಸಲು ನಾನು ಅವರ ಕೃತ್ಯವನ್ನು ಉಲ್ಲೇಖಿಸಿದ್ದು. ಆದ್ದರಿಂದ, ಹಿಂದೂ ಧರ್ಮದ ಪ್ರಾಚೀನ ಶಾಸ್ತ್ರಗಳ ಹೆಸರಿನಲ್ಲಿ ಅದಕ್ಕೆ ಬೆಂಬಲ ಪಡೆಯುವ ಪ್ರಯತ್ನ ಮಾಡುವುದು ಬೇಡ. ಸಮಾನತೆಗಾಗಿ ನಾವು ವಾದಿಸುವುದಾದರೆ, ಹಿಂದುಧರ್ಮದ ಶಾಸ್ತ್ರಗಳನ್ನು ಬಿಟ್ಟುಬಿಡೋಣ.

**ಶ್ರೀಯುತ ಡಿ.ಹೆಚ್. ಚಂದ್ರಶೇಖರಯ್ಯ** – ಈಗಲೇ ಯಾಕಾಗಬಾರದು? ಹಾಗಾಗುವುದು ಒಳ್ಳೆಯದಲ್ಲವೆ?

**ಶ್ರೀಯುತ ಡಿ.ವಿ. ಗುಂಡಪ್ಪ** – ಒಪ್ಪಿದೆ. ಆದರೆ, ಅದನ್ನು ಪರಂಪರೆಯ ಹೆಸರಿನಲ್ಲಿ ವಿವರಿಸಲು ಹೋಗಬೇಡಿ. ದೇವಸ್ಥಾನಗಳ ಸಮಗ್ರ ಪೂಜಾ ಕ್ರಮವೇ ಹಿಂದೂ ಧರ್ಮಗ್ರಂಥಗಳ ಪೈಕಿ ಒಂದಾದ ಆಗಮಗಳನ್ನು ಆಧರಿಸಿದೆ. ಜೊತೆಗೆ ಅವುಗಳೊಂದಿಗೆ ಸಾಮರಸ್ಯ ಹೊಂದಿರುವಂಥದ್ದಾಗಿದೆ. ಈ ಆಗಮಗಳು ಹಿಂದೂ ತತ್ವಶಾಸ್ತ್ರದ ಆರು ಪ್ರಖ್ಯಾತ ಸಿದ್ಧಾಂತಗಳಿಗನುಸಾರವಾಗಿವೆ. ಅವುಗಳನ್ನು ಪೂರ್ವ ಮೀಮಾಂಸೆ ತತ್ವ ಸಿದ್ಧಾಂತಗಳೆಂದೂ ಕರೆಯಲಾಗುತ್ತದೆ. ಆ ತತ್ವ ಸಿದ್ಧಾಂತವು ಕೆಲವು ಅಕ್ಷರಗಳಿಂದಾದ ಕೆಲವು ಪದಗಳನ್ನು ಅದರದೇ ಆದ ನಿರ್ದಿಷ್ಟ ರೀತಿಯಲ್ಲಿ ಉಚ್ಚರಿಸಿದಾಗ ಕೆಲವು ನಿರ್ದಿಷ್ಟ ಆಚರಣೆಗಳೊಂದಿಗೆ ರಹಸ್ಯ ಪರಿಣಾಮಗಳನ್ನು ಉಂಟು ಮಾಡಬಲ್ಲವು ಎಂಬ ಕಲ್ಪನೆಯನ್ನು ಆಧರಿಸಿದೆ. ನಿರ್ದಿಷ್ಟ ಭಂಗಿಯಲ್ಲಿರಿಸಿದ ಒಂದು ನಿರ್ದಿಷ್ಟ ಮೂರ್ತಿಯನ್ನು ಮಂತ್ರಗಳಿಂದ ವಿಶೇಷ ಶೈಲಿಯಲ್ಲಿ ಮತ್ತು ಕೆಲವು ಪರಿಸ್ಥಿತಿಗಳಲ್ಲಿ ಪೂಜಿಸಿದರೆ ಇಷ್ಟಾರ್ಥಗಳು ಲಭಿಸುತ್ತವೆ ಎಂಬುದು ನಂಬಿಕೆ. ಇವನ್ನೇ ಸಂಕ್ಷಿಪ್ತವಾಗಿ ಆಗಮಗಳ ಸಿದ್ಧಾಂತವೆನ್ನಬಹುದಾಗಿದೆ. ಶಬ್ದ ಶಕ್ತಿ ಅಥವಾ ಮಂತ್ರಶಕ್ತಿ ಎಂದು ಏನನ್ನು ಕರೆಯಲಾಗುತ್ತದೋ ಅದನ್ನು ಆಧರಿಸಿದೆ. ಅದೇ

(ದೇವಾಲಯದೊಳಗಿನ) ಮೂರ್ತಿಗೆ ಪಾವಿತ್ರ್ಯತೆ ನೀಡುವುದು. ವಸ್ತು ಸಂಗ್ರಹಾಲಯದಲ್ಲಿ ನೀವು ಗೋಪಾಲಕೃಷ್ಣನ ಮೂರ್ತಿ ಅಥವಾ ಉಮಾ–ಮಹೇಶ್ವರ ಮೂರ್ತಿಗಳನ್ನು ಇಟ್ಟಿರಬಹುದು. ಆದರೆ, ಆ ಕಾರಣಕ್ಕಾಗಿಯೇ ವಸ್ತು ಸಂಗ್ರಹಾಲಯ ದೇವಸ್ಥಾನವಾಗಲಾರದು. ಉಮಾ–ಮಹೇಶ್ವರನ ಮೂರ್ತಿಗಾಗಲಿ ಅಥವಾ ಆಕಾರವಿಲ್ಲದ ಲಿಂಗಕ್ಕಾಗಲಿ ಪಾವಿತ್ರ್ಯವನ್ನು ತಂದುಕೊಡುವುದು ಉಚ್ಚರಿಸುವ ಮಂತ್ರಗಳು. ಆಗಮಗಳಲ್ಲಿ ಹೇಳಿರುವುದೇನೆಂದರೆ, ನಿರ್ದಿಷ್ಟವಾದ ಮಂತ್ರಗಳು ಅತ್ಯದ್ಭುತ ಹಾಗೂ ರಹಸ್ಯ ಫಲಕೊಡುತ್ತವೆ. ಆದರೆ ಹಾಗಾಗುವುದು ಕೆಲವು ಸಂಪ್ರದಾಯಗಳನ್ನು, ಮೈಲಿಗೆ ಮುಂತಾದ ಕೆಲವು ನಿಯಮಗಳನ್ನು ಅನುಸರಿಸಿದಾಗ ಮಾತ್ರ. ರಾಮಚಂದ್ರ ಅವರು ಹೇಳುತ್ತಿರುವುದೇನೆಂದರೆ, ಕೆಲವು ಹರಿಜನರು ಬೇಲೂರು ದೇವಸ್ಥಾನ ಪ್ರವೇಶಿಸಿದಾಕ್ಷಣ ದೇವಸ್ಥನವು ಇನ್ನೂ ಅಪವಿತ್ರವಾಗಿಲ್ಲ. ಪ್ರತಿಮೆ ಇನ್ನೂ ಅಲ್ಲಿರುವುದೇ ಅದಕ್ಕೆ ಸಾಕ್ಷಿ ಎಂದು ಸಮರ್ಥಿಸಿಕೊಳ್ಳುವಂತೆ ಕಾಣುತ್ತದೆ. ಈ ರೀತಿಯ ತರ್ಕಕ್ಕೆ ಪ್ರತಿವಾದ ಮಂಡಿಸಲು ನಾನು ಪ್ರಯತ್ನಿಸುವುದಿಲ್ಲ. ಆದರೆ ಈ ಮೈಲಿಗೆಯ ಬಗ್ಗೆ ಇರುವ ನಿಯಮಗಳನ್ನು ಈಗ ಹರಿಜನರೆಂದು ಗುರುತಿಸಲಾಗುವ ಜನವರ್ಗಕ್ಕೆ ಸಂಬಂಧಿಸಿದಂತೆ ಮಾತ್ರವೇ ಇಡಲಾಗಿದೆಯೆಂದು ನಾನು ಹೇಳಲಾರೆ. ನಮಗೆ ಗೊತ್ತಿದೆ, ಅದು ಬೇರೆಯವರಿಗೂ ಅನ್ವಯಿಸುತ್ತದೆ. ಅತ್ಯಂತ ಸಂಪ್ರದಾಯಸ್ಥ ಬ್ರಾಹ್ಮಣರು ಸಹ ಮೈಲಿಗೆಯ ಅವಧಿಯನ್ನು ಅನುಸರಿಸುತ್ತಾರೆ. ಉದಾಹರಣೆಗೆ, ಕುಟುಂಬದಲ್ಲಿ ಯಾರಾದರೂ ನಿಧನ ಹೊಂದಿದರೆ ಸೂತಕವನ್ನು ಆಚರಿಸುತ್ತಾರೆ. ಹಾಗೆ ಸೂತಕದಲ್ಲಿರುವ ವ್ಯಕ್ತಿಗಳು ಪೂಜಾ ಸ್ಥಳಗಳನ್ನು ಪ್ರವೇಶಿಸುವುದಿಲ್ಲ. ಋತುಮತಿಯರಾದ ಸ್ತ್ರೀಯರು ಆ ಅವಧಿಯಲ್ಲಿ ದೇವಸ್ಥಾನಗಳನ್ನು ಸಂದರ್ಶಿಸಲಾರರು. ಅಂಥವರು ದೇವಸ್ಥಾನದ ಮೂರ್ತಿಯನ್ನು ಮುಟ್ಟಿದರೆ ಅದರ ಪಾವಿತ್ರ್ಯಭಂಗವಲ್ಲದೆ ಅದರ ಪ್ರಭಾವವೂ ಕುಂದುತ್ತದೆ. ಈ ಎಲ್ಲ ಸಂಗತಿಗಳು ತರ್ಕರಹಿತವೆಂದು ಕಾಣುತ್ತವೆ. ನಾನೂ ಅದನ್ನು ಒಪ್ಪುತ್ತೇನೆ. ಆದರೆ, ನಾನು ಆಗಲೇ ಹೇಳಲು ಆರಂಭಿಸಿದ್ದಂತೆ ಇದು ನಿಗೂಢ ರಹಸ್ಯಗಳ ಲೋಕ; ಇದು ಶುದ್ಧ ನಂಬಿಕೆಯ ಮನೋಭೂಮಿಕೆ. ವಿಚಾರಕ್ಕೆ ಇಲ್ಲಿ ಪ್ರವೇಶವಿಲ್ಲ. ವಾಸ್ತವವಾದ ಸಂಗತಿಯೆಂದರೆ, ನನ್ನ ಮಿತ್ರರು ಎಲ್ಲವನ್ನೂ ಹಿಂದುತ್ವದ ಸುಧಾರಣೆ ದೃಷ್ಟಿಯಿಂದಲೇ ಮಾತನಾಡುತ್ತಿದ್ದರು. ನಮಗೆಲ್ಲ ಗೊತ್ತಿರುವಂತೆ ಹಿಂದುತ್ವವು ವೇದಗಳನ್ನೇ ಆಧರಿಸಿದೆ. 'ಅತೀಂದ್ರಿಯ ವಸ್ತು'ವೆಂದು ಕರೆಯಲಾಗುವುದರ ಸೂಕ್ಷ್ಮ ದರ್ಶನವನ್ನು ಮಾಡಿಸುತ್ತದೆ. ಆ ವಸ್ತು ಅರಿವಿಗೆ ಮೀರಿದ ಅನುಭವ ನೀಡುತ್ತದೆ, ಎಂದರೆ ಪಂಚೇಂದ್ರಿಯಗಳಿಗೂ ಮೀರಿದ

ಮನುಷ್ಯನೊಳಗಿನ ಆಂತರಿಕ ಸತ್ಯದ ದರ್ಶನ ಮಾಡಿಸುತ್ತದೆ. ಇದೇ ವೇದಗಳ ಸಾರಸರ್ವಸ್ವ. ಇದೇ ಹಿಂದೂ ಧರ್ಮದ ಸಿದ್ಧಾಂತ. ಅದನ್ನು ಸ್ಪಷ್ಟೀಕರಿಸುವುದಾದರೆ. ಈ ಮೇಜನ್ನು ಕಟ್ಟಿಗೆಯಿಂದ ಮಾಡಲಾಗಿದೆ ಎಂಬುದನ್ನು ಅರ್ಥಮಾಡಿಕೊಳ್ಳಲು ನೀವು ವೇದಗಳ ಮೊರೆ ಹೋಗಬೇಕಾಗಿಲ್ಲ. ನಿಮಗೆ ನೆಗಡಿಯಾಗಿರುವಾಗ ವೈದ್ಯರ ಹತ್ತಿರ ಹೋಗಬೇಕು ಎಂಬುದನ್ನು ಅರ್ಥಮಾಡಿಕೊಳ್ಳಿ. ವೇದಗಳ ಬಳಿ ಹೋಗಬೇಕಾಗಿಲ್ಲ. ಭರ್ತಿಯಾದ ಅರಿವಿನ ಪ್ರಪಂಚವನ್ನು ಮೀರಿದ ಸಂಗತಿಗಳಲ್ಲಿ, ನೀವು ಮಾರ್ಗದರ್ಶನ ಬಯಸಿದಿರಾದರೆ ಮಾತ್ರ ನೀವು ವೇದಗಳ ಮೊರೆ ಹೋಗುತ್ತೀರಿ. ಹೀಗಿರಬೇಕಾದರೆ ಧಾರ್ಮಿಕ ಪೂಜಾ ಆಚರಣೆಯ ಸಮಗ್ರ ವ್ಯವಸ್ಥೆಯೇ ವೈಚಾರಿಕತೆಯನ್ನು ಮೀರಿದ ನಂಬಿಕೆಯ ಮೇಲೆ ಆಧರಿಸಿರುವಂಥದ್ದು. ಅದನ್ನೇ ಬೇರೆ ರೀತಿಯಲ್ಲಿ ಹೇಳುವುದಾದರೆ, ಧರ್ಮ ಎಂಬುದೇ ನಂಬಿಕೆ ವಸ್ತು. ತರ್ಕಕ್ಕೆ ಸಿಗದಿರುವುದನ್ನು ನಂಬಲಾಗುತ್ತದೆ. ಇದು ನಮ್ಮ ಸಾಮಾನ್ಯ ವಿವೇಚನೆಗೆ ಮೀರಿದ ಮಾನವ ಜೀವಿಯ ಕ್ಷೇತ್ರಕ್ಕೆ ಒಳಪಡುವಂಥದ್ದು. ಆದಾಗ್ಯೂ, ನಮ್ಮ ದೇಶದಲ್ಲಿನ ಜನರು ದುರದೃಷ್ಟವಶಾತ್, ಸಮಾಜ ಸುಧಾರಕರೂ ವಿಶೇಷವಾಗಿ ಆಗಮಗಳು ಮತ್ತು ಶಾಸ್ತ್ರಗಳ ಮೂಲಕ ರೂಢಿಸಿಕೊಂಡ ಪೂಜಾ ವ್ಯವಸ್ಥೆಗಳ ಬಗ್ಗೆ ತಲೆ ತಲೆ ಮಾರುಗಳಿಂದ ಚಿರಸ್ಥಾಯಿಯಾದ ನಂಬಿಕೆಯನ್ನು ಮುಂದುವರಿಸಿಕೊಂಡು ಬಂದಿದ್ದಾರೆ. ಅಂಥವರು ಅಲ್ಪಸಂಖ್ಯೆಯಲ್ಲಿದ್ದರೂ ಅವರಿಗೆ ರಕ್ಷಣೆ ನೀಡುವುದು ಸರ್ಕಾರದ ಕರ್ತವ್ಯವೆಂದು ನಾನು ಭಾವಿಸುತ್ತೇನೆ. ಅವರೂ ಸಹ ನನ್ನ ಗೆಳೆಯರಾದ ಶ್ರೀಯುತ ರಾಮಚಂದ್ರ ಮತ್ತು ಇತರರಂತೆ ಸರ್ಕಾರದ ಮುಂದೆ ನ್ಯಾಯಕೋರಿ ಅರ್ಜಿದಾರರಾಗಿ ನಿಲ್ಲುತ್ತಾರೆ. ಇಂಥ ಸನ್ನಿವೇಶದಲ್ಲಿ, ಈ ವಿಷಯದಲ್ಲಿ ಸರ್ಕಾರ ತನ್ನಿಷ್ಟ ಬಂದಂತೆ ಹಸ್ತಕ್ಷೇಪ ಮಾಡುವುದು ಸೂಕ್ತವಲ್ಲವೆಂಬುದು ನನ್ನ ಅಭಿಪ್ರಾಯ. ಆಗಲೇ ನಾನು ಹೇಳಿದ್ದಂತೆ, ಸುಬ್ಬರಾಮಚೆಟ್ಟಿ ಅವರು ಹೇಳುವಂತೆ ಸಾರ್ವಜನಿಕ ಅಭಿಪ್ರಾಯ ಆಧುನಿಕವಾಗಿದ್ದಾವರೆ ಮಹಾನ್ ಸಮಾಜ ಸುಧಾರಕರು ಮತ್ತೆ ಹುಟ್ಟಿ ಬರಬೇಕೆಂಬುದು ಯಾಕೆ? ಮತ್ತು ಹೊಸ ಹೊಸ ದೇವಸ್ಥಾನಗಳು ನಿರ್ಮಾಣಗೊಳ್ಳುತ್ತಿರುವುದೇಕೆ? ಹಳೆಯ ದೇವಸ್ಥಾನಗಳನ್ನು ಸಂದರ್ಶಿಸುತ್ತಿರುವುದೇಕೆ? ಆಗಮ ಸಿಧ್ಧಾಂತಗಳಲ್ಲಿ ನಂಬಿಕೆಯಿಲ್ಲದಿದ್ದರೆ ಅಲ್ಲಿಗೆ ಹೋಗಲು ಯಾಕೆ ಒತ್ತಾಯಿಸುತ್ತಿದ್ದಾರೆ? ವಿಚಾರವಂತ ಜನಗಳು ಈ ದೇವಸ್ಥಾನಗಳನ್ನು ಸಂದರ್ಶಿಸದಂತೆ ತಡೆಯುವ ಪ್ರಚಾರ ಕಾರ್ಯವನ್ನು ಮಾನ್ಯ ರಾಮಚಂದ್ರ ಅವರೇಕೆ ಮುಂದುವರೆಸುವುದಿಲ್ಲ?.............

**ಶ್ರೀಯುತ ಟಿ. ರಾಮಚಂದ್ರ** – ದೇವಸ್ಥಾನಗಳಿಗೆ ಹೋಗದಂತೆ ತಡೆಯುವುದು ಮುಂದಿನ ಹಂತ.

**ಶ್ರೀಯುತ ಡಿ.ವಿ. ಗುಂಡಪ್ಪ** – ಆ ಉತ್ತರದಿಂದ ನನಗೆ ಸಂತೋಷವಾಗಿದೆ. ಆ ಪ್ರಯತ್ನವೂ ನಡೆಯಲಿ. ಹಾಗೆ ಅದಕ್ಕೆ ಪ್ರಯತ್ನಿಸುವುದಾದರೆ ಇಷ್ಟೆಲ್ಲ ಚಿಂತನೆ ಯಾಕೆ ನಡೆಸಬೇಕಾಗಿತ್ತು?

**ಶ್ರೀಯುತ ಟಿ. ರಾಮಚಂದ್ರ** – ಹಾಗೆ ಮಾಡುವಂತೆ ನೀವು ನಮ್ಮನ್ನು ಒತ್ತಾಯಿಸುತ್ತಿದ್ದೀರಿ.

**ಶ್ರೀಯುತ ಕೆ.ಆರ್. ಶ್ರೀನಿವಾಸಯ್ಯಂಗಾರ್** – ನೀವು ಆ ರೀತಿ ಸವಾಲು ಹಾಕಿದರೆ, ನಾವದನ್ನು ಕೈಗೆತ್ತಿಕೊಳ್ಳುತ್ತೇವೆ.

**ಶ್ರೀಯುತ ಡಿ.ವಿ. ಗುಂಡಪ್ಪ** – ಅದಲ್ಲದೆ, ನಾನು ಹೇಳಬಯಸುವುದಿಷ್ಟೇ, ಮಂತ್ರಗಳು ಮತ್ತು ಆಗಮಗಳಿಗಿರುವ ಪಾವಿತ್ರ್ಯತೆ ಮತ್ತು ಅತ್ಯದ್ಭುತ ಸಾಮರ್ಥ್ಯ ಮತ್ತು ಅತೀಂದ್ರಿಯ ಶಕ್ತಿಗಳಲ್ಲಿ ನಂಬಿಕೆಯಿಟ್ಟುಕೊಂಡ ಆ ವರ್ಗದ ಜನರು ದಿನದಿಂದ ದಿನಕ್ಕೆ ಕಡಿಮೆಯಾಗುತ್ತ ಹೋಗುತ್ತಿದ್ದಾರೆ. ನಿಷೇಧಿತ ಜನರನ್ನು ಒಳಬಿಡುವ ಮೂಲಕ ಆ ದೇವಸ್ಥಾನಗಳಲ್ಲಿ ಪೂಜೆ ಸಲ್ಲಿಸುವ ಅವಕಾಶದಿಂದ ಅಂಥ ವ್ಯಕ್ತಿಗಳನ್ನು ವಂಚಿತಗೊಳಿಸುವ ಯಾವುದೇ ಹಕ್ಕು ಸರ್ಕಾರಕ್ಕಿದೆಯೆಂದು ನಾನು ಅಭಿಪ್ರಾಯಪಡಲಾರೆ. ಇತರೆ ಕೋಮಿನ ಜನರು ಅಲ್ಲಿ ಬಂದರೆ ಸಂಪ್ರದಾಯಸ್ಥ ಜನರು ಪಾವಿತ್ರ್ಯತೆ ಹೋಯಿತೆಂದು, ಯಾವ ಅಭೀಷ್ಟಗಳ ಸಿದ್ಧಿಗಾಗಿ ಪೂಜೆ ಸಲ್ಲಿಸುತ್ತಿದ್ದರೋ, ಅವನ್ನು ನೆರವೇರಿಸುವ ಶಕ್ತಿಯನ್ನು ಪ್ರತಿಮೆಗಳು ಕಳೆದುಕೊಳ್ಳುತ್ತವೆ ಎಂದು ದೂರುತ್ತಾರೆ. ಅವರು ಸಲ್ಲಿಸುವ ಪೂಜೆಯೇ ನಿಷ್ಪ್ರಯೋಜಕವಾಗುತ್ತದೆಂದು ಅವರು ಹೇಳುತ್ತಾರೆ. ಆದ್ದರಿಂದ, ಮಾನ್ಯರೇ ಪ್ರಸ್ತಾವವನ್ನು ಸರ್ಕಾರ ಒಪ್ಪಿಕೊಳ್ಳಬಾರದು.

**ಶ್ರೀಯುತ ಕೆ.ಆರ್. ಶ್ರೀನಿವಾಸ ಅಯ್ಯಂಗಾರ್** – ಸ್ವಾಮಿ, ಸದನದ ಮುಂದೆ ಬಂದಿರುವುದು ಇದು ಮೊದಲ ಬಾರಿಯೇನೂ ಅಲ್ಲ. ಈ ಪ್ರಶ್ನೆ ಖೋತಾ ಸೂಚನೆಯೆಂತಾಗಲಿ ಅಥವಾ ಗೊತ್ತುವಳಿ ರೂಪದಲ್ಲಾಗಲಿ "ಈ ದೇವಾಲಯ ಪ್ರವೇಶ ಪ್ರಶ್ನೆ" ಆಗಲೇ ಸದನದ ಮೂಲಕ ಒಂದಕ್ಕಿಂತ ಹೆಚ್ಚು ಬಾರಿ ಬಂದಿದೆ. ಕಳೆದ ಬಾರಿ, ಇದೇ ವಿಷಯದ ಬಗ್ಗೆ ಗೊತ್ತುವಳಿ ಈ ಸದನದಲ್ಲಿ ಮಂಡಿತವಾದದ್ದು 1932ರ ಚಳಿಗಾಲದ ಅಧಿವೇಶನದಲ್ಲಿ. ಆ ಗೊತ್ತುವಳಿಯು ಈ ಮುಂದಿನಂತಿದೆ:

"ಈ ಪರಿಷತ್ತು ಸನ್ಮಾನ್ಯ ಮಹಾರಾಜರ ಘನ ಸರ್ಕಾರಕ್ಕೆ ಶಿಫಾರಸು ಮಾಡುವುದೇನೆಂದರೆ ಮುಜರಾಯಿ ಆಡಳಿತದಲ್ಲಿರುವ ಎಲ್ಲ ಹಿಂದೂ ದೇವಾಲಯಗಳಲ್ಲಿ ಅಸ್ಪೃಶ್ಯರೆಂದು ಕರೆಯಲಾಗುವ ಎಲ್ಲರಿಗೂ ಮುಕ್ತ ಪ್ರವೇಶಾವಕಾಶವಿದ್ದು, ಅಲ್ಲಿ ವ್ರತಾಚರಣೆಗಳು ನಡೆಯುವುದಕ್ಕೆ ಅಗತ್ಯ ಸುರಕ್ಷಿತ ಕ್ರಮ ಕೈಗೊಳ್ಳಲು ಅಪ್ಪಣೆಯಾಬೇಕು".

ಈ ಗೊತ್ತುವಳಿಗೆ ಸರ್ಕಾರದಿಂದ ಬಂದ ಉತ್ತರವೇನೆಂದರೆ, ಸರ್ಕಾರದ ದೃಷ್ಟಿಯಲ್ಲಿ ಇದೊಂದು ಅತ್ಯುತ್ತಮ ಸಂಕೀರ್ಣವಾದ ವಿಷಯವಾಗಿದೆ ಹಾಗೂ ಈ ಬಗ್ಗೆ ದೊಡ್ಡ ಪ್ರಮಾಣದಲ್ಲಿ ಸಾರ್ವಜನಿಕ ಅಭಿಪ್ರಾಯದ ಬೆಂಬಲ ಇದ್ದ ಹೊರತು, ಇದನ್ನು ಬೆಂಬಲಿಸುವ ನಿಟ್ಟಿನಲ್ಲಿ ಕ್ರಮ ಕೈಗೊಳ್ಳುವುದು ಕಷ್ಟಸಾಧ್ಯ. ಈ ಪ್ರಸ್ತಾವದ ಪರವಾಗಿ ಮಂಡಿಸಲಾದ ಎಲ್ಲ ವಾದಗಳನ್ನು ಈ ಹಿಂದೆಯೂ ಮಂಡಿಸಲಾಗಿತ್ತು. ಇವತ್ತೂ ಕೂಡ ನಾವು ಕೇಳಿದ್ದರಲ್ಲಿ ಹೊಸದೇನೂ ಇಲ್ಲ. ಈ ವಾದ–ವಿವಾದಗಳಿಗೆ ಉತ್ತರವೂ ಅವೇ ಆಗಿರುತ್ತದೆಯೇ ಹೊರತು ಹೊಸದೇನೂ ಆಗಿರಲು ಸಾಧ್ಯವಿಲ್ಲ.

ಮಾನ್ಯ ಡಿ.ವಿ. ಗುಂಡಪ್ಪನವರು ಈ ಪ್ರಸ್ತಾವವನ್ನು ವಿರೋಧಿಸುವವರ ಅಭಿಪ್ರಾಯವನ್ನು ದೃಷ್ಟಿಯಲ್ಲಿಟ್ಟುಕೊಂಡು ಸಾಕಷ್ಟು ಸುದೀರ್ಘವಾಗಿಯೇ ಚರ್ಚಿಸಿದರು. ವಾಸ್ತವವಾಗಿ, ನನ್ನ ಮನಸ್ಸಿನಲ್ಲಿರುದನ್ನೇ ಅವರು ಚೆನ್ನಾಗಿ ಮಂಡಿಸಿದರು. ಅವರು ಹೇಳಿದ ಎಲ್ಲ ವಿಷಯಗಳನ್ನು ಮತ್ತೆ ಪುನರುಚ್ಚರಿಸಲು ಹೋಗಲಾರೆ, ಆದರೆ ಕೆಲವೇ ಕೆಲವು ಸಂಗತಿಗಳಿಗೆ ಮಿತಿಗೊಳಿಸಿದಂತೆ ನನ್ನ ಅಭಿಪ್ರಾಯ ಮಂಡಿಸುವೆ.

ಮೊದಲಿಗೆ, ದೇವಾಲಯ ಪ್ರವೇಶ ಪ್ರಶ್ನೆಯು ಮೂರ್ತಿ ಪೂಜೆಯಲ್ಲಿ ಇರುವವರನ್ನು ಮಾತ್ರವೇ ಬಾಧಿಸುತ್ತದೆ. ಈ ಸಂಗತಿಯನ್ನು ಮೊದಲು ನಾನು ಸ್ಪಷ್ಟೀಕರಿಸುತ್ತೇನೆ. ಮೂರ್ತಿ ಪೂಜೆಯಲ್ಲಿ ಯಾರಿಗೆ ನಂಬಿಕೆಯಿಲ್ಲವೋ ಅವರುಗಳು ಮೂರ್ತಿಯೆಂದರೆ ಅದು ಒಂದು ಕರಿ ಕಲ್ಲು ಅಥವಾ ಕಟ್ಟಿಗೆ ತುಂಡು, ಅದಕ್ಕಿಂತಾ ಇನ್ನೇನೂ ಅಲ್ಲವೆಂದೇ ಭಾವಿಸುತ್ತಾರೆ. ಬಹುತೇಕ ನಮ್ಮ ಮಹಮ್ಮದೀಯ ಮತ್ತು ಕ್ರಿಶ್ಚಿಯನ್ ಗೆಳೆಯರು ಬರೆಯುವಂತೆ, ಅಲ್ಲಿ ಈ ಪ್ರಶ್ನೆ ಬಾಧಿಸುವುದೇ ಇಲ್ಲ. ಇದು ಕೇವಲ, ಮೂರ್ತಿ ಪೂಜೆಯಲ್ಲಿ ನಂಬಿಕೆಯಿರುವ ಹಿಂದೂಗಳನ್ನು ಮಾತ್ರ ಕಾಡುತ್ತದೆ. ಅದರಲ್ಲೂ, ಹಿಂದೂ ಸಮುದಾಯದ ಮೂರ್ತಿ ಪೂಜೆಯಲ್ಲಿ ನಂಬಿಕೆಯಿಲ್ಲದ ಆರ್ಯಸಮಾಜ ಮತ್ತು ಬ್ರಹ್ಮ ಸಮಾಜದ ಅನುಯಾಯಿಗಳಿಗೆ

ಇದು ಬಾಧಕವಾಗುವುದಿಲ್ಲ. ಅವರ ಅಭಿಪ್ರಾಯ ಕೂಡ ಇಲ್ಲಿ ಗಣನೆಗೆ ಬರುವುದಿಲ್ಲ. ಮೂರ್ತಿ ಪೂಜೆಯಲ್ಲಿ ನಂಬಿಕೆಯಿರುವ ಜನರ ಆ ನಂಬಿಕೆಯ ಆಧಾರವಾಗಿ ಇರುವುದೇನು? ಅದು ನಿರ್ದಿಷ್ಟವಾಗಿ ಕೆಲವು ವ್ರತಾಚರಣೆಗಳನ್ನು ವಿಧಿಸುವ ಧಾರ್ಮಿಕ ಗ್ರಂಥಗಳನ್ನು ಆಧರಿಸಿವೆ. ಇವುಗಳ ಪ್ರಕಾರ ಈ ಪೂಜಾವಿಧಿಗಳಾಗಿದ್ದವು ಶಕ್ತಿಯನ್ನು ಜಾಗೃತಗೊಳಿಸುತ್ತವೆ ಮತ್ತು ಮೂರ್ತಿಗಳು ಈ ದೈವ ಶಕ್ತಿಯ ಸಂಕೇತವಾಗುತ್ತವೆ. ಮೂರ್ತಿ ಪೂಜೆಯನ್ನು ನೀವು ನಂಬುವುದಾದರೆ, ಈ ಮೂರ್ತಿ ಪೂಜೆಗೆ ಆ ಧಾರ್ಮಿಕ ಗ್ರಂಥಗಳು ಆಧಾರವಾಗಿದೆಯೆಂದು ನಂಬುವುದಾದರೆ ಅವನ್ನು ನೀವು ಪೂರ್ಣ ಪ್ರಮಾಣದಲ್ಲಿ ಅಳವಡಿಸಿಕೊಳ್ಳಬೇಕಾಗುತ್ತದೆ. ಅವು, ಬರೀ ಮೂರ್ತಿ ಪ್ರತಿಷ್ಠಾಪನೆಯ ಸಂಬಂಧದಲ್ಲಿ ಅನುಸರಿಸಬೇಕಾದ ವ್ರತಾಚರಣೆಗಳನ್ನು ಮಾತ್ರವೇ ನಿರ್ದಿಷ್ಟಪಡಿಸುವುದಿಲ್ಲ. ಮೂರ್ತಿಯ ಪಾವಿತ್ರ್ಯತೆಯನ್ನು ಕಾಪಾಡಲು ಮತ್ತು ಕಳಂಕಗೊಳ್ಳದಂತೆ ನೋಡಿಕೊಳ್ಳಲು ಅಗತ್ಯವಾಗಿ ಕೈಗೊಳ್ಳಬೇಕಾದ ಆಚರಣೆಗಳನ್ನು ಸೂಚಿಸುತ್ತವೆ. ಸ್ವಚ್ಛವಾಗಿರುವುದಿಲ್ಲವೆಂದು ಪರಿಗಣಿಸಲಾದ ಕೆಲವು ವ್ಯಕ್ತಿಗಳ ಸಂಬಂಧದಲ್ಲಿ ಈ ಮೂರ್ತಿಗಳ ಸಾಮೀಪ್ಯಕ್ಕೆ ಅವರು ಬರದಂತೆ ಕೆಲವು ನಿಯಮಗಳನ್ನು ನಿಯಮಿಸಲಾಗಿದೆ. ಈಗಾಗಲೇ ಶ್ರೀಯುತ ಡಿ.ವಿ. ಗುಂಡಪ್ಪವರು ಅಭಿಪ್ರಾಯಪಟ್ಟಂತೆ ಅಶುದ್ಧತೆ ಕೇವಲ ನಿರ್ದಿಷ್ಟ ಕೋಮುಗಳ ಜನರಿಗೆ ಮಾತ್ರವೇ ಅನ್ವಯಿಸುವುದಿಲ್ಲ. ಅವರು ಬ್ರಾಹ್ಮಣರೇ ಆಗಿರಲಿ, ಹಿಂದೂ ಸಮುದಾಯದ ಉನ್ನತ ಜಾತಿಯವರೇ ಆಗಿರಲಿ ಮೈಲಿಗೆಯ ಕಾರಣಕ್ಕೆ ಪರಿಶುದ್ಧರಾಗಿಲ್ಲದಿದ್ದರೆ ಅವರು, ಹಾಗೂ ಮಾಸಿಕ ಮುಟ್ಟಿನ ದಿನಗಳಲ್ಲಿ ಮಹಿಳೆಯರು, ಪ್ರತಿಮೆಗಳ ಬಳಿಸಾರುವ ಹಾಗಿಲ್ಲ. ಬ್ರಾಹ್ಮಣ ಎಷ್ಟೇ ಶ್ರೇಷ್ಠನಾಗಿರಲಿ, ಪರಿಶುದ್ಧನಾಗಿದ್ದರೂ ಈ ನಿಯಮಗಳ ಪ್ರಕಾರ ಅವನು ಸಹ, ದೇವಾಲಯದ ಅರ್ಚಕನೊಬ್ಬನಿಗೇ ಪ್ರವೇಶಿಸಲು ಹಕ್ಕಿರುವ, ಗರ್ಭಗುಡಿಯನ್ನು ಪ್ರವೇಶಿಸುವಂತಿಲ್ಲ. ಅರ್ಚಕನಲ್ಲದ ಬೇರೆ ಯಾರೇ ಬ್ರಾಹ್ಮಣ ಅಲ್ಲಿಗೆ ಪ್ರವೇಶಿಸಿದರೂ ಮೂರ್ತಿ ಮೈಲಿಗೆಯಾಯಿತೆಂದು ಭಾವಿಸಲಾಗುತ್ತದೆ. ಮೂರ್ತಿಯ ಪಾವಿತ್ರ್ಯತೆ ರಕ್ಷಿಸಬೇಕಾದರೆ ಈ ತೆರನಾದ ಧಾರ್ಮಿಕ ಗ್ರಂಥಗಳನ್ನು ಮತ್ತು ಅವು ರೂಪಿಸಿದ ನಿಯಮಾವಳಿಯನ್ನು ಕಟ್ಟುನಿಟ್ಟಾಗಿ ಅನುಸರಿಸಬೇಕಾಗುತ್ತದೆ. ಇಲ್ಲದಿದ್ದಲ್ಲಿ ಈ ಮೂರ್ತಿಗಳು ಕಲ್ಲಿನ ಅಥವಾ ಕಟ್ಟಿಗೆಯ ತುಂಡುಗಳೆನ್ನಿಸುವುದರಿಂದ, ಅವನ್ನು ಪೂಜಿಸಲು ದೇವಸ್ಥಾನಗಳಿಗೆ ಹೋಗುವ ಅಗತ್ಯವೇ ಬೀಳುವುದಿಲ್ಲ. ಧಾರ್ಮಿಕ ಗ್ರಂಥಗಳಲ್ಲಿ ಯಾವುದೇ ನಂಬಿಕೆಯು ಇಲ್ಲದ ನನ್ನ ಗೆಳೆಯರಾದ ಮಾನ್ಯ ರಾಮಚಂದ್ರ ಮತ್ತು ಅವರ ಬೆಂಗಲಿಗರಂಥ ವ್ಯಕ್ತಿ ಇಲ್ಲಿ ಇರುವಲ್ಲಿ, ಅವರು ಆ ಪ್ರತಿಮೆಗಳಲ್ಲಿ

ಯಾವ ಅರ್ಥವನ್ನೂ ಕಾಣುವುದಿಲ್ಲ. ಮತ್ತೊಂದು ಕಡೆ, ಧರ್ಮ ಗ್ರಂಥಗಳಲ್ಲಿ ಅವರಿಗೆ ನಂಬಿಕೆಯಿದೆಯೆಂದು ಅವರು ಹೇಳುವುದಾದರೆ ಆ ಗ್ರಂಥಗಳಲ್ಲಿ ನಿರ್ದಿಷ್ಟಪಡಿಸಿದ ನಿಯಮಗಳಿಗೆ ಅವರು ಬದ್ಧರಾಗಿರಬೇಕಾಗುತ್ತದೆ. ಶ್ರೀಯುತ ರಾಮಚಂದ್ರ ಅವರು ಓದಿ ತಿಳಿದಿರಬಹುದಾದಂತೆ, ವೇದಗಳು ಮತ್ತು ಉಪನಿಷತ್ತುಗಳು ಅಸ್ಪೃಶ್ಯರ ದೇವಾಲಯ ಪ್ರವೇಶ ನಿಷೇಧಿಸುವುದಿಲ್ಲ. ಆದರೆ ನಾನು ಖುರಾನಿನ ಬಗೆಗೆ ಎಷ್ಟು ತಿಳಿದುಕೊಂಡಿರುವೆನೋ ಹಾಗೆಯೇ ರಾಮಚಂದ್ರ ಅವರು ನಮ್ಮ ಧರ್ಮ ಗ್ರಂಥಗಳು ನಿಯಮಿಸುವ ನಿಯಮಗಳ ಬಗೆಗೆ ಕ್ವಚಿತ್ತಾದ ತಿಳುವಳಿಕೆ ಹೊಂದಿದ್ದಾರೆ. ನಾನು ಖುರಾನನ ಬಗೆಗೆ ಎಷ್ಟರ ಮಟ್ಟಿಗೆ ವ್ಯಾಖ್ಯಾನ ನೀಡಬಲ್ಲೆನೋ, ಹಾಗೆ ಅವರು ಹಿಂದೂ ಧಾರ್ಮಿಕ ನಿಯಮಾವಳಿಗಳ ಬಗೆಗೆ ಅಭಿಪ್ರಾಯ ನೀಡಬಲ್ಲರು. ರಾಜಕೀಯ ಮತ್ತು ಸಾಮಾಜಿಕ ಮುಂದಾಳುಗಳು ಈ ಪ್ರಶ್ನೆಯ ಮೇಲೆ ನೀಡುವ ಅಭಿಪ್ರಾಯವನ್ನು ಈ ವಿಷಯದ ಮೇಲಿನ ಗ್ರಂಥಗಳ ಬಗ್ಗೆ ವ್ಯಾಖ್ಯಾನಿಸಬಲ್ಲ ವ್ಯಕ್ತಿಗಳಿಂದ ಬಂದ ಅಭಿಪ್ರಾಯವೆಂದು ಒಪ್ಪಿಕೊಳ್ಳಲಾಗದು. ದೇಶದಲ್ಲಿನ ಪ್ರಮುಖ ಧಾರ್ಮಿಕ ಮುಖಂಡರುಗಳೊಡನೆ ಈ ವಿಷಯವನ್ನು ಚರ್ಚಿಸಿ, ತಮ್ಮ ವಾದಗಳನ್ನು ಸಮರ್ಥಿಸಿಕೊಂಡು ಅವರಿಗೆ ಮನವರಿಕೆ ಮಾಡಿಕೊಡಲಿ. ಈ ವಿಷಯದ ಬಗ್ಗೆ ಚರ್ಚಿಸುವುದಕ್ಕಾಗಿಯೇ ಮಹಾತ್ಮಾ ಗಾಂಧಿಯವರನ್ನು ಅವರು ಕುಂಬಕೋಣಂನಲ್ಲಿದ್ದಾಗ ಸಂಪ್ರದಾಯಸ್ಥರು ಆಹ್ವಾನಿಸಿದ್ದರು. ಧರ್ಮಗ್ರಂಥಗಳ ಅಧಿಕಾರದ ಬಗೆಗಿನ ತಮ್ಮ ಪ್ರಸ್ತಾವವನ್ನು ಸ್ಥಾಪಿಸಲು ಮಹಾತ್ಮಾ ಗಾಂಧಿ ಅವರನ್ನು ಕೋರಲಾಯಿತು ಎಂದು ಕೇಳಿದ್ದೇನೆ. ಆದರೆ, ಆ ಸವಾಲನ್ನು ಅವರು ಸ್ವೀಕರಿಸಲಿಲ್ಲ. ಮಹಾತ್ಮಾ ಗಾಂಧಿ ಅವರು ರಾಜಕೀಯ ಹಾಗೂ ಸಾಮಾಜಿಕ ಕ್ಷೇತ್ರಗಳಲ್ಲಿ ಬಹಳ ದೊಡ್ಡವರಿರಬಹುದು. ಆದರೆ ಧರ್ಮಗ್ರಂಥಗಳ ಬಗ್ಗೆ ಅವರು ನೀಡುವ ವ್ಯಾಖ್ಯಾನವನ್ನು ನಾನು ಒಪ್ಪಿಕೊಳ್ಳುವುದಿಲ್ಲ.

**ಶ್ರೀಯುತ ಹೆಚ್.ಸಿ. ದಾಸಪ್ಪ** – ಗೆಳೆಯರಾದ ಡಿ.ವಿ.ಗುಂಡಪ್ಪ ಮತ್ತು ಕೆ.ಆರ್.ಶ್ರೀನಿವಾಸ್ ಅಯ್ಯಂಗಾರರು ನೀಡಿದ ಬೇರೊಂದು ಸಲಹೆಗಳಿಗೆ ಉತ್ತರವಾಗಿ ನಾನು ಒಂದೆರಡು ಮಾತುಗಳನ್ನು ಹೇಳಬಯಸುತ್ತೇನೆ. ಅವರ ಸಲಹೆ – ಹರಿಜನರಿಗೆ ಪ್ರತ್ಯೇಕ ದೇವಾಲಯ ಕಟ್ಟುವುದು. ಎಂದರೆ ಅವರು, ಈ ಹರಿಜನರು, ಈ 5 ಕೋಟಿ ಜನ, ಮಹಮ್ಮದೀಯರು ಅಥವಾ ಕ್ರಿಶ್ಚಿಯನ್ನರು ಆಗುವುದಾದರೆ ಹೇಗೆ? ಎಂಬ ಬಗ್ಗೆ ಕಾಳಜಿ ಹೊಂದಿಲ್ಲ. ಅವರು ಹಿಂದೂ ಸಮುದಾಯದಿಂದಲೇ

ಹೊರಗುಳಿದುಬಿಡುತ್ತಾರೆಯೇ ಇಲ್ಲವೇ. ಎನ್ನುವ ಕಾಳಜಿ ಅವರಿಗಿಲ್ಲ. ನಾನು ಪ್ರಾಮಾಣಿಕವಾಗಿ ನಿವೇದಿಸುವುದೇನೆಂದರೆ --

**ಶ್ರೀಯುತ ಡಿ.ವಿ. ಗುಂಡಪ್ಪ** – ನನ್ನನ್ನು ತಪ್ಪಾಗಿ ಅರ್ಥೈಸುತ್ತಿದ್ದೀರಿ. ನಾನು ಹೇಳಿದ್ದು ಅವರು ಹಿಂದೂಗಳಾಗೇ ಮುಂದುವರೆದರೆ ನಾನು ಆಭಾರಿಯಾಗಿರುತ್ತೇನೆ. ಹಿಂದೂ ಸಮುದಾಯದಲ್ಲಿ ಅವರು ಉಳಿಯುತ್ತಾರೆಯೇ ಇಲ್ಲವೇ ಎಂಬ ಬಗ್ಗೆ ನನಗೆ ಕಾಳಜಿ ಇಲ್ಲ ಎಂದು ನಾನೆಲ್ಲಿಯೂ ಹೇಳಲಿಲ್ಲ. ನನ್ನ ಮಾತುಗಳನ್ನು ಉದ್ಧರಿಸುವುದೇ ಆದರೆ ಮಾನ್ಯ ಸದಸ್ಯರು ಅದನ್ನು ತಪ್ಪಾಗಿ ಉದ್ಧರಿಸಬಾರದು.

**ಶ್ರೀಯುತ ಹೆಚ್.ಸಿ. ದಾಸಪ್ಪ** – ಡಿ.ವಿ. ಗುಂಡಪ್ಪನವರು ಹೀಗೆ ಹೇಳಿದರೆಂದು ನಾನೆಲ್ಲಿಯೂ ಹೇಳಲಿಲ್ಲ. ಇಬ್ಬರು ಸದಸ್ಯರಿಂದ ಉಲ್ಲೇಖಿತವಾದ ಸಂಗತಿಗಳ ಬಗ್ಗೆ ಮಾತ್ರ ನಾನು ಉತ್ತರಿಸುತ್ತೇನೆಂದು ನಾನು ಹೇಳಿದೆ. ಪ್ರತ್ಯೇಕ ದೇವಾಲಯಗಳ ನಿರ್ಮಾಣ ಡಿ.ವಿ. ಗುಂಡಪ್ಪನವರಿಂದ ಬಂದ ಸಲಹೆಯಾಗಿತ್ತು ಮತ್ತು ಹರಿಜನರು ಹಿಂದೂ ಸಮುದಾಯದಲ್ಲಿ ಉಳಿಯುತ್ತಾರೋ ಇಲ್ಲವೋ ಎಂಬ ಬಗ್ಗೆ ಅವರು ಕಾಳಜಿ ಹೊಂದಿರುವುದಿಲ್ಲ ಎಂಬ ಅಭಿಪ್ರಾಯ ವ್ಯಕ್ತವಾದದ್ದು ಶ್ರೀಯುತ ಕೆ.ಆರ್. ಶ್ರೀನಿವಾಸ್ ಅಯ್ಯಂಗಾರ್ ಅವರಿಂದ.

**ಶ್ರೀಯುತ ಕೆ.ಆರ್. ಶ್ರೀನಿವಾಸ ಅಯ್ಯಂಗಾರ್** – ಆ ಬೆದರಿಕೆಯನ್ನೊಡ್ಡಿ ನಮ್ಮದೇ ಆದ ಧಾರ್ಮಿಕ ನಂಬಿಕೆಗಳನ್ನು ಬಿಡುವಂತೆ ಅವರು ಮಾಡಲಾರರು.

**ಶ್ರೀಯುತ ಕೆ. ಚೆಂಗಲರಾಯ ರೆಡ್ಡಿ** – ಸ್ವಾಮಿ ಖೋತಾ ಸೂಚನೆಯ ಮೇಲೆ ಈ ಚರ್ಚೆಯನ್ನು ಪುನ: ಪ್ರಾರಂಭಿಸುವ ಮೊದಲು, ತಾವು ಅಪ್ಪಣೆ ಕೊಟ್ಟರೆ, ಪ್ರಸ್ತುತ ಬೇಡಿಕೆಯ ಬಗ್ಗೆ ತೀರ್ಮಾನ ಕೈಗೊಂಡ ನಂತರ 'ಗಣಿಗಳ ಉಸ್ತುವಾರಿ' , 'ಸಾಮಾನ್ಯ ಆಡಳಿತ' ವಿಷಯವನ್ನು ಕೈಗೆತ್ತಿಕೊಳ್ಳಬಹುದು. ಇವುಗಳ ಮೇರೆಗಿನ ನೀಡಿಕೆಯ ಮೇಲೆ ಸೋಮವಾರದಂದು ಚರ್ಚೆಯನ್ನು ಮುಂದುವರಿಸಬಹುದಾಗಿದೆ. ಆಗ ಖೋತಾ ಸೂಚನೆಗಳ ಬಗೆಗಿನ ಮೇಲಿನ ಚರ್ಚೆಯನ್ನು ಆಯಾ ಶೀರ್ಷಿಕೆಯಡಿ ಮುಂದುವರೆಸಲು ಅವಕಾಶವಿದೆ.

**ಅಧ್ಯಕ್ಷರು** – ನನ್ನ ಆಕ್ಷೇಪಣೆಯೇನೂ ಇಲ್ಲ. ಆದರೆ, ಕಾರ್ಯಸೂಚಿಯ ಪ್ರಕಾರ ಇಂದಿನ ಹೆಚ್ಚುವರಿ ಬೇಡಿಕೆಗಳನ್ನು ಕೂಡ ಸ್ವಲ್ಪಕಾಲ ಚರ್ಚೆಗೆ ಎತ್ತಿಕೊಳ್ಳಬಹುದು.

**ಶ್ರೀಯುತ ರಾಜಚರಿತ ವಿಶಾರದ ರಾವ್ ಸಾಹೇಬ ಸಿ. ಹಯವದನರಾವ್:** ಸ್ವಾಮಿ, ಈ ವಿಷಯದ ಮೇಲಿನ ಚರ್ಚೆ ಇಲ್ಲಿಯವರೆಗೂ ಮುಂದುವರೆದು ಅತಿ ಕಟುವಾಗಿದ್ದುದು ದುರದೃಷ್ಟಕರ.

**ಶ್ರೀಯುತ ಹೆಚ್.ಸಿ. ದಾಸಪ್ಪ** – ಅಲ್ಲಿ ತೀಕ್ಷ್ಣವಾದುದೇನೂ ಇರಲಿಲ್ಲ.

**ಶ್ರೀಯುತ ಟಿ. ರಾಮಚಂದ್ರ**-- ಪಂಡಿತ್ ಮಾಲವೀಯ ಈ ಚಳುವಳಿಯ ಪರವಾಗಿ ಭಾರತದಾದ್ಯಂತ ಅಭಿಪ್ರಾಯ ಸಂಗ್ರಹಿಸುತ್ತಿದ್ದಾರೆ. ಅವರು ದೆಹಲಿಯಲ್ಲಿ ಅನಾರೋಗ್ಯದಿಂದ ಮಲಗಿರುವಾಗ ದೆಹಲಿಯಲ್ಲಿ ಅವರನ್ನು ಭೇಟಿಯಾದಾಗ ಅವರು ಹೇಳಿದರು: "ನೋಡಿ, ನಾಸಿಕದಲ್ಲಿ 15,000 ಹಿಂದೂಗಳು ದೇವಾಲಯ ಪ್ರವೇಶಕ್ಕಾಗಿ ಸಮಾವೇಶಗೊಂಡಿದ್ದಾರೆ. 19 ಜನ ರಾಮ ದೇವಸ್ಥಾನದ ಪೂಜೆಯ ಹೊಣೆ ಹೊತ್ತಿದ್ದ ಪಂಡಾಗಳು ಅಥವಾ ಅರ್ಚಕರುಗಳು ಮಾತ್ರ ಅದನ್ನು ವಿರೋಧಿಸುತ್ತಿದ್ದರು. ಅಲ್ಲಿ ದೇವಾಲಯ ಆವರಣ ಪ್ರವೇಶಿಸಿದ್ದು ಬಲಾಢ್ಯ ಅಲ್ಪಸಂಖ್ಯಾತರು ಮತ್ತು ಅದನ್ನು ಪಟ್ಟಭದ್ರ ಹಿತಾಸಕ್ತಿಯಾಗಿ ಕಾಪಾಡುವುದು ಅವರಿಗೆ ಬೇಕಿತ್ತು."

**ಶ್ರೀಯುತ ಡಿ.ವಿ.ಗುಂಡಪ್ಪ** – ನಾನು ಒಂದು ಮಾಹಿತಿಯೊಂದನ್ನು ಕೇಳಬಹುದೇ? ಪಂಡಿತ ಮಾಳವೀಯ ಅವರು ಎಲ್ಲಿಯೋ ಆಗಲಿ ದೇವಾಲಯ ಪ್ರವೇಶಕ್ಕೆ ಶಾಸನ ಮಾಡಲು ಸೂಚಿಸುತ್ತಿದ್ದಾರೆಯೇ? ಎಂಬುದನ್ನು ನಾನು ತಿಳಿಯಬಯಸುತ್ತೇನೆ. ರಾಜ್ಯ ಈ ಬಗ್ಗೆ ಕ್ರಮ ಕೈಗೊಳ್ಳಬೇಕೆಂದು ಅವರು ಅಭಿಪ್ರಾಯ ಪಡುತ್ತಾರೆಯೇ?

**ಶ್ರೀಯುತ ಟಿ. ರಾಮಚಂದ್ರ** – ನಾನು ಅದೇ ವಿಷಯಕ್ಕೆ ಬರುತ್ತೇನೆ. ಕೊನೆಯಲ್ಲಿ, ಅವರು ಹೇಳಿದ್ದೇನೆಂದರೆ ಬಹುದೊಡ್ಡ ಜನಸಮುದಾಯದ ಹಿತಾಸಕ್ತಿಗಳಿಗೆ ಸಣ್ಣ ಅಲ್ಪಸಂಖ್ಯಾತ ಸಮುದಾಯ ಅಡ್ಡಿಯಾಗುತ್ತಿರುವ ಕಾರಣಕ್ಕಾಗಿ ಅಲ್ಲಿ ಕಾನೂನಿನ ತೊಡಕು ಉಂಟಾಗಿದೆಯೆಂದೂ, ಈ ಚಳುವಳಿಯನ್ನು ಸಫಲಗೊಳಿಸಲು ಸರ್ಕಾರ ಈ ರೀತಿಯಲ್ಲಿ ನೆರವಾಗಬಹುದೆಂದು ಯೋಚಿಸಬೇಕಾಗಿದೆ ಎಂದು. ಸನ್ಮಾನ್ಯ ತೇಜಬಹದ್ದೂರ ಸಪ್ರು ಅವರು ಇಂತಹ ನಿರ್ಬಂಧಗಳನ್ನು ಕಾನೂನು ಜಾರಿ ಮಾಡುವ ಮೂಲಕ ತೊಡೆದುಹಾಕಬೇಕೆಂದು ಖಡಾಖಂಡಿತವಾಗಿ ಹೇಳಿದ್ದಾರೆ. ಮಾನ್ಯ ಸದಸ್ಯರು ಎಲ್ಲಾ ದಾಖಲೆಗಳನ್ನು ಮಂಡಿಸಬೇಕೆಂದು ಬಯಸಿದರೆ ನಾನು ಹಾಗೆ ಮಾಡುತ್ತೇನೆ ......

(ಈ ಹಂತದಲ್ಲಿ ಶ್ರೀಯುತ ಕೆ. ಚೆಂಗಲರಾಯ ರೆಡ್ಡಿಯವರ ಸೂಚನೆಯನ್ವಯ ಈ ಬಗೆಗಿನ ಚರ್ಚೆ ಅಪೂರ್ಣವಾಗಿ ಕೊನೆಗೊಂಡು ಬೇರೆ ವಿಷಯಗಳ ಪ್ರಸ್ತಾಪವಾಯಿತು).

# ಸಾರ್ವಜನಿಕ ಸುರಕ್ಷತೆ ಗೊತ್ತುವಳಿ ಕುರಿತು

1940ರ ಜನವರಿ 23 ರಂದು ಸರ್ಕಾರದ ಪರವಿಯಿಂದ ಸಾರ್ವಜನಿಕ ಸುರಕ್ಷತೆ ಗೊತ್ತುವಳಿ ಮಂಡಿಸಲಾಯಿತು. ಇದನ್ನು ವಿರೋಧಿಸಿ ಡಿವಿಜಿಯವರು ವಾದಿಸಿದರು. ಈ ಗೊತ್ತುವಳಿಯಲ್ಲಿ ಹೇಳುವ ಸುರಕ್ಷತೆಯು ಜೈಲಿನ ಸುರಕ್ಷತೆಯಾಗಿದೆ ಮತ್ತು ಶಾಂತಿ ಎನ್ನುವುದು ಆಸ್ಪತ್ರೆಯಲ್ಲಿ ತುಂಬಿರುವ ಸಾವಿನ ದುಗುಡವಾಗಿದೆ ಎಂದ ಅವರು ವ್ಯಕ್ತಿ ಸ್ವಾತಂತ್ರ್ಯವನ್ನು ಅಪಹರಿಸುವ ಯಾವುದೇ ಕಾನೂನು ಸಾಧುವಾದದ್ದು ಅಲ್ಲ: ಸಾಮಾಜಿಕ ಮತ್ತು ಆರ್ಥಿಕ ಪ್ರಗತಿಯನ್ನು ಸಾಧಿಸಿದರೆ ಪ್ರಜೆಗಳಲ್ಲಿ ಶಾಂತಿ ತಾನೇ ತಾನಾಗಿ ನೆಲೆಸುತ್ತದೆ ಎಂದು ವಾದಿಸಿದರು. ಡಿವಿಜಿಯವರ ವಿರೋಧದ ಕಾರಣವಾಗಿ ಗೊತ್ತುವಳಿಯು ಆಯ್ಕೆ ಸಮಿತಿಗೆ ವರ್ಗಾವಣೆಗೆ ಹೋಯಿತು. ಕೊನೆಯವರೆಗೂ ಡಿವಿಜಿಯವರು ಈ ಗೊತ್ತುವಳಿಯನ್ನು ವಿರೋಧಿಸಿದರು.

– ಸಂ.

## VI. ಮೈಸೂರು ಸಾರ್ವಜನಿಕ ಭದ್ರತಾ ಮಸೂದೆ:

(ಎ) ವ್ಯವಹಾರ ನಿಯಮಗಳ ನಿಯಮ 8ರ ಅಡಿಯಲ್ಲಿ ಪ್ರಕಟಿತವಾದ ಮಸೂದೆಯನ್ನು ಪರಿಷತ್ತಿನಲ್ಲಿ ಓದಬೇಕೆಂಬ ಪ್ರಸ್ತಾವ.

**ಪ್ರಥಮ ಸದಸ್ಯ (ರಾಜಮಂತ್ರ ಪ್ರವೀಣ ಎನ್. ಮಾಧವರಾವ್)**

ಸ್ವಾಮಿ, ವ್ಯವಹಾರ ನಿಯಮಗಳ ನಿಯಮ 8ರ ಅಡಿಯಲ್ಲಿ ಪ್ರಕಟಿಸಲಾದ ಮೈಸೂರು ಸಾರ್ವಜನಿಕ ಭದ್ರತಾ ಮಸೂದೆಯನ್ನು ಪರಿಷತ್ತಿನಲ್ಲಿ ಓದಬೇಕೆಂದು ನಾನು ಪ್ರಸ್ತಾಪಿಸುತ್ತೇನೆ.

ಉದ್ದೇಶಗಳು ಮತ್ತು ಕಾರಣಗಳ ವಿವರಣೆ ಮತ್ತು ಮಸೂದೆಗೆ ಲಗತ್ತಾದ ಖಂಡಗಳ ಮೇಲಿನ ಟಿಪ್ಪಣಿಗಳು, ಮಸೂದೆಯ ಅತಿ ಮುಖ್ಯವಾದ ಉಪಬಂಧಗಳ ವ್ಯಾಪ್ತಿಯ ಕೆಲವು ವಿವರಗಳನ್ನು ಕೊಡುತ್ತದೆ. ಮತ್ತು ಅವುಗಳ ಬಗ್ಗೆ ಹೆಚ್ಚಿನ ಕಾಲಹರಣ ಮಾಡಲು ನಾನು ಇಚ್ಛಿಸುವುದಿಲ್ಲ. ಗಂಭೀರ ಪರಿಸ್ಥಿತಿಗಳನ್ನು ತಡೆಗಟ್ಟಲು ರಾಜ್ಯದಲ್ಲಿ ಸಾಕಷ್ಟು ಅನುಕೂಲತೆಯೊಂದಿಗೆ, ಬ್ರಿಟೀಷ್ ಭಾರತದ ಕ್ರಿಮಿನಲ್ ಕಾನೂನು ತಿದ್ದುಪಡಿ ಅಧಿನಿಯಮದಂಥ ಒಂದು ಅಧಿನಿಯಮಿತಿಯನ್ನು ಜಾರಿಗೊಳಿಸಬಹುದೆಂಬುದು ವಿಮರ್ಶಾತ್ಮಕ ದಲ್ಲಿನ ಗಲಭೆಗಳ ಸಂಬಂಧದಲ್ಲಿನ

ವಿಚಾರಣಾ ಸಮಿತಿಯ ಶಿಫಾರಸುಗಳ ಪೈಕಿ ಒಂದು. ಕಳೆದ ವರ್ಷವೂ ಸಹಾ ಅಂಥ ಶಾಸನ ಮಂಡನೆಯು ಪ್ರಜಾ ಪ್ರತಿನಿಧಿ ಸಭೆಯ ಚರ್ಚಾ ವಿಷಯವಾಗಿತ್ತು. ಆಗಿನಿಂದಲೂ ಅಂಥ ಒಂದು ಮಸೂದೆಯು ಸರ್ಕಾರದ ಪರಿಗಣನೆಯಲ್ಲಿದ್ದರೂ ಸಹಾ. ಅವರು ಅದರ ಮಂಡನೆ ಅಗತ್ಯವಿಲ್ಲವೆಂದು ಭಾವಿಸಿದ್ದರು.

1939ರ ಸೆಪ್ಟೆಂಬರ್‌ನಲ್ಲಿ ಒಂದು ತುರ್ತು ಕ್ರಮವಾಗಿ ಮೈಸೂರು ಸಾರ್ವಜನಿಕ ಭದ್ರತಾ ಅಧಿನಿಯಮವನ್ನು ಅಧಿನಿಯಮಿತಿಗೊಳಿಸುವುದನ್ನು ಸರ್ಕಾರಕ್ಕೆ ಅನಿವಾರ್ಯಗೊಳಿಸಿದ ಜನತೆಯ ಒಂದು ವರ್ಗದ ಚಟುವಟಿಕೆಗಳ ಬಗ್ಗೆ ಖಂಡಿತವಾಗಿಯೂ ಈ ಸದನದ ಸದಸ್ಯರಿಗೆ ಅರಿವಿದೆ. ಕಾನೂನು ಮತ್ತು ಸುವ್ಯವಸ್ಥೆ ಕಾಪಾಡಲು ಮತ್ತು ಆ ಧ್ಯೇಯವನ್ನು ಸಾಧಿಸುವಲ್ಲಿ ತುರ್ತು ಪರಿಸ್ಥಿತಿ ಅಧಿನಿಯಮವು ವ್ಯಕ್ತಪಡಿಸಿರುವ ನಿರ್ಧಾರಿತ ಪರಿಣಾಮದ ಹಿನ್ನೆಲೆಯಲ್ಲಿ ಅದನ್ನು ಖಾಯಂ ಆಗಿ ಶಾಸನ ಪುಸ್ತಕದಲ್ಲಿ ಇಡುವುದು ಸೂಕ್ತವೆಂದು ಪರಿಗಣಿಸಲಾಗಿದೆ.

ಸರ್ಕಾರವು ಅಧಿನಿಯಮದ ಎಲ್ಲ ಅಥವಾ ಯಾವುದೇ ಉಪಬಂಧಗಳನ್ನು ಅಧಿಸೂಚನೆಯ ಮೂಲಕ ಇಡೀ ರಾಜ್ಯಕ್ಕೆ ಅಥವಾ ಯಾವುದೇ ಭಾಗಕ್ಕೆ ಅನ್ವಯಗೊಳಿಸಿದ ಹೊರತು ಅದರ ಯಾವುದೇ ಉಪಬಂಧವು ಪ್ರವರ್ತನೀಯವಾಗಿರುವುದಿಲ್ಲ. ಈ ಸಂಬಂಧದಲ್ಲಿ ಅಕ್ಟೋಬರ್ 1939ರ ಪ್ರತಿನಿಧಿ ಸಭೆಯಲ್ಲಿ ದಿವಾನ್ ರವರು ಮಾಡಿದ ಭಾಷಣದಲ್ಲಿ "ವ್ಯವಸ್ಥಿತ ಅರಾಜಕತೆಯನ್ನು ಹತ್ತಿಕ್ಕುವುದು ತೀರಾ ಅವಶ್ಯಕವಾದಂತಹ ಸಂದರ್ಭಗಳ ಹೊರತು ಸರ್ಕಾರವು ಅಧಿನಿಯಮದ ಅಡಿಯಲ್ಲಿನ ಅಧಿಕಾರಗಳನ್ನು ಚಲಾಯಿಸಲು ಉದ್ದೇಶಿಸುವುದಿಲ್ಲ" ವೆಂದು ಹೇಳುವ ಮೂಲಕ ಕೊಟ್ಟ ಭರವಸೆಯನ್ನು ನಾನು ಉಲ್ಲೇಖಿಸಲು ಇಚ್ಛಿಸುತ್ತೇನೆ.

ಈ ಅಧಿನಿಯಮವು ಹೊಸದೇನನ್ನೂ ಒಳಗೊಂಡಿಲ್ಲವೆಂಬ ಅಂಶವನ್ನು ಈ ಸದನವು ನೆನಪಿಸಿಕೊಳ್ಳಬೇಕೆಂಬ ಅಂಶವನ್ನು ನಾನು ತಿಳಿಯಪಡಿಸುತ್ತೇನೆ. ಕ್ರಿಮಿನಲ್ ಕಾನೂನು ತಿದ್ದುಪಡಿ ಅಧಿನಿಯಮ, ರಾಜ ದ್ರೋಹಾತ್ಮಕ ಸಭೆಗಳ ಅಧಿನಿಯಮ ಮತ್ತು ವಿದೇಶೀಯರ ಅಧಿನಿಯಮ ಇವು ಸಾಕಷ್ಟು ಸಮಯದಿಂದ ಬ್ರಿಟೀಷ್ ಇಂಡಿಯಾದಲ್ಲಿ ಜಾರಿಯಲ್ಲಿವೆ. ಭಾರತದ ಇತರ ಕೆಲವು ರಾಜ್ಯಗಳಲ್ಲಿ ಸಹಾ ಸಾರ್ವಜನಿಕ ಭದ್ರತಾ ಅಧಿನಿಯಮಗಳು ಜಾರಿಯಲ್ಲಿವೆ. ಈ ಮಸೂದೆಯ ಬಹುತೇಕ ಉಪಬಂಧಗಳು ಆ ಅಧಿನಿಯಮದಲ್ಲಿನ ಉಪಬಂಧಗಳಂತೆಯೇ ಇವೆ.

ಸದನದ ಸದ್ಯರು ಪ್ರಜಾಪ್ರತಿನಿಧಿ ಸಭೆಯ ಕಡೆಯ ಸಭೆಯಲ್ಲಿ ಈ ಮಸೂದೆಯ ಬಗ್ಗೆ ನಡೆದ ಚರ್ಚೆಗಳನ್ನು ಓದಿರಬಹುದು. ಅವರು, ಅರಾಜಕತೆ ಮತ್ತು ಕಾನೂನು ಮತ್ತು ಸುವ್ಯವಸ್ಥೆ ಉಲ್ಲಂಘನೆಯ ಕೃತ್ಯಗಳ ಬಗ್ಗೆ ಸಕಾಲದಲ್ಲಿ ಮತ್ತು ಪ್ರತ್ಯೇಕವಾಗಿ ಕ್ರಮ ತೆಗೆದುಕೊಳ್ಳಬೇಕೆಂಬ ಮತ್ತು ಮೈಸೂರಿನಲ್ಲಿ ಒಂದು ಸಾರ್ವಜನಿಕ ಭದ್ರತಾ ಅಧಿನಿಯಮದ ಅವಶ್ಯಕತೆ ಈ ಹಿಂದಿನಿಂದಲೇ ಇತ್ತು ಎಂಬ ಸಾಮಾನ್ಯ ಅಭಿಪ್ರಾಯ ವ್ಯಕ್ತಪಡಿಸಿದರು. ಈ ಮಸೂದೆಗೆ ಅದೇ ರೀತಿಯ ಅನುಮೋದನೆ ಈ ಸದನದಲ್ಲಿ ಸಹಾ ದೊರಕುತ್ತದೆ ಎಂಬುದರಲ್ಲಿ ನನಗೆ ಯಾವುದೇ ಅನುಮಾನವಿಲ್ಲ.

(ಸಾರ್ವಜನಿಕ ಭದ್ರತಾ ಮಸೂದೆಯ ಬಗ್ಗೆ ಚರ್ಚೆ ಮುಂದವರಿದಿದೆ)

**ಶ್ರೀಯುತ ಡಿ. ವಿ. ಗುಂಡಪ್ಪ:** ಮಾನ್ಯರೇ, ಈ ಮಸೂದೆಗೆ ವಿರೋಧ ವ್ಯಕ್ತಪಡಿಸಲೇ ಬೇಕಾಗಿರುವುದಕ್ಕೆ ಕಾರಣ, ಸಾರ್ವಜನಿಕರ ಸುರಕ್ಷತೆ ಮತ್ತು ಶಾಂತಿಯ ಬಗ್ಗೆ ನನಗಿರುವ ಕಾಳಜಿ. ಈ ಬಗೆಗಿನ ನನ್ನ ಕಾಳಜಿ ಇಲ್ಲಿಯೇ ಇರುವ ಆಗಲಿ ಅಥವಾ ಮತ್ತೆಲ್ಲಿಯೇ ಆಗಲಿ ಯಾವುದೇ ವ್ಯಕ್ತಿಗಿರುವುದಕ್ಕಿಂತ ಕಡಿಮೆ ತೀಕ್ಷ್ಣವಾಗಿದೆಯೆಂಬುದಾಗಲೀ ಅಥವಾ ಕಡಿಮೆ ಗಂಭೀರವಾಗಿದೆ ಎಂಬುದಾಗಲೀ ಅಲ್ಲ. ನಿಜವಾಗಿ ಹೇಳುವುದಾದರೆ ನನ್ನ ವಿರೋಧ ರಾಜ್ಯದ ಭದ್ರತೆ ಮತ್ತು ಸಾರ್ವಜನಿಕರ ಸಮೃದ್ಧಿಯ ಬಗ್ಗೆ ನನಗಿರುವ ಅತಿಯಾಗಿರುವ ಗಮನ ಮತ್ತು ಕಳವಳದ ಅಭಿವ್ಯಕ್ತಿಯಾಗಿದೆ. ಈ ನನ್ನ ಹೇಳಿಕೆಯ ಪ್ರಾಮಾಣಿಕತೆಯನ್ನು ರುಜುವಾತುಪಡಿಸಲು ನಾನು ಯಾವುದೇ ಸುದೀರ್ಘ ಪ್ರಯತ್ನ ಮಾಡಬೇಕಿಲ್ಲವೆಂಬ ಖಚಿತ ವಿಶ್ವಾಸ ನನಗಿದೆ. ರಾಜ್ಯದಲ್ಲಿನ ಕಳೆದ ಎರಡು ಅಥವಾ ಮೂರು ವರ್ಷಗಳ ರಾಜಕೀಯ ಅಶಾಂತತೆಯ ಅವಧಿಯಲ್ಲಿ ಕಾನೂನು ಮತ್ತು ಸುವ್ಯವಸ್ಥೆಯ ಪರವಾಗಿ ನಾನು ದೃಢವಾಗಿ ನಿಂತಿದ್ದೇನೆಂಬುದು ಸರ್ಕಾರದ ಸದಸ್ಯರಿಗೆ ತಿಳಿದಿದೆ. ಈಗ್ಗೆ ಸುಮಾರು ಎರಡು ವರ್ಷಗಳ ಹಿಂದೆ ಜನತೆಯ ಮನಸ್ಸು ಅಭೂತಪೂರ್ವ ಚಳುವಳಿ ಸ್ಥಿತಿಯಲ್ಲಿದ್ದಾಗ ತಮ್ಮನ್ನು ತಾವೇ ಸಾರ್ವಜನಿಕ ಪ್ರಾಧಿಕಾರದ ಪರವಾಗಿರಿಸಿಕೊಂಡು ಅಪಾರ್ಥ ಕಲ್ಪನೆ ಮತ್ತು ಕುಖ್ಯಾತಿಗೆ ಗುರಿಯಾಗುವುದಕ್ಕೆ ಮುಂದಾದ ನಾಗರಿಕರ ಒಂದು ಸಣ್ಣ ಗುಂಪಿನಲ್ಲಿ ನಾನೂ ಇದ್ದೆ. ನಾಗರಿಕ ಅವ್ಯವಸ್ಥೆಗಳು ಮತ್ತು ಶಾಂತಿಭಂಗಕಾರಕ ದೊಂಬಿಗಳನ್ನು ನಾನು ಬಹಳ ಅಸಹ್ಯಕರವೆಂದು ಕಾಣುತ್ತೇನೆಂಬುದನ್ನು ಪ್ರತಿ ಸದಸ್ಯರಿಗೆ ಈ ಕೂಡಲೇ ತಿಳಿಯಪಡಿಸಲು ಇಚ್ಛಿಸುತ್ತೇನೆ. ಮೈಸೂರಿನಲ್ಲಿ ರಾಜಕೀಯ ಪ್ರಗತಿ

ಸಾಧಿಸಬಹುದೆಂಬುದೆಂದು ಮತ್ತು ಒಟ್ಟಾರೆ ಶಾಂತಿಯುತ ಮತ್ತು ಅಹಿಂಸಾ ಮಾರ್ಗಗಳ ಮೂಲಕ ಸಮಾಜದ ಆರ್ಥಿಕ ಪುನರ್‌ನಿರ್ಮಾಣ ಸಾಧಿಸಬಹುದೆಂದು ನಾನು ಈಗಲೂ ನಂಬಿದ್ದೇನೆ. ಆದಾಗ್ಯೂ ಈ ನನ್ನ ಆಶಯವು ಸಾಕಾರವಾಗಬೇಕಾದರೆ ಅದಕ್ಕೆ ಒಂದು ಷರತ್ತನ್ನು ಮೊದಲೇ ಪೂರೈಸಬೇಕಾದ ಅಗತ್ಯವಿದೆ. ಅದೆಂದರೆ ಪ್ರಜೆಗಳ ಪ್ರಾಥಮಿಕ ಸ್ವಾತಂತ್ರ್ಯಕ್ಕೆ ಪ್ರಹಾರ ಮಾಡದಿರುವುದು, ಪ್ರಾಜ್ಞ ಮತ್ತು ದೃಢ ಸಂಕಲ್ಪದ ನಾಗರಿಕರ ಇಂಥ ಕಾರ್ಯಚಟುವಟಿಕೆಯ ಹಾದಿಯಲ್ಲಿ ಯಾವುದೇ ಅನಗತ್ಯ ಅಡಚಣೆ ಮಾಡಬಾರದೆಂಬುದು. ಈ ಮೂಲಭೂತ ಷರತ್ತನ್ನು ಊರ್ಜಿತಗೊಳಿಸದಿದ್ದರೆ ಸಾಂವಿಧಾನಿಕ ಪ್ರಗತಿ ಅಸಾಧ್ಯವಾಗುವುದಷ್ಟೇ ಅಲ್ಲದೆ ಸಾಮಾನ್ಯ ನಾಗರಿಕ ಜೀವನದ ಶಾಂತಿ ಮತ್ತು ಸ್ವಾತಂತ್ರ್ಯವನ್ನು ಅಪಾಯದಲ್ಲಿ ಸಿಲುಕಿಸಿದಂತಾಗುತ್ತದೆ. ಈ ದೃಷ್ಟಿಯಿಂದಲೇ ಈ ವಿಧೇಯಕಕ್ಕೆ ನನ್ನ ವಿರೋಧವನ್ನು ದಾಖಲಿಸುತ್ತಿದ್ದೇನೆ.

ನಾನು ಈ ವಿಧೇಯಕದ ವಿವರವಾದ ಉಪಬಂಧಗಳ ಒಳಹೋಗುವುದಿಲ್ಲ. ಏಕೆಂದರೆ ಹಾಗೆ ಮಾಡಬೇಕೆಂದು ನನಗೆ ಅನಿಸುತ್ತಿಲ್ಲ. ಅದು ರಾಜ್ಯದಲ್ಲಿ ಇದುವರೆಗೆ ಅನುಭವಿಸುತ್ತಿದ್ದ ಪ್ರತಿಯೊಂದು ರೀತಿಯ ನಾಗರಿಕ ಸ್ವಾತಂತ್ರ್ಯಕ್ಕೆ ಪ್ರಹಾರ ಮಾಡುವ ಉದ್ದೇಶ ಹೊಂದಿದೆ. ಅದು ನಿವಾಸದ ಮತ್ತು ಚಲನ ವಲನದ ಹಕ್ಕಿಗೆ, ವಾಕ್ ಸ್ವಾತಂತ್ರ್ಯದ ಹಕ್ಕಿಗೆ, ಮಾಲಿಕತ್ವದ ಹಕ್ಕಿಗೆ ಮತ್ತು ಆತಿಥ್ಯ ನೀಡಿಕೆ ಹಕ್ಕಿಗೆ ಅಡ್ಡಿ ಉಂಟು ಮಾಡುತ್ತದೆ. ಹಾಗಾದರೆ ಯಾವ ಹಕ್ಕಿಗೆ ಧಕ್ಕೆ ತಂದಿಲ್ಲ? ಈ ಕಾನೂನು ಯಾವ ರೀತಿಯ ಭದ್ರತೆ ಮತ್ತು ಶಾಂತಿಯನ್ನು, ಸಾರ್ವಜನಿಕರಿಗೆ ಒದಗಿಸುತ್ತದೆಂಬುದನ್ನು ನಿರೀಕ್ಷಿಸಬಹುದು? ನನಗೆ ಈ ಮಸೂದೆಯು ಬಂದೀಖಾನೆಯ ಭದ್ರತೆ ಮತ್ತು ಶಸ್ತ್ರ ಪಾಣಿನ ಶಾಂತಿಗಷ್ಟೇ ಕಾರಣವಾಗುತ್ತದೆಂದು ತೋರುತ್ತದೆ. ಹೆದರಿಕೆ ಮತ್ತು ಭಯ ಸಾರ್ವಜನಿಕರ ಮನಸ್ಸಿನಲ್ಲಿ ನೆಲಸಿರುತ್ತದೆ ಮತ್ತು ಅವರ ಹೃದಯದ ಕೇಂದ್ರ ಬಿಂದುವಿನಲ್ಲಿ ಅಗೋಚರ ಅತೃಪ್ತಿ ಮತ್ತು ರೋಷ ನೆಲೆಸುತ್ತವೆ. ಈ ಅಂತರಾಳದ ಅತೃಪ್ತಿ ನಿಜಕ್ಕೂ ಶಾಂತಿ ಮತ್ತು ಸೌಹಾರ್ದತೆ ಸ್ಥಾಪಿಸುವ ಒಂದು ನಿಜವಾದ ಮಾರ್ಗವೇ ಎಂದು ಅತ್ಯಂತ ನಮ್ರತೆಯಿಂದ ಕೇಳುತ್ತೇನೆ.

ಸರ್ಕಾರದ ಈ ಹೆಜ್ಜೆ ಜನರ ಒಂದು ವರ್ಗದ ಕಾರ್ಯಚಟುವಟಿಕೆಗಳ ಬಗೆಗಿನ ತೀವ್ರ ಅಸಮ್ಮತಿಯಿಂದ ಪ್ರಚೋದಿತವಾಗಿದೆಯೆಂಬುದು ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆಯಿಂದ ಸ್ಪಷ್ಟವಾಗಿದೆ. "ಜನತೆಯ ಒಂದು ವರ್ಗದ ಇತ್ತೀಚಿನ ಚಟುವಟಿಕೆಗಳು" ಎಂದು ಹೇಳಲಾಗಿರುವ ಸಂದರ್ಭವು ಯಾವ

ಚಟುವಟಿಕೆಗಳನ್ನು ಗುರಿಯಿಟ್ಟುಕೊಳ್ಳಲಾಗಿದೆಯೋ ಆ ಚಟುವಟಿಕೆಗಳನ್ನು ಮೈಸೂರು ಕಾಂಗ್ರೆಸ್ ಎಂದು ಕರೆಯಲಾಗುವ ಸಂಘಟನೆಯು ಮಾಡುತ್ತಿರುವಂತಹುಗಳಾಗಿವೆ ಎಂಬುದನ್ನು ಸ್ಪಷ್ಟಪಡಿಸುತ್ತದೆ............

O

(ಸಿ) ವಿಧೇಯಕದ ಮೇಲಿನ ಪರಿಶೀಲನಾ ಸಮಿತಿಯ ವರದಿ ಮತ್ತು ಅದರಿಂದ ತಿದ್ದುಪಡಿಯಾದ ವಿಧೇಯಕವನ್ನು ಪರಿಗಣನೆಗೆ ತೆಗೆದುಕೊಳ್ಳಬೇಕೆಂಬ ಸೂಚನೆ.

**ಪ್ರಥಮ ಸದಸ್ಯ (ರಾಜಮಂತ್ರ ಪ್ರವೀಣ ಎಸ್ ಮಾಧವರಾವ್)**.- ಸ್ವಾಮಿ, ಸಾರ್ವಜನಿಕ ಭದ್ರತೆ ಮೇಲಿನ ಪರಿಶೀಲನಾ ಸಮಿತಿಯ ವರದಿಯನ್ನು ಮತ್ತು ಅದರಿಂದ ತಿದ್ದುಪಡಿಯಾದಂತಹ ವಿಧೇಯಕವನ್ನು ಪರಿಗಣನೆಗಾಗಿ ತೆಗೆದುಕೊಳ್ಳಬೇಕೆಂದು ನಾನು ಸೂಚಿಸುತ್ತೇನೆ.

**ಶ್ರೀಯುತ ಸುಬ್ರಮಣ್ಯ ಅಯ್ಯರ್**- ನಾನು ಸೂಚನೆಯನ್ನು ಅನುಮೋದಿಸುತ್ತೇನೆ.

**ಶ್ರೀಯುತ ಡಿ. ವಿ. ಗುಂಡಪ್ಪ**- ಸ್ವಾಮಿ, ವಿಧೇಯಕವನ್ನು ವಿರೋಧಿಸಿದ ಮೂರು ಮಂದಿಯ ಪೈಕಿ ಒಬ್ಬನಾಗಿ ನಾನು ಟೀಕೆ ಟಿಪ್ಪಣಿಗಳನ್ನು ಮಾಡುವ ಸಲುವಾಗಿ ತಮ್ಮ ಅನುಮತಿಯನ್ನು ಮತ್ತು ಸದನದ ತಾಳ್ಮೆಯನ್ನು ಕೋರುತ್ತೇನೆ. ಮುಕ್ತಾಯದ ವೇಳೆಯಲ್ಲಿ ನಾನು ಈ ಟೀಕೆ ಟಿಪ್ಪಣಿಗಳನ್ನು ಮಾಡಲು ನಿಂತುಕೊಳ್ಳಬಹುದಾಗಿತ್ತು. ನಾನು ಈ ಮುಕ್ತಾಯ ಪೂರ್ವ ಅವಧಿಯಲ್ಲಿ ಸದನದ ಪರಿಗಣನೆಗಾಗಿ ಅವುಗಳನ್ನು ಸಲ್ಲಿಸುವುದು ನ್ಯಾಯಸಮ್ಮತವೆಂದು ಭಾವಿಸುತ್ತೇನೆ. ಈ ವಿಧೇಯಕದ ಬಗೆಗಿನ ಚರ್ಚೆಯ ಮುಕ್ತಾಯದ ಕ್ಷಣಗಳಲ್ಲಿ ನಿನ್ನೆ ನಾನು ಇರಲಿಲ್ಲವೆಂಬುದಕ್ಕೆ ವಿಷಾದಿಸುತ್ತೇನೆ. ನನಗೆ ಸ್ವಲ್ಪ ದೇಹಾಲಸ್ಯವಾದ ಕಾರಣ ನಾನು ಸಭಾಪತಿಯವರ ಅನುಮತಿಯೊಂದಿಗೆ ಹೊರಹೋದೆ. ಒಂದು ಉತ್ತಮ ಅವಕಾಶ ಕಳೆದುಕೊಂಡುದಕ್ಕೆ ನನಗೆ ವಿಷಾದವೆನಿಸಿದೆ. ವಿಧೇಯಕದ ಮಾನ್ಯ ಸೂಚಕರು ಈ ಕಾನೂನಿನ ಬಗ್ಗೆ ವಿರೋಧ ವ್ಯಕ್ತಪಡಿಸಿದವರ ಮೇಲೆ ನೈಪುಣ್ಯತೆಯಿಂದ ಪ್ರಹಾರ ನಡೆಸಿದರೆಂದು ಹಲವಾರು ಸದಸ್ಯರು ನನಗೆ ತಿಳಿಸಿದ್ದಾರೆ. ಸ್ವಾಮಿ, ಈ ಸದನದಲ್ಲಿನ ಒಂದು ಉತ್ತಮ ಭಾಷಣವನ್ನು, ಅದು ನನ್ನ ವಿರುದ್ಧವಿದ್ದರೂ ಸಹ ಅನುಭವಿಸುವ ಸಾಮರ್ಥ್ಯ ನನಗಿದೆ ಎಂದು ನನ್ನ ಭಾವನೆ. ನನ್ನ ಬೆನ್ನ ಮೇಲೆ ಗದಾ ಪ್ರಹಾರ ಮಾಡಿದರೂ, ಮಾನ್ಯ ಸೂಚಕರು ನನ್ನ ಬಗ್ಗೆ

ನಿರ್ದಯಿಯಾಗಿದ್ದರೆಂದು ನಾನು ಹೇಳುತ್ತಿಲ್ಲ. ಅದು ನನ್ನ ಉದ್ದೇಶ ಅಲ್ಲವೇ ಅಲ್ಲ. ಆದರೆ ಅವರು ಅತ್ಯಂತ ನ್ಯಾಯಯುತವಾಗಿ ಮತ್ತು ದಯಾಳುವಾಗಿ ನಡೆದುಕೊಳ್ಳುತ್ತಾರೆಂದು ನಾನು ನಿಜವಾಗಿಯೂ ನಿರೀಕ್ಷಿಸಿದ್ದೆ. ಆದರೆ ಅದು ವೈಯಕ್ತಿಕ ವಿಷಯ. ನನ್ನ ವಿರುದ್ಧ ಮಾಡಲಾದ ಆಪಾದನೆ ಯಾವುದು ಎಂಬುದನ್ನು ತಿಳಿದುಕೊಳ್ಳಲು ನಾನು ಪ್ರಯತ್ನಿಸಿದೆ. ಈ ಬಗ್ಗೆ ನನಗೆ ಒಂದೇ ಒಂದು ಅಂಶವನ್ನು ತಿಳಿಸಲಾಯಿತು. ಸದನದ ಹಿಂದಿನ ಸಭೆಯಲ್ಲಿ ಪ್ರಜೆಗಳ ನಾಗರಿಕ ಸ್ವಾತಂತ್ರ್ಯದ ಬಗ್ಗೆ ಸರ್ಕಾರ ಕೈಗೊಳ್ಳಬೇಕಾದ ಸೂಕ್ತ ಮನೋಭಾವದ ಬಗ್ಗೆ ವಿಪರೀತ ಚರ್ಚೆಗಿಟ್ಟುಕೊಂಡಿರುವ ಮತ್ತು ಜಟಿಲವಾದ ಪ್ರಶ್ನೆಯನ್ನು ನಾನು ಒಂದು ನಿರ್ದಿಷ್ಟ ರೀತಿಯಲ್ಲಿ ಅಭಿವ್ಯಕ್ತಪಡಿಸಿದ್ದೆ. ನನಗೆ ತಿಳಿದುಬಂದಿರುವಂತೆ, ಮಾನ್ಯ ಸೂಚಕರು ನನ್ನ ವಿರುದ್ಧ ನನ್ನದೇ ಭಾಷಣದಿಂದ ಉಲ್ಲೇಖಿಸಿದ ಒಂದು ತುಣುಕು ಈ ಮುಂದಿನಂತಿದೆ:

" ಸರ್ಕಾರವು ಒಬ್ಬ ಮನುಷ್ಯನ ಮತ ಯಾವುದು ಎಂಬುದರ ಬಗ್ಗೆ ಗಮನಕೊಡುವುದಿಲ್ಲ ಮತ್ತು ಹಾಗೆ ಕೊಡಬೇಕಾದ ಅಗತ್ಯವಿಲ್ಲವೆಂದು ಡಾ. ಡಿಸೋಜಾ ಹೇಳಿದರು. ಆ ತತ್ವವನ್ನು ನಾನು ಸಂಪೂರ್ಣವಾಗಿ ಒಪ್ಪುತ್ತೇನೆ. ಆದರೆ ಅದು ನನಗೆ ಸಂಬಂಧಪಡುವ ಒಂದು ತತ್ವದಿಂದ ಉದ್ಭವಿಸುವ ಒಂದು ವಿಷಯ ಎಂದರೆ, ಸಾರ್ವಜನಿಕ ಶಾಂತಿ ಮತ್ತು ಸುವ್ಯವಸ್ಥೆ ಪಾಲನೆ ಬಗ್ಗೆ ರಾಜ್ಯವು ಹೆಚ್ಚಿನ ಆಸಕ್ತಿ ಹೊಂದಿದೆ ಎಂಬುವಕ್ಕೆ ಸಂಬಂಧಪಟ್ಟ ವಿಷಯ".

ನಾನು ಈಗಲೂ ಸಹಾ ಅದೇ ಮನೋಭಾವವನ್ನು ಪ್ರತಿಪಾದಿಸುತ್ತೇನೆ. ಈ ಮಾತುಗಳಲ್ಲಿ ವ್ಯಕ್ತಪಡಿಸಿರುವ ನಿಲುವು ಮತ್ತು ನಾನು ನಿನ್ನೆ ತೆಗೆದುಕೊಂಡಿರುವ ನಿಲುವು ಇವೆರಡರ ನಡುವೆ ನಾನು ಯಾವುದೇ ಅಸಂಗತ ವಿಷಯವನ್ನು ಹೇಳಿಲ್ಲ.

**ಶ್ರೀಯುತ ಬಿ. ಎಸ್. ಪುಟ್ಟಸ್ವಾಮಿ.–** ಒಂದು ಕ್ರಿಯಾಲೋಪ. ಈಗ ಏನು ನಡೆಯುತ್ತಿದೆಯೆಂಬುವನ್ನು ನಾನು ತಿಳಿದುಕೊಳ್ಳಲಿಚ್ಛಿಸುತ್ತೇನೆ.

**ಮಾನ್ಯ ಅಧ್ಯಕ್ಷರು.–** ಅವರು, ಈ ವಿಧೇಯಕದ ಸೂಚಕರು ವ್ಯಕ್ತಪಡಿಸಿದ ಅಭಿಪ್ರಾಯಗಳ ಸಂಬಂಧದಲ್ಲಿ ತಾವಾಗೇ ವಿವರಿಸುತ್ತಿದ್ದಾರೆ. ಆದರೆ ಈಗ ತಡವಾಗುತ್ತಿದೆ ಮತ್ತು ಮಾನ್ಯ ಸದಸ್ಯರು ಮುಖ್ಯವಾಗಿ ಅವರು ಆ ಸಮಯದಲ್ಲಿ ಇರದಿದ್ದ ಕಾರಣ ಆ ವಿಷಯವನ್ನು ಈಗ ಚರ್ಚಿಸದಿರುವುದು ಒಳಿತು.

**ಖಾನ್ ಬಹದ್ದೂರ್ ಮೊಹಮದ್ ಅಬ್ಬಾಸ್ ಖಾನ್.**– ಇದರ ಬಗ್ಗೆ ಇತರ ಸದಸ್ಯರೂ ಸಹ ಮಾತನಾಡಲು ಅವಕಾಶವಿದೆಯೇ?

**ಮಾನ್ಯ ಅಧ್ಯಕ್ಷರು.**– ಸಂಜೆ 5 ಗಂಟೆಗೆ ಸಭೆಯನ್ನು ಮುಕ್ತಾಯಗೊಳಿಸಲು ನಾನು ಇಚ್ಛಿಸುತ್ತೇನೆ. ಮಾನ್ಯ ಸದಸ್ಯರು ತಮ್ಮ ಭಾಷಣವನ್ನು ಎಷ್ಟು ಸಾಧ್ಯವೋ ಅಷ್ಟು ಸಂಕ್ಷಿಪ್ತವಾಗಿ ಮಾಡಿ ಮುಗಿಸುತ್ತಾರೆಂದು ನಾನು ಭಾವಿಸುತ್ತೇನೆ.

**ಶ್ರೀಯುತ ಬಿ. ಎಸ್. ಪುಟ್ಟಸ್ವಾಮಿ.**– ಅಂಥ ಒಂದು ಪ್ರಕ್ರಿಯೆಯು ಈ ಹಂತದಲ್ಲಿ ಸಮರ್ಥನೀಯವೇ ಎಂಬುದನ್ನು ನಾನು ತಿಳಿಯಲಿಚ್ಛಿಸುತ್ತೇನೆ.

**ಅಧ್ಯಕ್ಷರು.**– ಸದನಕ್ಕೆ ಒಂದು ವಿವರಣೆ ಕೊಡಬೇಕೆಂದು ಅವರು ಆಶಿಸಿದ್ದಾರೆ.

**ಶ್ರೀಯುತ ಡಿ. ವಿ. ಗುಂಡಪ್ಪ:** ನಾನು ನಿನ್ನೆ ಮಾಡಿದ ಭಾಷಣಕ್ಕೆ ಹೆಚ್ಚಿನ ಸಮಯ ತೆಗೆದುಕೊಂಡೆ ಎಂಬುದಾಗಿ ಹೇಳುವುದು ಉಚಿತವಲ್ಲವೆಂದು ನನ್ನ ಭಾವನೆ. ಈ ಸದನದಲ್ಲಿ ಇತರ ಸದಸ್ಯರು ಸಮಯವನ್ನು ಎಷ್ಟು ಉತ್ಸಾಹದಿಂದ ಬಳಸುತ್ತಾರೋ ಅಷ್ಟೇ ಉತ್ಸಾಹದಿಂದ ನಾನು ಮಾಡಿದ್ದೇನೆಂಬುದನ್ನು ನಾನು ವಿನಯಪೂರ್ವಕವಾಗಿ ಹೇಳುತ್ತೇನೆ. ಆ ಒಂದು ಸೂಕ್ಷ್ಮ ಮನೋಭಾವದಿಂದಲೇ ನಾನು ಸಮಯದ ಸಮರ್ಪಕ ಬಳಕೆ ಮಾಡುವ ಕಾರಣಕ್ಕಾಗಿ ನನ್ನ ಭಾಷಣವನ್ನು ಬರೆದುಕೊಂಡು ಓದುವ ತೊಂದರೆ ತೆಗೆದುಕೊಂಡೆ. ಅದು ನನ್ನ ಸಹಜ ಪರಿಪಾಠವಲ್ಲವೆಂಬುದು ಕೆಲವು ಸದಸ್ಯರಿಗೆ ಗೊತ್ತು. ಆದರೆ ಈ ದಿನ ಈ ಸಭೆಯಲ್ಲಿ ಮಾತಾಡಲು ನಿಂತುಕೊಂಡು ಮಾತುಗಳನ್ನು ಹುಡುಕುವಂತಹ ದುರದೃಷ್ಟದ ಸನ್ನಿವೇಶದಲ್ಲಿ ಇದ್ದೇನೆ. ಆದರೂ ಯಾವುದೇ ಸುದೀರ್ಘ ಭಾಷಣ ಮಾಡುವ ಉದ್ದೇಶ ನನ್ನದಾಗಿಲ್ಲವೆಂದು ನನ್ನ ಸ್ನೇಹಿತರಿಗೆ ಭರವಸೆ ನೀಡಬಯಸುತ್ತೇನೆ. ನಾನು ನನ್ನ ಪ್ರಾಸ್ತಾವಿಕ ಟಿಪ್ಪಣಿಯಲ್ಲಿ ತಿಳಿಸಿದಂತೆ ನಿನ್ನೆ ಮಾನ್ಯ ಸೂಚಕರು ಮಾಡಿದ ಅಭಿವ್ಯಕ್ತಿಗಳಿಂದ ಕೇವಲ ಒಂದು ಅಂಶವನ್ನಷ್ಟೇ ಉಲ್ಲೇಖಿಸಲು ಸಾಧ್ಯವಾಯಿತು. ಸಾರ್ವಜನಿಕರ ಆಂದೋಲನಗಳನ್ನು ನಿಯಂತ್ರಿಸಲು ರಾಜ್ಯಕ್ಕೆ ಹಕ್ಕಿಲ್ಲವೆಂಬುದು ನನ್ನ ನಿಲುವಲ್ಲ. ಆದರೆ, ಅಂಥ ಒಂದು ತೀವ್ರತರ ಕ್ರಮತೆಗೆದುಕೊಳ್ಳುವ ಒಂದು ಅವಶ್ಯಕತೆ ಉಂಟಾಗಿಲ್ಲ ಎಂಬುದಷ್ಟೇ ನನ್ನ ನಿಲುವು. ಈ ಒಂದು ಸ್ವರೂಪದ ಶಾಸನವನ್ನು ತರುವ ಒಂದು ಸಂದರ್ಭ ಉಂಟಾಗಿದೆ ಎಂಬ ಅಭಿಪ್ರಾಯವನ್ನು ಸರ್ಕಾರವು ಪ್ರಾಮಾಣಿಕವಾಗಿ ಹೊಂದಿದ್ದರೆ, ಈ

5750 - 12

ಭಾವನೆಯನ್ನು ನಾನು ವ್ಯಕ್ತಪಡಿಸುತ್ತಿರಲಿಲ್ಲ. ನಾನು ಗಮನಿಸಿರುವ ಪ್ರಕಾರ ಈ ಯಾವುದೇ ರೀತಿಯ ಕಾನೂನು ರಚನೆ ಇಲ್ಲದೆ ಕೇವಲ ರಾಜತಂತ್ರ ಸ್ಥಿತಿಯಿಂದಲೇ ಪರಿಸ್ಥಿತಿಯನ್ನು ನಿಭಾಯಿಸಬಹುದಾದ ಒಂದು ಸ್ಥಿತಿ ಇದೆ. ಈ ಒಂಗು ಅಭೀಷ್ಠೆ ತಿಳಿಸಿದ ಮಾತ್ರಕ್ಕೆ ಸಾರ್ವಜನಿಕ ಆಂದೋಲನಗಳು ಯಾವುದೇ ಸಂದರ್ಭದಲ್ಲಿಯೂ ಕಾನೂನಿನ ನಿಯಂತ್ರಣದಲ್ಲಿರಬಾರದೆಂಬ ನಿಲುವನ್ನು ನಾನು ತಾಳಿಲ್ಲವೆಂಬುದನ್ನು ಈ ಕೂಡಲೇ ತಿಳಿಸಬಯಸುತ್ತೇನೆ. ಅಂಥ ಒಂದು ಕಾನೂನನ್ನು ತರುವ ಸಂದರ್ಭ ರಾಜ್ಯದಲ್ಲಿ ಉಂಟಾಗಿಲ್ಲವೆಂಬುದನ್ನಷ್ಟೇ ನಾನು ತಿಳಿಸಬಯಸುತ್ತೇನೆ. ಸರ್ಕಾರವು ಪ್ರಾಮಾಣಿಕವಾಗಿ ಇಂತಹ ಕಾನೂನನ್ನು ತರುವುದು ಅವಶ್ಯಕವಾಗಿರುವಂತಹ ಪರಿಸ್ಥಿತಿ ನಿರ್ಮಾಣವಾಗಿದೆ ಎಂದು ಭಾವಿಸುತ್ತಿದ್ದರೆ ನಾನು ಆ ಭಾವನೆಗೆ ಪಾಲುದಾರನಾಗುವುದಿಲ್ಲ. ಈ ಒಂದು ಅಭಿಪ್ರಾಯ ಮಂಡಿಸಿ ನಾನು ಈ ನ್ಯಾಯಪೀಠಗಳಿಂದ ಆಲಿಸಿದ, ಈ ವಿಧೇಯಕದ ಸಮರ್ಥನೆಯಲ್ಲಿ ಮಾಡಿದ ಪ್ರತಿಯೊಂದು ಭಾಷಣಕ್ಕೆ ಕಾರಣವಾದ ಮತ್ತೊಂದು ವಿಷಯದ ಬಗ್ಗೆ, ಎಂದರೆ ಕಾಂಗ್ರೆಸ್‌ನ ಕಾರ್ಯಚಟುವಟಿಕೆಗಳ ಬಗ್ಗೆ ಮಾತನಾಡಲು ಇಚ್ಛಿಸುತ್ತೇನೆ. ನಾನು ಕಾಂಗ್ರೆಸ್ ಅನ್ನು ಸಮರ್ಥಿಸಿಕೊಳ್ಳುವ ಪ್ರಯತ್ನವನ್ನು ಮಾಡುವುದಿಲ್ಲ. ನಾನು ನಿನ್ನೆ ನನ್ನ ಭಾಷಣದಲ್ಲಿ ಸ್ಪಷ್ಟಪಡಿಸಿದ ಹಾಗೆ ನಾನೊಬ್ಬ ಕಾಂಗ್ರೆಸಿಗನಲ್ಲ ಮತ್ತು ನಾನು ಅದರ ಸಮರ್ಥನೆ ಮಾಡಲು ತೊಡಗಿದರೂ ಅವರು ಅಸಮಾಧಾನಗೊಳ್ಳುತ್ತಾರೆ. ನಿನ್ನೆ ಅರಣ್ಯ ಸತ್ಯಾಗ್ರಹ ಮುಂತಾದ ವಾಕ್ಯಪುಂಜಗಳಲ್ಲಿ ಉಲ್ಲೇಖಿಸಲಾದ ಚಟುವಟಿಕೆ ಬಗ್ಗೆ ಸಹಾ ನನಗೆ ಕರುಣೆ ಇಲ್ಲ ಎಂದು ಸಹಾ ನಾನು ಹೇಳುತ್ತೇನೆ. ಅಂತಹ ರೀತಿಯ ಕಾರ್ಯಚಟುವಟಿಕೆಗಳಿಗೆ ನಾನು ಸಮ್ಮತಿ ನೀಡುವುದಿಲ್ಲ. ಪ್ರಾಸಂಗಿಕವಾಗಿ ಹೇಳುವುದಾದರೆ, ವರ್ಷಗಳ ಹಿಂದೆ ಬೇಲ್‌ಗಳನ್ನು ಮತ್ತು ಅಪಾರ ಪ್ರಮಾಣದ ವಿದೇಶಿ ಬಟ್ಟೆಗಳನ್ನು ಸುಡಲು ಮತ್ತು ಸ್ವದೇಶಿ ಹೆಸರಿನಲ್ಲಿ ಅದನ್ನು ನಾಶ ಮಾಡುವ ಪ್ರಯತ್ನ ಮಾಡಿದಾಗ ಅಂಥ ಒಂದು ಪ್ರಯತ್ನವನ್ನು ರಾಷ್ಟ್ರದ ಸಂಪತ್ತನ್ನು ನಾಶಗೊಳಿಸುವಂತಹ ಒಂದು ಪ್ರಯತ್ನವೆಂದು ವಿಷಾದಿಸಿದಂತಹ ವ್ಯಕ್ತಿಗಳಲ್ಲಿ ನಾನೊಬ್ಬನಾಗಿದ್ದೆ. ಅರಣ್ಯದ ಅಂಗಳದಲ್ಲಿ, ತಾಳೆಮರಗಳನ್ನು ಕತ್ತರಿಸಿ ಹಾಕುವ ಪ್ರಯತ್ನವನ್ನು ನಾನು ರಾಷ್ಟ್ರ ಸಂಪತ್ತಿನ ನಾಶಗೊಳಿಸುವಿಕೆಯ ಕಾರ್ಯವೆಂದೇ ಪರಿಗಣಿಸುತ್ತೇನೆ ಮತ್ತು ಖಂಡಿತವಾಗಿಯೂ ನಾನು ಅದನ್ನು ಅನುಮೋದಿಸುವುದಿಲ್ಲ. ನಾನು ಹೇಳುತ್ತಿರುವುದೇನೆಂದರೆ, ಮೈಸೂರು ಕಾಂಗ್ರೆಸ್ ತಪ್ಪೆಂದು ಹೇಳಬಹುದಾದಂತಹ ವಿಷಯಗಳಲ್ಲಿ ಭಾಗವಹಿಸಿರಬಹುದು. ಆದರೆ ನಾನು ಅರ್ಥಮಾಡಿಕೊಂಡಂತೆ ಅದರ ಉದ್ದೇಶ ವಿಧ್ವಂಸಕವಲ್ಲ. ಅದು

ಕೇಳುತ್ತಿರುವುದು ಕೇವಲ ಒಂದು ಜವಾಬ್ದಾರಿಯುತ ಸರ್ಕಾರವನ್ನು ಮಾತ್ರ. ಅದು ಸರಿ ಇರಬಹುದು ಅಥವಾ ತಪ್ಪಿರಬಹುದು. ಒಂದು ಜವಾಬ್ದಾರಿಯುತ ಸರ್ಕಾರವು ಅದರ ಕರ್ತವ್ಯದ ಹಾದಿಯಲ್ಲಿ ಯಾವುದೇ ಅಡ್ಡಿ ಆತಂಕ ಒಡ್ಡಬಾರದು. ನನ್ನ ವಾದದ ಎರಡನೇ ಹಂತವೆಂದರೆ ಈ ಶಾಸನವನ್ನು ಕಾಂಗ್ರೆಸ್ ಕಾರ್ಯಕರ್ತರ ವಿರುದ್ಧ ಬಳಸಲಾಗುತ್ತಿದೆಯೆಂಬ ಭಯ.

**ಅಧ್ಯಕ್ಷರು.**– ಈ ಗತಿಯಲ್ಲಿ ಮುಂದುವರೆದರೆ ಸಭೆಯನ್ನು 5 ಗಂಟೆಗೆ ಮುಕ್ತಾಯಗೊಳಿಸಬಹುದೆಂದು ನನಗೆ ಅನ್ನಿಸುತ್ತಿಲ್ಲ. ಪರಿಶೀಲನಾ ಸಮಿತಿಯ ವರದಿ ನಮ್ಮ ಮುಂದಿದೆ.

**ಶ್ರೀ. ಡಿ.ವಿ. ಗುಂಡಪ್ಪ.**– ಇಲ್ಲಿ ಚರ್ಚೆಗೆ ಬರುವಂತಹ ಒಂದು ವಿಷಯದ ಬಗ್ಗೆ ಈ ಸದನದ ಒಬ್ಬ ಸದಸ್ಯರು ಸಾರ್ವಜನಿಕವಾಗಿ ಟೀಕೆ ಮಾಡಬಹುದೇ ಎಂಬುದನ್ನು ನಾನು ತಿಳಿಯಲಿಚ್ಛಿಸುತ್ತೇನೆ. ನಿಮ್ಮದೇ ಒಂದು ನಿರ್ಣಯದ ಪ್ರಕಾರ, ಈ ಸದನದಲ್ಲಿ ಚರ್ಚೆಗೆ ಬರುವ ಒಂದು ವಿಷಯದ ಬಗ್ಗೆ ಸಾರ್ವಜನಿಕವಾಗಿ ವಿಮರ್ಶಿಸಬಾರದು. ನೀವು ಈಗ ಸಂಜೆ 4–55 ರಲ್ಲಿ ಈ ಶಾಸನವನ್ನು ಮಂಡಿಸಲು ಮುಂದಾಗಿದ್ದೀರಿ. ನೀವು 5 ಗಂಟೆಗೆ 10 ನಿಮಿಷ ಇರುವಾಗ ಪರಿಶೀಲನಾ ವರದಿಯನ್ನು ಮಂಡಿಸುತ್ತಿದ್ದೀರಿ. ಆದರೆ ನೀವು ನನಗೆ ಪೂರ್ಣ ಭಾಷಣ ಮಾಡಲು ಅವಕಾಶ ಮಾಡಿಕೊಡುತ್ತಿಲ್ಲ. ನೀವು ಅದೇ ಸರಿ ಎಂದು ಪರಿಗಣಿಸಿದರೆ ನಾನು ಇನ್ನು ಮುಂದುವರಿಸುವುದಿಲ್ಲ. ಆದರೆ ಅದರ ಬಗ್ಗೆ ನನ್ನದೇ ಆದ ಭಾವನೆಗಳನ್ನು ಕಾದಿರಿಸುತ್ತೇನೆ.

**ಅಧ್ಯಕ್ಷರು.**– ಸದಸ್ಯರು, ಅವರ ಗೈರು ಹಾಜರಿಯಲ್ಲಿ ನಿನ್ನೆ ಸೂಚಕರು ಉಲ್ಲೇಖಿಸಿದ ಅಂಶದ ಬಗ್ಗೆ ತಾವು ಏನು ತಿಳಿಸಬೇಕೆಂದಿರುವರೋ ಅದನ್ನು ತಿಳಿಸಬಹುದು. ಆದರೆ ನಿನ್ನೆ ವಿಧೇಯಕ ಮಂಡಿಸಿದಾಗ ತಮ್ಮ ಅಭಿಪ್ರಾಯದಲ್ಲಿ ಏನೆಲ್ಲಾ ಹೇಳಿದ್ದಾರೋ ಅದನ್ನು ಮತ್ತೆ ಪುನರುಚ್ಚರಿಸಬೇಕಾದ ಅಗತ್ಯವಿಲ್ಲ. ಅವರು ನಿನ್ನೆ ಹೇಳಿದ್ದನ್ನೇ ಇಂದೂ ಸಹಾ ಪುನಾರುಚ್ಚರಿಸುತ್ತಿದ್ದಾರೆಂಬುದು ನನ್ನ ಭಾವನೆ.

**ಶ್ರೀಯುತ ಮಹಮದ್ ಅಬ್ಬಾಸ್ ಖಾನ್.**– ಸ್ವಾಮಿ, ಕೇವಲ ಪುನರಾವರ್ತನೆ ಮಾಡುತ್ತಿರುವುದಷ್ಟೇ ಅಲ್ಲ, ಆದರೆ "ವಿಧೇಯಕವನ್ನು ತುರ್ತಾಗಿ ಮಂಡಿಸುತ್ತಿದ್ದಾರೆ." 'ಪ್ರಹಾರ' 'ವಿಧೇಯಕಕ್ಕೆ ಸೂಕ್ತ ಪರಿಗಣನೆಯನ್ನು ನೀಡಿಲ್ಲ' ಎಂಬ ಪದಗುಚ್ಛಗಳ ಬಳಕೆ ಸಹಾ ಸೂಕ್ತವಲ್ಲ.

**ಶ್ರೀಯುತ ಬಿ ರಾಮಾನುಜ ಐಯ್ಯಂಗಾರ್.**– ವಿಧೇಯಕವನ್ನು ಪರಿಶೀಲನಾ ಸಮಿತಿಗೆ ಒಪ್ಪಿಸುವುದರ ಬಗ್ಗೆ ಅವರು ತಮ್ಮ ಸಮ್ಮತಿ ಸೂಚಿಸಿದ್ದಾರೆ. ಈಗ ವಿಧೇಯಕವು ಪರಿಶೀಲನಾ ಸಮಿತಿಯಿಂದ ಸದನದ ಅನುಮೋದನೆಗೆ ಬಂದಿರುವಾಗ, ಅದನ್ನು ಸೂಕ್ತ ಸಮಯದಲ್ಲಿ ತೆಗೆದುಕೊಂಡಿಲ್ಲವೆಂದು ಹೇಳುವುದು ಸರಿಯಲ್ಲ.

**ಶ್ರೀಯುತ ಕೆ. ಆರ್. ಸುಬ್ಬಣ್ಣಾಚಾರ್.**– ಈಗಲೂ ಸಹ ಪ್ರತಿಯೊಬ್ಬ ಸದಸ್ಯರೂ ಸೂಚನೆಯನ್ನು ವಿರೋಧಿಸುವ ಹಕ್ಕು ಹೊಂದಿದ್ದಾರೆ. ಆದರೆ ಈಗಾಗಲೇ ಮಂಡಿಸಿದ ವಾದವನ್ನು ಪುನರಾವರ್ತಿಸುವುದು ಸರಿಯಲ್ಲ.

**ಶ್ರೀಯುತ ಡಿ. ವಿ. ಗುಂಡಪ್ಪ:** ಈಗ ಇಲ್ಲಿ ವಿನಿಮಯವಾಗುತ್ತಿರುವ ಅಭಿಪ್ರಾಯಗಳು ಮತ್ತಲ್ಲಿಯೋ ವ್ಯಕ್ತಪಡಿಸಿದಂತಹ ಅಭಿಪ್ರಾಯಗಳ ಪುನರಾವರ್ತನೆಯೇ ಆಗಿವೆ. ಈ ವಿಷಯವನ್ನು ಬೇರೆಡೆ ಚರ್ಚಿಸಿರಲಿಲ್ಲವೇ? ಸದನದ ಅಂಗಳದಲ್ಲಿ ಮಾಡುತ್ತಿರುವ ವಾದ ವಿವಾದಗಳೆಲ್ಲ ಹೊಸತಾದವುಗಳೇ ಅಥವಾ ಮೊಟ್ಟ ಮೊದಲ ಬಾರಿ ವ್ಯಕ್ತವಾಗುವಂಥದ್ದೇ? ಒಟ್ಟಿನಲ್ಲಿ ನೀವು ವಾದ ವಿವಾದ ಮಂಡಿಸಬಹುದು? ಒಂದು ಸದನದಲ್ಲಿ ನಡೆಯುವ ಎಲ್ಲ ಚರ್ಚೆಗಳು ಪುನಃ ಪುನಃ ನೂರಾರು ಬಾರಿ ಪುನರಾವರ್ತಿತವಾದ ಅಭಿಪ್ರಾಯಗಳ ವಿನಿಮಯವಷ್ಟೇ.

**ಅಧ್ಯಕ್ಷರು.**– ನಾವು ಈಗ ಅಷ್ಟೆಲ್ಲ ವಿಚಾರಗಳ ಬಗ್ಗೆ ಚರ್ಚಿಸಬೇಕಿಲ್ಲವೆನಿಸುತ್ತಿದೆ.

**ಶ್ರೀಯುತ ಡಿ. ವಿ. ಗುಂಡಪ್ಪ.**– ಈ ಅಡಚಣೆಗಳು ಉಂಟಾಗದಿದ್ದಲ್ಲಿ ನಾನು ಇಷ್ಟೊತ್ತಿಗಾಗಲೇ ನನ್ನ ಭಾಷಣವನ್ನು ಮುಗಿಸಬೇಕಿತ್ತು ಮತ್ತು ಸದನದ ಯಾವುದೇ ಮೂಲೆಯಲ್ಲಿ ಅಹಿತಕರ ಭಾವನೆ ಮೂಡುತ್ತಿರಲಿಲ್ಲ.

**ಶ್ರೀಯುತ ಬಿ. ಎಸ್. ಪುಟ್ಟಸ್ವಾಮಿ.**– ಆದರೆ ಮಾನ್ಯ ಸದಸ್ಯರು ಒಂದು ಸೂಕ್ತ ಸಮಯವನ್ನು ಆಯ್ಕೆ ಮಾಡಿಕೊಳ್ಳಬೇಕಿತ್ತು. ಅವರು ಒಮ್ಮೆಲೆ ಎದ್ದು ನಿಂತು ವಿವರಣೆ ನೀಡಲು ಅವಕಾಶವಿಲ್ಲ.

**ಶ್ರೀಯುತ ಡಿ. ವಿ. ಗುಂಡಪ್ಪ.**– ಇದೊಂದು ಉತ್ತಮ ಪ್ರತಿಕ್ರಿಯೆಯೋ ಎಂದು ನಾನು ಸಭಾಪತಿಯವರನ್ನು ಕೇಳಲಿಚ್ಛಿಸುತ್ತೇನೆ. ಒಂದು ಸೂಕ್ತ ಸಮಯ ಆಯ್ಕೆ ಮಾಡಿಕೊಳ್ಳುವ ಮುಕ್ತ ಅವಕಾಶ ನನಗಿತ್ತೇ?

**ಅಧ್ಯಕ್ಷರು.**– ದಯವಿಟ್ಟು ಆವೇಶಭರಿತರಾಗಬೇಡಿ. ಇಲ್ಲಿ ಕಾವೇರಿಸಿಕೊಳ್ಳುವ ಅಗತ್ಯವಿಲ್ಲ. ನಾವು ಯಾವ ರೀತಿಯ ಸುಪ್ರಸನ್ನತೆಯಿಂದ ಮತ್ತು ಸ್ನೇಹಯುತ ರೀತಿಯಲ್ಲಿ ಇದನ್ನು ಆರಂಭಿಸಿದೆವೋ ಅದೇ ಭಾವನೆಗಳಿಂದ ಮುಕ್ತಾಯಗೊಳಿಸೋಣ.

**ಶ್ರೀಯುತ ಡಿ. ವಿ. ಗುಂಡಪ್ಪ.**– ನಾನು ಯಾವುದೇ ಭಾವುಕತೆ ಪ್ರದರ್ಶಿಸಿದ್ದರೆ ನಾನು ನಿಮ್ಮ ಕ್ಷಮೆ ಕೋರುತ್ತೇನೆ. ನನಗೆ ಏರು ಧ್ವನಿಯಲ್ಲಿ ಮಾತನಾಡುವ ಒಂದು ಕೆಟ್ಟ ನಡವಳಿಕೆಯಿದ್ದು ಅದು ನಾನು ಉದ್ರೇಕಗೊಳ್ಳುತ್ತಿದ್ದೇನೆಂಬ ಭಾವನೆ ಉಂಟು ಮಾಡುತ್ತದೆ.

**ಅಧ್ಯಕ್ಷರು.**– ಆ ಸದಸ್ಯರು ತಾವು ಹೇಳಬೇಕೆಂದಿದ್ದುದನ್ನೆಲ್ಲ ಹೇಳಿದ್ದಾರೆಂಬುದು ನನ್ನ ಖಚಿತ ಭಾವನೆ. ಅವರು ತಮ್ಮ ವಿಷಯವನ್ನು ತಮಗೆ ಸಾಧ್ಯವಾದಷ್ಟು ಸಮರ್ಥವಾಗಿ ಮುಂದಿಟ್ಟಿದ್ದಾರೆ ಮತ್ತು ಪ್ರಸ್ತಾವಿತ ಕಾನೂನು ಕ್ರಮದ ಸಂಬಂಧದಲ್ಲಿ ಅವರು ಏನು ಹೇಳಬೇಕೆಂದಿರುವರೋ ಅದನ್ನು ಎಲ್ಲ ಸದಸ್ಯರು ಶ್ಲಾಘಿಸಿದ್ದಾರೆಂಬುದು ನನ್ನ ಖಚಿತ ಅನಿಸಿಕೆ.

**ಶ್ರೀಯುತ ಡಿ. ವಿ. ಗುಂಡಪ್ಪ.**– ಆದರೆ ಈ ಸದನವು ನನಗೇಕೆ ಐದು ನಿಮಿಷಗಳ ಕಾಲಾವಕಾಶ ನೀಡುತ್ತಿಲ್ಲ?

**ಅಧ್ಯಕ್ಷರು.**– ಏಕೆಂದರೆ ನೀವು ಈ ಸದನದ ಹೆಚ್ಚು ಸಮಯವನ್ನು ತೆಗೆದುಕೊಳ್ಳುತ್ತೀರೆಂಬುದು ಅವರ ಅನಿಸಿಕೆ.

**ಶ್ರೀಯುತ ಡಿ. ವಿ. ಗುಂಡಪ್ಪ.**– ಇಲ್ಲಿ ವಿಧೇಯಕ ವಿರೋಧಿಸುತ್ತಿರುವವನು ನಾನೊಬ್ಬನೇ.

**ಶ್ರೀ. ಕೆ. ಆರ್. ಸುಬ್ಬಣ್ಣಾಚಾರ್.**– ನಾನು ಕೂಡ ವಿರೋಧಿಸಿದ್ದೆ.

**ಶ್ರೀಯುತ ಬೇಲೂರು ಶ್ರೀನಿವಾಸ ಐಯ್ಯಂಗಾರ್.**– ಮೊದಲ ಸದಸ್ಯರು ಸತ್ಯಾಗ್ರಹ ಎಂದರೇನು ಎಂಬುದರ ಬಗ್ಗೆ ವಿವರಗಳನ್ನು ಕೊಟ್ಟಾಗ ಎಂದರೆ, ಒಂದು ಕಾಗದವನ್ನು ತೆಗೆದುಕೊಂಡು, ಅದರ ಮೇಲೆ ಪ್ರಕರಣ 144 ಎಂದು ಬರೆದು ಮತ್ತು ಆ ತರುವಾಯ ಅದನ್ನು ಚೂರು ಚೂರಾಗಿ ಹರಿದು ಹಾಕಿ ಕಾಲಿನ ಅಡಿಯಲ್ಲಿ ಹೊಸಕಿ ಹಾಕುವಾಗ ನನ್ನ ಸ್ನೇಹಿತರು ಇದ್ದಿದ್ದರೆ........

**ಅಧ್ಯಕ್ಷರು.**– ನೀವು ಮತ್ತೊಂದು ದೊಡ್ಡ ಭಾಷಣ ಮಾಡುತ್ತಿದ್ದೀರಿ.

**ಶ್ರೀಯುತ ಡಿ. ವಿ. ಗುಂಡಪ್ಪ.–** ಸದಸ್ಯರು ತಮ್ಮ ಇಂಥ ನ್ಯಾಯಯುತವಾದ ಅಭಿಪ್ರಾಯವನ್ನು ವ್ಯಕ್ತಪಡಿಸಿದ ಮೇಲೆ ನಾನು ನಿಮ್ಮ ಸಹೃದಯತೆಯ ಪ್ರಯೋಜನವನ್ನು ಹೆಚ್ಚು ಉಪಯೋಗಿಸಿಕೊಳ್ಳಲು ಇಚ್ಛಿಸುವುದಿಲ್ಲ.

**ಶ್ರೀಯುತ ಬೇಲೂರು ಶ್ರೀನಿವಾಸಯ್ಯಂಗಾರ್.–** ಏಕೆಂದರೆ ಅವರಿಗೆ ಏನೂ ವಿಷಯವಿಲ್ಲ.

**ಶ್ರೀಯುತ ಡಿ. ವಿ. ಗುಂಡಪ್ಪ.–** ನನ್ನ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತೇನೆ. ಆದರೆ ಇಲ್ಲಿ ನಡೆದ ವ್ಯವಹರಣೆಗಳ ಬಗೆಗೆ ಹೊರಗಡೆ ನನ್ನದೇ ರೀತಿಯಲ್ಲಿ ವಿಮರ್ಶೆ ಮಾಡುವ ಹಕ್ಕನ್ನು ನಾನು ಕಾದಿರಿಸಿಕೊಳ್ಳುತ್ತೇನೆ. ಆಜನ್ಮ ಹಕ್ಕಿನ ಸಿದ್ಧಾಂತವನ್ನು ನಾನು ಒಪ್ಪುತ್ತೇನೆ.

**ಅಧ್ಯಕ್ಷರು–** ಪೀಠವು ನಿಮ್ಮ ಬಗ್ಗೆ ಹೆಚ್ಚಿನ ಉದಾರತೆ ತೋರಿದೆಯೆಂದು ನನ್ನ ಭಾವನೆ.

**ಶ್ರೀಯುತ ಡಿ. ವಿ. ಗುಂಡಪ್ಪ–** ಅದಕ್ಕೆ ನಾನು ಪಾತ್ರನಾಗಿಲ್ಲವೆಂಬುದಾಗಿದ್ದರೆ ನಾನು ಅದಕ್ಕೆ ವಿಷಾದಿಸುತ್ತೇನೆ. ಆದರೆ ನನಗೆ ಪ್ರೋತ್ಸಾಹ ನೀಡುವುದೇ ಪೀಠದ ಒಂದು ರೂಢಿಗತ ಅಭ್ಯಾಸವಾಗಿದ್ದರೆ ನಾನು ನನ್ನ ಅದೃಷ್ಟಕ್ಕೆ ಅಭಿವಂದನೆ ಸಲ್ಲಿಸುತ್ತೇನೆ. ಏನೇ ಆಗಲಿ ಇದು ನನ್ನ ಮನಸ್ಸನ್ನು ತೀವ್ರವಾಗಿ ತಟ್ಟಿರುವಂಥ ವಿಚಾರ. ನನಗೆ ಈ ಸದನದಲ್ಲಿ ನ್ಯಾಯಯುತ ಅವಕಾಶವನ್ನು ನೀಡಿಲ್ಲ ಹಾಗೂ ಸದನದಲ್ಲಿ ತಕ್ಕ ರೀತಿಯಲ್ಲಿ ನನ್ನನ್ನು ನಡೆಸಿಕೊಳ್ಳಲಿಲ್ಲವೆಂಬ ಭಾವನೆ ನನ್ನಲ್ಲಿ ಉಂಟಾಗಿದೆ. ನನ್ನ ಮನಸ್ಸಿಗೆ ಮೊಟ್ಟಮೊದಲ ಬಾರಿಗೆ ಅಂಥ ಭಾವನೆ ಬಂದಿದೆ. ಹಾಗೆಯೇ ಬಹುಶಃ ಇದು ಕಟ್ಟಕಡೆಯ ಸಭೆಯಾಗುತ್ತದೆ. ಈ ಅಧಿವೇಶನಕ್ಕೆ ನಾನು ಹಾಜರಾಗಬೇಕಾಗಿತ್ತು. ಇಂಥ ಭಾವನೆಯೊಂದಿಗೆ ನಾನು ನಿರ್ಗಮಿಸುತ್ತಿರುವುದಕ್ಕೆ ನನಗೆ ಖೇದವಾಗುತ್ತಿದೆ.

**ಶ್ರೀಯುತ ಸಭಾಧ್ಯಕ್ಷರು:** ನೀವು ಹೆಚ್ಚಿನದನ್ನೇನಾದರೂ ಹೇಳಬೇಕೆಂದಿದ್ದರೆ, ಅದನ್ನು ಮುಂದುವರೆಸಬಹುದು, ನಿಮಗೆ ನ್ಯಾಯಯುತ ಅವಕಾಶ ಸಿಗಲಿಲ್ಲವೆಂಬ ಭಾವನೆಯೊಂದಿಗೆ ನೀವು ನಿರ್ಗಮಿಸುವುದು ನಮಗಿಷ್ಟವಿಲ್ಲ.

**ಶ್ರೀಯುತ ಡಿ. ವಿ. ಗುಂಡಪ್ಪ:** ಸಭಾಧ್ಯಕ್ಷರು ಎಲ್ಲ ಸಮಯದಲ್ಲೂ ನನ್ನ ಮನಸ್ಸಿಗೆ ತೃಪ್ತಿಯಾಗುವಂತೆ ನಡೆದುಕೊಳ್ಳಲಿಲ್ಲವೆಂದು ನಾನು ಹೇಳುವುದಿಲ್ಲ. ಅದು ನನ್ನ ಫಿರ್ಯಾದೂ ಅಲ್ಲ. ಆದರೆ ಮುಖ್ಯವಾಗಿ ಭಾಷಣ ಮಾಡುವಾಗಿನ

ಅಡೆ ತಡೆಯ ಬಗ್ಗೆ ಮತ್ತು ಎತ್ತಲಾದ ಕ್ರಿಯಾಲೋಪಗಳ ಬಗ್ಗೆ ನನ್ನ ಆಕ್ಷೇಪಣೆ ಇದೆ. ಈ ಮೊದಲೆಲ್ಲಾ ನಾನು ಇಂಥದನ್ನು ಕೇಳಿಲ್ಲ. ಅಲ್ಲದೆ ನಾನು ಪದೇ ಪದೇ ಒಂದೇ ವಿಷಯವನ್ನು ಪ್ರಸ್ತಾಪಿಸುವಂಥ ಭಾಷಣಕಾರನೂ ಅಲ್ಲ. ನನ್ನ ಅಭಿಪ್ರಾಯಗಳನ್ನು ನನ್ನದೇ ರೀತಿಯಲ್ಲಿ ಹೇಳಲು ನನಗೆ ಅವಕಾಶ ನೀಡಿದ್ದರೆ, ಈ ವೇಳೆಗೆ ಅದನ್ನು ನಾನು ಹೇಳಿ ಮುಗಿಸುತ್ತಿದ್ದೆ.

**ಶ್ರೀಯುತ ಸಿ. ಹಯವದನರಾವ್:** ಮಾನ್ಯ ಸದಸ್ಯರು ಮುಂದುವರೆಸಿ ತಮ್ಮ ಭಾಷಣವನ್ನು ಮುಗಿಸಬಹುದು.

**ಶ್ರೀಯುತ ಮಹಮದ್ ಅಬ್ಬಾಸ್ ಖಾನ್:** ಮಾನ್ಯ ಸದಸ್ಯರು ನಿನ್ನೆ ಬೆರಳಚ್ಚು ಮಾಡಿದ ಎಷ್ಟು ಪುಟಗಳಷ್ಟು ವಿಷಯವನ್ನು ಓದಿದರೆಂದು ತಿಳಿದುಕೊಳ್ಳಬಹುದೇ?

**ಶ್ರೀಯುತ ಡಿ. ವಿ. ಗುಂಡಪ್ಪ:** ನಿನ್ನೆ ಬೆರಳಚ್ಚು ಮಾಡಿರುವ ಐದು ಪುಟಗಳನ್ನು ಓದಲು ಅವಕಾಶ ನೀಡಲಾಗಿತ್ತು. ನೀವು ಸಿಬ್ಬಂದಿಯನ್ನು ಕೇಳಿ ಅದನ್ನು ದೃಢಪಡಿಸಿಕೊಳ್ಳಬಹುದು.

**ಶ್ರೀಯುತ ಸಭಾಧ್ಯಕ್ಷರು:** ದಯವಿಟ್ಟು ನೀವು ಇನ್ನೂ ಏನನ್ನಾದರೂ ಹೇಳುವುದಿದ್ದರೆ, ಮುಂದುವರೆಸಿ ನಿಮ್ಮ ಭಾಷಣವನ್ನು ಮುಗಿಸುವಿರಾ?

**ಶ್ರೀಯುತ ಡಿ. ವಿ. ಗುಂಡಪ್ಪ:** ಆದರೆ ಇಲ್ಲಿ ನನಗೆ ತಕ್ಕುದಲ್ಲದ ವಿರೋಧ ವ್ಯಕ್ತವಾಗುತ್ತಿದೆ ಎಂದು ನಾನು ಹೇಳಬೇಕಾಗಿದೆ.

**ಶ್ರೀಯುತ ಬೇಲೂರು ಶ್ರೀನಿವಾಸಯ್ಯಂಗಾರ್:** ಅವರು ವಿರೋಧವಿದೆಯೆಂದು ಕಲ್ಪಿಸಿಕೊಳ್ಳುತ್ತಿದ್ದಾರೆ.

**ಶ್ರೀಯುತ ಡಿ. ವಿ. ಗುಂಡಪ್ಪ:** ಹೌದು, ಹಲವಾರು ಸದಸ್ಯರು ಒಟ್ಟಿಗೆ ಮಾತನಾಡುವ ಮತ್ತು ಒಬ್ಬರು ಮತ್ತೊಬ್ಬರನ್ನು ವಿರೋಧಿಸುವ ದೃಶ್ಯಾವಳಿಗೆ ಸದನವು ಸಾಕ್ಷಿಯಾಗಿದೆ ಎಂದು ನನಗನಿಸುತ್ತಿದೆ. ನಾನು ಸದಸ್ಯರ ಮಾತುಗಳನ್ನು ಕೇಳುವ ಅವಕಾಶ ಹೊಂದಿರಲಿಲ್ಲ. ಹಾಗಾಗಿ ನಾನು ಅದು ನನಗೆ ಗೊತ್ತಿಲ್ಲ ಎಂಬುದರಲ್ಲಷ್ಟೇ ತೃಪ್ತಿಪಡಬೇಕು. ಆದರೂ ನಾನು ನನ್ನದೇ ಆದ ರೀತಿಯಲ್ಲಿ ಹೇಳುತ್ತೇನೆ.

**ಶ್ರೀಯುತ ಸಭಾಧ್ಯಕ್ಷರು:** ನಾನು ಒಂದು ಮಾತನ್ನು ಹೇಳಲಿಚ್ಛಿಸುತ್ತೇನೆ. ನೀವು ಈ ಹಂತದಲ್ಲಿ ಮಸೂದೆಯ ಸಾಮಾನ್ಯ ತತ್ವಗಳ ಬಗ್ಗೆ ಚರ್ಚಿಸಲಾಗದು. ನಾವು ಆ ಹಂತವನ್ನು ದಾಟಿದ್ದೇವೆ. ಇದು, ಕೇವಲ ಆಯ್ಕೆ ಸಮಿತಿಯ ವರದಿಯನ್ನು ಮಾತ್ರ ಪರಿಗಣಿಸಬೇಕಾಗಿರುವ ಹಂತವಾಗಿದೆ.

**ಶ್ರೀಯುತ ಡಿ. ವಿ. ಗುಂಡಪ್ಪ:** ನಾನು ಸಾಮಾನ್ಯ ತತ್ವಗಳ ಬಗ್ಗೆ ಏನಾದರೂ ಹೇಳಿದೆನಾ?

**ಶ್ರೀಯುತ ಸಭಾಧ್ಯಕ್ಷರು:** ನೀವು ಹೇಳಲಿಲ್ಲವೇ?

**ಶ್ರೀಯುತ ಡಿ. ವಿ. ಗುಂಡಪ್ಪ:** ಮಾನ್ಯ ಸದಸ್ಯರ ಭಾಷಣದ ಒಂದು ಭಾಗದ ಬಗ್ಗೆ ಮಾತ್ರ ನಾನು ಉಲ್ಲೇಖಿಸುತ್ತಿದ್ದೇನೆ. ಇದನ್ನು ಕೇಳುವ ಅವಕಾಶ ನನಗೆ ಸಿಗಲಿಲ್ಲ. ಬೇರೆಯವರಿಂದ ಕೇಳಿ ತಿಳಿದುಕೊಂಡಿದ್ದೇನೆ.

**ಶ್ರೀಯುತ ಸಭಾಧ್ಯಕ್ಷರು:** ಮೈಸೂರು ವಿಧಾನಪತ್ತಿನ ವ್ಯವಹಾರ ನಿಯಮಗಳ 24ನೇ ಪುಟದ ನಿಯಮಗಳು ಮತ್ತು ಸ್ಥಾಯೀ ಆದೇಶಗಳ ಕಡೆಗೆ ತಮ್ಮ ಗಮನವನ್ನು ಸೆಳೆಯುವುದು ಮಾತ್ರ ನನ್ನ ಉದ್ದೇಶವಾಗಿತ್ತು.

**ಶ್ರೀಯುತ ಡಿ. ವಿ. ಗುಂಡಪ್ಪ:** ತಮ್ಮ ತೀರ್ಪಿಗೆ ನಾನು ಬದ್ಧನಾಗಿರುತ್ತೇನೆ.

**ಶ್ರೀಯುತ ಸಭಾಧ್ಯಕ್ಷರು:** ನೀವು ಭಾಷಣ ಮಾಡದಂತೆ ತಡೆಯುವುದು ನನ್ನ ಉದ್ದೇಶವಲ್ಲ; ಆದರೆ ಸದರಿ ನಿಯಮಗಳನ್ನು ತಮ್ಮ ಗಮನಕ್ಕೆ ತರುವುದಷ್ಟೇ ನನ್ನ ಉದ್ದೇಶ.

**ಶ್ರೀಯುತ ಡಿ. ವಿ. ಗುಂಡಪ್ಪ:** ಒಳ್ಳೆಯದಾಯಿತು ಸ್ವಾಮಿ. ನಾನು ನನ್ನ ಮಾತನ್ನೇ ಕೇಳಿಕೊಂಡು ಬೀಗುವಂಥ ಜಾಯಮಾನದವನಲ್ಲ. ಅಲ್ಲದೆ ಭಾಷಣ ಮಾಡಲು ನಾನೇನೂ ಕಾತುರನಾಗಿಲ್ಲ. ರಾಜ್ಯದಲ್ಲಿ ಜವಾಬ್ದಾರಿಯುತ ಸರ್ಕಾರದ ಉದ್ದೇಶವನ್ನು ಈಡೇರಿಸುವ ಆಸಕ್ತಿ ಹೊಂದಿರುವಂಥವರು ಈ ಮಸೂದೆಗೆ ಸಂಬಂಧಿಸಿದಂತೆ ಇಟ್ಟುಕೊಂಡಿರುವ ಎರಡು ರೀತಿಯ ಆತಂಕಗಳನ್ನು ಸರ್ಕಾರದ ಗಮನಕ್ಕೆ ಹಾಗೂ ಅದರ ಅವಗಾಹನೆಗೆ ತರಬೇಕಾಗಿದೆ. ಮೊದಲನೆಯದೆಂದರೆ ಈ ಮಸೂದೆಯು ಜನರಲ್ಲಿ ಭೀತಿಯನ್ನು ಉಂಟು ಮಾಡುವುದಲ್ಲದೆ, ಅವರು ಚಳುವಳಿಯಲ್ಲಿ ಭಾಗವಹಿಸದಂತೆ ಅಡ್ಡಿಯುಂಟುಮಾಡುತ್ತದೆ. ಪ್ರವೃತ್ತಿಯನ್ನು ಬುಡಮೇಲು ಮಾಡುವಂಥ ಯಾವುದೇ ಭಾಷಣ, ಯಾವುದೇ ಲೇಖನ ಜನರ

ಮನಸ್ಸಿನಲ್ಲಿ ಖಂಡಿತವಾಗಿಯೂ ಕ್ಷೋಭೆಯನ್ನುಂಟುಮಾಡುವಂಥದ್ದು ಎಂದು ಅರ್ಥೈಸಬಹುದು. ಹಾಗೆ ಭಯಭೀತರಾದ ಜನರು ಯಾವುದೇ ಅಗ್ರ ಚಳುವಳಿಯಲ್ಲಿ ಭಾಗವಹಿಸದೆ ಹಿಂಜರಿಯುವ ಸಾಧ್ಯತೆ ಇರುತ್ತದೆ. ಇದು ನನ್ನ ಮೊದಲನೆ ಆತಂಕ. ಇನ್ನು ನನ್ನ ಎರಡನೆಯ ಆತಂಕವೆಂದರೆ ಈ ಮಸೂದೆ ಚುನಾವಣಾ ಪ್ರಚಾರ ಕಾರ್ಯದಲ್ಲಿ ತೊಡಗಿರುವಂಥ ಕಾಂಗ್ರೆಸ್ ಕಾರ್ಯಕರ್ತರಿಗೆ ಅಡ್ಡಿಯುಂಟು ಮಾಡುತ್ತದೆ ಎಂಬುದಾಗಿದೆ. ಅವರು ಚುನಾವಣೆಗೆ ಸ್ಪರ್ಧಿಸಲು ನಿರ್ಧರಿಸಿದರೆ, ಅಗತ್ಯವಾಗಿ ಭಾಷಣಗಳನ್ನು ಮಾಡಬೇಕಾಗುತ್ತದೆ. ಈ ಖಂಡವು ಚುನಾವಣಾ ಪ್ರಚಾರಕ್ಕಾಗಿ ಪ್ರವಾಸಗಳನ್ನು ಕೈಗೊಳ್ಳುವ ಮತ್ತು ಚುನಾವಣಾ ಭಾಷಣಗಳನ್ನು ಮಾಡುವ ಅವರ ಸ್ವಾತಂತ್ರ್ಯವನ್ನು ಮೊಟಕುಗೊಳಿಸುತ್ತದೆಂಬ ಆತಂಕವಿದೆ. ಇವು ನಿರ್ದಿಷ್ಟವಾಗಿ ಈ ಮಸೂದೆಗೆ ಸಂಬಂಧಿಸಿದಂತೆ ಎದುರಿಸಬೇಕಾದ ಎರಡು ರೀತಿಯ ಆತಂಕಗಳಾಗಿವೆ. ಈ ರೀತಿಯ ಆತಂಕಗಳು ಖಂಡಿತವಾಗಿಯೂ ನಿರಾಧಾರವಾದವುಗಳಾಗಿವೆ ಮತ್ತು ಕಾನೂನನ್ನು ಹೆಚ್ಚಿನ ಸಹಾನುಭೂತಿ ಮತ್ತು ವಿಶೇಷ ಔದಾರ್ಯ ಹಾಗೂ ಸಹನೆಯಿಂದ ಪ್ರಶಾಸನಗೊಳಿಸಲಾಗುತ್ತದೆ ಎಂದು ಸರ್ಕಾರ ಹೇಳಬಹುದು. ಪ್ರಾಯಶಃ ಅದೇ ರೀತಿ ಆಗಬಹುದು. ಇದು ಆ ರೀತಿ ಆದ ಸಂದರ್ಭದಲ್ಲಿ ಮತ್ತು ಇಂದಿನ ನನ್ನ ಕೆಟ್ಟ ಭವಿಷ್ಯ ಸುಳ್ಳೆಂದು ರುಜುವಾತಾದರೆ, ಮತ್ತು ನಾನು ಮಿಥ್ಯ ಪ್ರವಾದಿಯೆಂದು ಸಾಬೀತಾದರೆ, ಎಲ್ಲರಿಗಿಂತಲೂ ಹೆಚ್ಚು ನಾನು ಕೃತಜ್ಞನಾಗಿರುತ್ತೇನೆ. ಇದು ನಾನು ಹೇಳಬೇಕೆಂದು ಬಯಸಿದಂಥ ವಿಷಯ. ಸರ್ಕಾರವು, ಈ ಮಸೂದೆಯ ಪ್ರವರ್ತನೆಯನ್ನು ಕೇವಲ ಜೀವ ಆಸ್ತಿ ಮತ್ತು ದೇಹದ ಮೇಲಿನ ಆಕ್ರಮಣ ಇವುಗಳ ವಿರುದ್ಧ ಸಾಬೀತಾದ ಅಪರಾಧದ ವಿಷಯಗಳಿಗೆ ಮಾತ್ರ ನಿರ್ಬಂಧಿಸುವುದಾದರೆ, ಯಾರಿಗೇ ಆಗಲಿ ಅದನ್ನು ವಿರೋಧಿಸಲು ನ್ಯಾಯಯುಕ್ತ ಕಾರಣ ಇರುವುದೆಂದು ನನಗೆ ಅನಿಸುವುದಿಲ್ಲ.

**ಶ್ರೀಯುತ ಸಭಾಧ್ಯಕ್ಷರು:** ಈ ಕ್ರಮಕ್ಕೆ ಸಂಬಂಧಪಡುವಷ್ಟರ ಮಟ್ಟಿಗೆ ಅದು ಸರ್ಕಾರದ ಧೋರಣೆಯಾಗಿದೆ. ಅಂಥ ಭರವಸೆಯನ್ನು ನಾನು ನಿಮಗೆ ನೀಡಬಲ್ಲೆ. ಅದು ನಿಮಗೂ ಸಹ ಸಮಾಧಾನ ತರುವುದೆಂದು ಭಾವಿಸುತ್ತೇನೆ.

**ಶ್ರೀಯುತ ಡಿ. ವಿ. ಗುಂಡಪ್ಪ:** ನನ್ನ ಸ್ನೇಹಿತರಾದ ಶ್ರೀಯುತ ಬೇಲೂರು ಶ್ರೀನಿವಾಸಯ್ಯಂಗಾರ್ ರವರು ತುಂಬಾ ಉತ್ಸುಕರಾಗಿದ್ದಾರೆ.

**ಶ್ರೀಯುತ ಬೇಲೂರು ಶ್ರೀನಿವಾಸಯ್ಯಂಗಾರ್:** ನಾನು ಏನನ್ನೂ ಮಾತನಾಡಲೇ ಇಲ್ಲ.

**ಶ್ರೀಯುತ ಡಿ. ವಿ. ಗುಂಡಪ್ಪ:** ಇಂಥ ಪೂರಕ ಅಭಿಪ್ರಾಯಗಳು, ವಿವರಣೆಗಳು ಹಾಗೂ ವಾದವನ್ನು ಬಲಗೊಳಿಸುವ ಅಭಿಪ್ರಾಯಗಳನ್ನು ಅರ್ಥೈಸಿಕೊಂಡು ನಾನು ಹೇಗೆ ಮುಂದುವರಿಸಬಹುದು?

ನಿಸ್ಸಹಾಯಕವಾದ ನನ್ನ ಬುದ್ಧಿವಂತಿಕೆಯನ್ನಷ್ಟೇ ನಾನು ಬಳಸಿ ಕಾರ್ಯನಿರ್ವಹಿಸಬೇಕಾಗುತ್ತದೆ. ಇದಷ್ಟೇ ನನ್ನ ಪ್ರಾರ್ಥನೆ.

**ಶ್ರೀಯುತ ಸಭಾಧ್ಯಕ್ಷರು:** ನೀವು ಅವರ ಬಗ್ಗೆ ಗಮನ ಕೊಡಬೇಕಾಗಿಲ್ಲ.

**ಶ್ರೀಯುತ ಡಿ. ವಿ. ಗುಂಡಪ್ಪ:** ಈಗ ನನಗೆ ದೊರೆತ ಈ ಆಶ್ವಾಸನೆ ಸಾರ್ವಜನಿಕರಿಗೆ ನಿರ್ದಿಷ್ಟ ಪ್ರಯೋಜನವನ್ನುಂಟು ಮಾಡಿದೆ ಎಂದು ನಾನು ಭಾವಿಸುತ್ತೇನೆ.

**ಶ್ರೀಯುತ ಸಭಾಧ್ಯಕ್ಷರು:** ನೀವು ನಿನ್ನೆ ಇಲ್ಲಿ ಹಾಜರಿದ್ದಿದ್ದರೆ, ಆ ಆಶ್ವಾಸನೆಯನ್ನು ನೀಡಿದ ಪರಿಷತ್ತಿನ ಪ್ರಥಮ ಸದಸ್ಯರ ಭಾಷಣವನ್ನು ಕೇಳುತ್ತಿದ್ದಿರಿ. ಅವರು ಹೇಳಿದ್ದನ್ನು ನಾನು ಪುನರುಚ್ಚರಿಸಿದ್ದೇನೆ ಅಷ್ಟೇ.

**ಶ್ರೀಯುತ ಡಿ. ವಿ. ಗುಂಡಪ್ಪ:** ಸ್ವಾಮಿ, ತಮ್ಮ ಈ ಆಶ್ವಾಸನೆ ನಿಸ್ಸಂಶಯವಾಗಿಯೂ ಸ್ಥಿತಿಯನ್ನು ಉತ್ತಮಪಡಿಸುವ ನಿಟ್ಟಿನಲ್ಲಿ ಮಹತ್ವದ ಹೆಜ್ಜೆಯಾಗುತ್ತದೆ. ಸಾಮಾನ್ಯವಾಗಿ ಹೇಳುವುದಾದರೆ, ಇಂಥ ಶಾಸನವು ಕ್ಷೋಭೆಯನ್ನು ಉಂಟು ಮಾಡುತ್ತದೆ ಮತ್ತು ಅದರ ಪರಿಣಾಮಗಳು ಸಾಮಾನ್ಯವಾಗಿ ಕ್ಷೋಭೆಯ ಸರಮಾಲೆಗಳಾಗಿರುತ್ತವೆ. ಆದ್ದರಿಂದ, ನಾನು ಮಾಡಿಕೊಳ್ಳುವ ಮನವಿ ಏನೆಂದರೆ ಸರ್ಕಾರ ಸ್ವಲ್ಪ ದಿನ ಈ ಮಸೂದೆಗೆ ಸಂಬಂಧಿಸಿದಂತೆ ಸುಮ್ಮನಿದ್ದು ಬಿಡಬಹುದು. ಈ ಕ್ರಮವನ್ನು ಬೆಂಬಲಿಸಿರುವವರ ಪೈಕಿ ಪ್ರತಿಯೊಬ್ಬರೂ ಇದು ಸುಸ್ಥಾಪಿತ ನಾಗರಿಕ ಸ್ವಾತಂತ್ರ್ಯದ ಮೇಲೆ ಅತಿಕ್ರಮಣವನ್ನು ಮಾಡುತ್ತದೆಂಬುದನ್ನು ಒಂದಲ್ಲ ಒಂದು ರೀತಿಯಲ್ಲಿ ಒಪ್ಪಿಕೊಂಡಿದ್ದಾರೆ. ಅದರ ಬಗ್ಗೆ ಯಾವುದೇ ಸಂದೇಹವೂ ಇಲ್ಲ. ಸರ್ಕಾರವು ಆ ಮಸೂದೆ ಅತ್ಯಗತ್ಯವೆಂದು ಹೇಳುತ್ತದೆ. ಆದರೆ ಅದರ ಅಗತ್ಯ ಇಲ್ಲವೆಂದು ನಾನು ಪ್ರಾಮಾಣಿಕವಾಗಿ ಹೇಳುತ್ತೇನೆ. ಸರ್ಕಾರವು, ಈ ಕಾಂಗ್ರೆಸ್ಸನ್ನು ಗಮನಿಸುವಂಥ ಮತ್ತು ಕಾಂಗ್ರೆಸ್ ಬಗ್ಗೆ ಸರಿಯಾದ ನಿರ್ಣಯ ಕೈಗೊಳ್ಳುವಂಥ ಕಾಲ ಬೇಗ ಅಥವಾ ತಡವಾಗಿಯಾದರೂ ಬರಬೇಕಾಗಿದೆ. ಏನೇ ಆದರೂ ಕಾಂಗ್ರೆಸ್ ಕಾರ್ಯಕರ್ತರು ನಮ್ಮದೇ ರಾಷ್ಟ್ರದವರು ಎಂಬುದನ್ನು ನೆನಪಿನಲ್ಲಿಡಬೇಕು.

**ಶ್ರೀಯುತ ಸಭಾಧ್ಯಕ್ಷರು:** ಇಲ್ಲಿ ಕಾಂಗ್ರೆಸ್ ಬಗ್ಗೆ ಏನನ್ನೇ ಆಗಲಿ ಹೇಳುವುದು ಅಗತ್ಯವೆಂದು ನನಗನ್ನಿಸುವುದಿಲ್ಲ. ಕಾಂಗ್ರೆಸ್‌ಗೆ ವಿರುದ್ಧವಾಗಿ ಈ ಮಸೂದೆಯನ್ನು ನಿರ್ದೇಶಿಸಿಲ್ಲ. ಇದನ್ನು ಕೇವಲ ರಾಷ್ಟ್ರದ್ರೋಹ ಮತ್ತು ಆಡಳಿತವನ್ನು ಬುಡಮೇಲು ಮಾಡುವ ಚಟುವಟಿಕೆಗಳ ವಿರುದ್ಧ ಕ್ರಮಕೈಗೊಳ್ಳುವಾಗ ಮಾತ್ರ ಉಪಯೋಗಿಸಬೇಕಾಗಿದೆ ಅಷ್ಟೇ. ಕಾಂಗ್ರೆಸ್ ಅಥವಾ ಕಾಂಗ್ರೇಸೇತರ ಪಕ್ಷ ಅಥವಾ ಲೀಗ್ ಅಥವಾ ಮತ್ತಾವುದರ ಬಗ್ಗೆಯೂ ನಾವು ತಲೆಕೆಡಿಸಿಕೊಳ್ಳಬೇಕಾದ ಅಗತ್ಯವಿಲ್ಲ. ಈ ಮಸೂದೆಯ ವಿಷಯದ ಬಗ್ಗೆ ನಡೆಸುವ ನಮ್ಮ ಎಲ್ಲ ಚರ್ಚೆಗಳಲ್ಲಿ ಅವುಗಳನ್ನು ಉಲ್ಲೇಖಿಸುವ ಅಗತ್ಯವಿದೆಯೆಂದು ನಾನು ಭಾವಿಸುವುದಿಲ್ಲ.

**ಶ್ರೀಯುತ ಡಿ. ವಿ. ಗುಂಡಪ್ಪ :** ಸರ್ಕಾರವು, ಇಂಥ ಒಂದು ತೀಕ್ಷ್ಣ ಮತ್ತು ಭಯಂಕರವಾದ ಮಸೂದೆಯನ್ನು ಹೊರತರುತ್ತಿರುವ ಸಂದರ್ಭದಲ್ಲಿ ಸಾರ್ವಜನಿಕರಿಗೆ ಅದರ ನಿರಪಾಯವನ್ನು ಕುರಿತು ಆಶ್ವಾಸನೆಯನ್ನು ನೀಡುತ್ತಿರುವುದರ ಮೂಲಕ ಸರ್ಕಾರವು, ಸ್ವತಃ ಅತ್ಯಧಿಕ ಮತ್ತು ವ್ಯಾಪಕ ಹೊಣೆಗಾರಿಕೆಯನ್ನು ತನ್ನ ಮೇಲೆ ಹೇರಿಕೊಳ್ಳುತ್ತಿದೆ. ಇದೇ ರೀತಿಯ ಔದಾರ್ಯ ಮನೋಭಾವವನ್ನು ಶಾಸನ ಜಾರಿಯಾದ ನಂತರದ ವರ್ಷಗಳಲ್ಲೂ ಸರ್ಕಾರ ತೋರುತ್ತದೆ ಎಂದು ನಾನು ಆಶಿಸುತ್ತೇನೆ. ಆದರೂ, ಈಗಾಗಲೇ ಹೇಳಿರುವಂತೆ ಈ ಶಾಸನವನ್ನು ಅನುಮೋದಿಸುವ ಸಲುವಾಗಿ ಸುಸ್ಪಷ್ಟವಾಗಿ ಮತ್ತು ತಪ್ಪಿಲ್ಲದಂತೆ ವಿಷಯವನ್ನು ಸಿದ್ಧಪಡಿಸುವವರೆಗೆ ಅಂಥ ಎಲ್ಲ ಶಾಸನವನ್ನು ನಾನು ವಿರೋಧಿಸುತ್ತೇನೆ. ಅಂಥ ಶಾಸನದ ಅಗತ್ಯವಿದೆ ಎಂದು ನನಗೆ ಮನವರಿಕೆಯಾಗಿಲ್ಲ. ಹಾಗಾಗಿ, ಈ ಮಸೂದೆಗೆ ನನ್ನ ವಿರೋಧ ಇದ್ದೇ ಇದೆ.



## ವೃತ್ತ ಪತ್ರಿಕೆಗಳು ಹಾಗೂ ಸಾರ್ವಜನಿಕ ಸುದ್ದಿಗಳನ್ನೊಳಗೊಂಡಿರುವ ಇತರ ಮುದ್ರಿತ ವಿಷಯಗಳ ಪ್ರಕಟಣೆಯ ಉತ್ತಮ ನಿಯಂತ್ರಣಕ್ಕೆ ಅವಕಾಶ ಕಲ್ಪಿಸುವ ಮಸೂದೆ ಕುರಿತ ಚರ್ಚೆ

**ಶ್ರೀಯುತ ಡಿ. ವಿ. ಗುಂಡಪ್ಪ** : ಸ್ವಾಮಿ, ದಿವಾನ್ ಬಹದ್ದೂರ್ ಕೆ ಆರ್ ಶ್ರೀನಿವಾಸಯ್ಯಂಗಾರರು ಯಾವ ರೀತಿ ನನಗೆ ಹೆದರಿಕೆ ಉಂಟುಮಾಡುವಂತೆ ನಮ್ಮ ಮುಂದಿರುವ ಮಸೂದೆಯ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ಮಂಡಿಸಿದ್ದಾರೋ ಅದರಿಂದ ನನಗೆ ಹೆದರಿಕೆ ಉಂಟಾಗಿಲ್ಲ. ಹೆದರಿಕೆ ಏನೆಂದರೆ ಈ ಸದನವು ಸದರಿ ಮಸೂದೆಯನ್ನು ಅಂಗೀಕರಿಸದಿದ್ದರೆ, ಪ್ರಸಕ್ತ ಅಧಿನಿಯಮವೇ ಮುಂದುವರೆಯುತ್ತದೆ. ಅದರ ತತ್ವಗಳ ಆಧಾರದ ಮೇಲೆ ಮಾತ್ರ ನಾನು ಈ ಮಸೂದೆಯನ್ನು ವಿರೋಧಿಸುತ್ತೇನೆ. ಸ್ವಾಮಿ, ಇಲ್ಲಿ ನಾನು ಒಂದು ವಿಷಯವನ್ನು ನೆನಪಿಸಲು ಇಚ್ಛಿಸುತ್ತೇನೆ. ಮಾರ್ಚ್ 1928ರಲ್ಲಿ ಈ ಸದನದ ಐವರು ಸದಸ್ಯರು ಎಂದರೆ ಖಾನ್ ಬಹದ್ದೂರ್ ಮೊಹಮದ್ ಅಬ್ಬಾಸ್ ಖಾನ್, ಶ್ರೀಯುತ ಡಿ. ಎಸ್. ಮಲ್ಲಪ್ಪ, ಶ್ರೀಯುತ ಡಿ. ಹೆಚ್, ಚಂದ್ರಶೇಖರಯ್ಯ, ಶ್ರೀಯುತ ಟಿ ಶ್ರೀನಿವಾಸಾಚಾರ್ ಹಾಗೂ ನಾನು ಒಟ್ಟಿಗೆ ಸೇರಿ, 1908ರ ಪತ್ರಿಕಾ ಅಧಿನಿಯಮವನ್ನು ನಿರಸನಗೊಳಿಸುವಂತೆ ಕೋರಿ ಠರಾವನ್ನು ಮಂಡಿಸಿದ್ದೆವು. ಆ ಮನವಿಗೆ ವಿರುದ್ಧವಾಗಿ ಮಾಡಿದ ಭಾಷಣಗಳಲ್ಲಿ ಬಹುಶಃ ಅತ್ಯಂತ ತೀಕ್ಷ್ಣವಾದ ಒಂದು ಭಾಷಣವನ್ನು ಈಗ ಪ್ರಸಕ್ತ ಮಸೂದೆಯ ಹೊಣೆಯನ್ನು ಹೊತ್ತಿರುವ ಗೌರವಾನ್ವಿತರಾದ ವಿಧಾನ ಪರಿಷತ್ತಿನ ಮೊದಲ ಸದಸ್ಯರು ಮಾಡಿದ್ದರು. ಈ ಹತ್ತು ವರ್ಷಗಳ ಅವಧಿಯಲ್ಲಿ ಮೈಸೂರು ಮತ್ತು ಇತರ ಎಲ್ಲ ಕಡೆಗಳಲ್ಲಿ ಅನೇಕ ಬದಲಾವಣೆಗಳುಂಟಾಗಿವೆ. ಶ್ರೀಯುತ ಮಹಮದ್ ಅಬ್ಬಾಸ್‌ಖಾನ್‌ರವರು ಸಹ ಬದಲಾಗಿದ್ದಾರೆ. ಪ್ರಜಾಪ್ರತಿನಿಧಿ ಸಭೆಯೂ ಕೂಡ ತನ್ನ ಅಭಿಪ್ರಾಯಗಳನ್ನು ಬದಲಾಯಿಸಿಕೊಂಡಿದೆ. ಆದರೆ ಪ್ರಾಜ್ಞರಾದ ಪ್ರಥಮ ಸದಸ್ಯರು ಮತ್ತು ನಾನು ಬದಲಾಗಿಲ್ಲವೆಂಬುದು ನನ್ನ ಭಾವನೆ. ಹಾಲಿ ಇರುವ ಅಧಿನಿಯಮ, ಎಂದರೆ 1908ರ ಅಧಿನಿಯಮವು, ತನ್ನ ಪ್ರಥಮ ಅಗತ್ಯತೆಯಲ್ಲಿ ಒಳಗೊಂಡ ಅಡೆತಡೆಯಿಂದಾಗಿ ಎಂದರೆ, ಒಂದು ವೃತ್ತಪತ್ರಿಕೆಯನ್ನು ಪ್ರಕಟಿಸಲು ಇಚ್ಛಿಸುವಂಥ ಪ್ರತಿಯೊಬ್ಬ ವ್ಯಕ್ತಿಯು ಮೊಟ್ಟ ಮೊದಲು ಸರ್ಕಾರದಿಂದ ಪರವಾನಗಿಯನ್ನು ಪಡೆಯಬೇಕೆಂಬ ನಿಯಮದ ಕಾರಣದಿಂದಾಗಿ ಆಕ್ಷೇಪಣೀಯವಾಗಿದ್ದು, ವಿಶ್ವಾಸಾರ್ಹತೆಯನ್ನು ಹೊಂದಿಲ್ಲವೆಂದು ನಾನು ಭಾವಿಸಿದ್ದೇನೆ. ಸ್ವಾಮಿ, ಆ ದಿನದ ನನ್ನ ಅಭಿಪ್ರಾಯಗಳಲ್ಲಿ ಆ ಅಧಿನಿಯಮಕ್ಕೆ ಇರುವ ನನ್ನ ಆಕ್ಷೇಪಣೆಗಳನ್ನು ಈ ಮುಂದಿನಂತೆ ಸಂಕ್ಷಿಪ್ತವಾಗಿ ನೀಡಿದ್ದೇನೆ. ಇದನ್ನು ನಾನು ಮೂರು ಕಾರಣಗಳ ಆಧಾರಗಳ ಮೇಲೆ ವಿರೋಧಿಸಿದ್ದೇನೆ.

ಮೊದಲನೆಯದಾಗಿ, ಒಂದು ವೃತ್ತಪತ್ರಿಕೆಯನ್ನು ಪ್ರಕಟಿಸಲು ಇಚ್ಛಿಸುವಂಥ ಯಾರೇ ಪತ್ರಕರ್ತನು ಪ್ರಕಟಿಸುವ ಮೊದಲೇ ಪೂರ್ವ ಪರೀಕ್ಷೆಗೆ ಒಳಗಾಗಬಾರದು. ಕಾಯಿದೆಯಲ್ಲೇ ಯಾವುದೇ ಸಂದೇಹ ಬರುವುದಕ್ಕೆ ಅವಕಾಶವಿರಬಾರದು. ಪತ್ರಿಕೆಯನ್ನು ಪ್ರಕಟಿಸಲು ಇಚ್ಛಿಸುವಂಥ ಯಾರೇ ಪತ್ರಕರ್ತನು, ಪತ್ರಿಕಾ ಅಧಿನಿಯಮದ ಅಡಿಯಲ್ಲಿ ಪರವಾನಗಿಯನ್ನು ಪಡೆಯುವ ಅಗತ್ಯವಿರಬಾರದು. ಇದು ಮೊದಲ ಆಕ್ಷೇಪಣೆ. ಎರಡನೆಯ ಆಕ್ಷೇಪಣೆಯೆಂದರೆ, ಅಪರಾಧಿಗಳ ಶಿಕ್ಷೆಯನ್ನು ಪರಿಭಾಷಿಸುವುದು. ಮೂರನೆಯದಾಗಿ ನಾನು ಹೇಳಿದ್ದು: ಅಪರಾಧಿಯನ್ನು ನ್ಯಾಯಿಕ ವಿಚಾರಣೆಗೆ ಒಳಪಡಿಸಬೇಕು. ಭಾವಿ ಸಂಪಾದಕರ ವಿರುದ್ಧವಾಗಿ ಯಾವುದೇ ಪೂರ್ವಭಾವನೆಯನ್ನು ಇಟ್ಟುಕೊಳ್ಳಬಾರದು. ಒಂದು ಅಪರಾಧದ ಸಂದರ್ಭದಲ್ಲಿ ಒಬ್ಬನೊಂದಿಗೆ ವ್ಯವಹರಿಸಬೇಕಾದರೆ, ಯಾವ ಅಪರಾಧಕ್ಕಾಗಿ ಆತನೊಂದಿಗೆ ವ್ಯವಹರಿಸಬೇಕು ಎಂಬುದನ್ನು ಸ್ಪಷ್ಟವಾಗಿ ಪರಿಭಾಷಿಸಬೇಕು ಮತ್ತು ನ್ಯಾಯಿಕ ಪ್ರಕ್ರಿಯೆಗಳ ಮೂಲಕ ವ್ಯವಹರಿಸಬೇಕು. ನಾನು ಈ ಮೂರು ಷರತ್ತುಗಳನ್ನು ವಿಧಿಸಿದ್ದೆ. ಈ ಮೂರೂ ಷರತ್ತುಗಳ ದೃಷ್ಟಿಯಿಂದ ಪ್ರಸಕ್ತ ಮಸೂದೆ ವಿಫಲವಾಗುತ್ತಿದೆ. ನಾವು, ನಮ್ಮ ಹಾದಿಯಿಂದ ಒಂದು ರೀತಿಯಲ್ಲಿ ಪಾಪಾಸು ಕಳ್ಳಿಯನ್ನು ತೆಗೆದುಹಾಕಲು ಉದ್ದೇಶಿಸಿದ್ದೆವು. ಹಾಗೆ ಮಾಡುವ ನೆಪದಲ್ಲಿ, ನೀವು ಅಲ್ಲಿ ಒಂದು ಮುಳ್ಳುಹಂದಿಯನ್ನು ಇರಿಸಿದ್ದೀರಿ. ಮುಳ್ಳುಹಂದಿ ಪಾಪಾಸುಕಳ್ಳಿಗಿಂತ ಉತ್ತಮವೇನಲ್ಲ; ನಾನು ತಿಳಿಸಿದ ಈ ಮೂರು ಪ್ರಧಾನ ತತ್ವಗಳು ಪ್ರಸಕ್ತ ಮಸೂದೆಯಲ್ಲಿ ಪ್ರತ್ಯೇಕವಾಗಿ ಉಳಿದಿವೆ ಎಂಬುದನ್ನು ಹೇಳಬಯಸುತ್ತೇನೆ. ಸ್ವಾಮಿ, ನಾನು ಪ್ರಸಕ್ತ ಮಸೂದೆಯನ್ನು 'ಮಾಲುಗಣ್ಣಿನ ವಕ್ರ ಸೃಷ್ಟಿ' ಎಂದು ಹೇಳುತ್ತೇನೆ. ಇದರ ರೀತಿ ನೀತಿಗಳು ನೇರವಾಗಿಲ್ಲ. ಇದು ನೇರವಾದ ಪ್ರಾಮಾಣಿಕ ಕಾಯಿದೆಯಲ್ಲ. 1908ರ ಹಳೆಯ ಕಾಯಿದೆ ಕನಿಷ್ಠ ಪಕ್ಷ ಪ್ರಾಮಾಣಿಕವಾಗಿದೆ ಎಂಬ ಅರ್ಹತೆಯನ್ನು ಹೊಂದಿದೆ. ಅದು ಸಂಪಾದಕನ ಮೇಲೆ ಒಂದೇ ಸಾರಿ ಮತ್ತು ನೇರವಾಗಿ ಆಕ್ರಮಣ ಮಾಡುವ ಉದ್ದೇಶ ಹೊಂದಿತ್ತು. ಆದರೆ ಪ್ರಸಕ್ತ ಮಸೂದೆಯು ಸಂಪಾದಕನ ಬಗ್ಗೆ ಎಲ್ಲಿಯೂ ಪ್ರಸ್ತಾಪಿಸುವುದಿಲ್ಲ. ಇಲ್ಲಿ ಸಂಪಾದಕ ಸುರಕ್ಷಿತವಾಗಿದ್ದಾನೆ, ಕಾನೂನುಬದ್ಧವಾಗಿ ಮತ್ತು ನೈತಿಕವಾಗಿ, ವೃತ್ತಪತ್ರಿಕೆಗೆ ಸಂಪಾದಕನೇ ಹೊಣೆಗಾರ. ಪ್ರಸಕ್ತ ಮಸೂದೆಯು ಅವನನ್ನು ಸಂಪೂರ್ಣವಾಗಿ ಕಡೆಗಣಿಸಿದೆ. ಬ್ರಿಟಿಷ್ ಇಂಡಿಯಾದ ಪ್ರಜೆಗಳು ಸಂಪಾದಕನನ್ನು ಹೊಣೆಗಾರನನ್ನಾಗಿಸಲು ಬಯಸಿದರು. ಆದರೆ ಸಂಪಾದಕನನ್ನು ಹೊಣೆಗಾರನನ್ನಾಗಿಸುವುದು ಕಷ್ಟ ಎಂಬ ಸರಳ ಕಾರಣಕ್ಕೆ ಪತ್ರಿಕಾಲಯ ಮತ್ತು

ಪ್ರಕಾಶಕನನ್ನು ಹೊಣೆಗಾರರನ್ನಾಗಿಸಿದರು. ಮೈಸೂರಿನಲ್ಲಿ ಈ ಕಾನೂನನ್ನು ಮೊದಲು ಜಾರಿಗೊಳಿಸಿದ್ದುದರಿಂದ ನಾವು ಸಂಪಾದಕನನ್ನು ಹೊಣೆಗಾರನನ್ನಾಗಿಸಿದ್ದೆವು ಮತ್ತು ಸಂಪಾದಕನು ಪತ್ರಿಕೆಯನ್ನು ಪ್ರಾರಂಭಿಸುವುದಕ್ಕೆ ಮೊದಲು ಪರವಾನಗಿಯನ್ನು ಪಡೆಯಬೇಕೆಂದು ಅಗತ್ಯ ಪಡಿಸಿದ್ದೆವು. ಪ್ರಸಕ್ತ ಮಸೂದೆಯು ಸಂಪಾದಕನನ್ನು ಸಂಪೂರ್ಣವಾಗಿ ಕಡೆಗಣಿಸಿದೆ. ಅದರಲ್ಲಿ ಸಂಪಾದಕನ ಬಗ್ಗೆ ಎಲ್ಲಿಯೂ ಪ್ರಸ್ತಾಪಿಸಿಲ್ಲ. ಒಂದು ಪತ್ರಿಕೆಯನ್ನು ನಡೆಸಲು ಪ್ರಧಾನವಾಗಿ ನಾಲ್ಕು ವ್ಯಕ್ತಿಗಳು ಹೊಣೆಗಾರರಾಗಿರುತ್ತಾರೆಂದು ನಾವು ಗುರುತಿಸಿದ್ದೇವೆ. ಮೊದಲನೆಯ ವ್ಯಕ್ತಿ, ಪತ್ರಿಕೆಗೆ ಹಣಕಾಸು ನೆರವು ಒದಗಿಸುವ ಮಾಲೀಕ; ಎರಡನೆ ವ್ಯಕ್ತಿ, ಒಳ ವಿಷಯಗಳಿಗೆ ಹೊಣೆಗಾರನಾದ ಸಂಪಾದಕ; ಮೂರನೆಯ ವ್ಯಕ್ತಿ ಮುದ್ರಕ; ನಾಲ್ಕನೆಯ ವ್ಯಕ್ತಿ ಪ್ರಕಾಶಕ. ಈಗ ಈ ಕಾಯಿದೆಯಲ್ಲಿ ನಾವು ಏನು ಮಾಡುತ್ತಾ ಇದ್ದೇವೆ? ನಾವು ಮಾಲೀಕನನ್ನು ಕಡೆಗಣಿಸಿದ್ದೇವೆ, ಅದು ಮುಖ್ಯವಲ್ಲ. ಆದರೆ ನಾವು ಸಂಪಾದಕನನ್ನೇ ಕಡೆಗಣಿಸಿದ್ದೇವೆ. ಇದು ಒಂದು ಮುಖ್ಯ ವಿಷಯ. ನಾವು ಮುದ್ರಕ ಮತ್ತು ಪ್ರಕಾಶಕನನ್ನು ಹೊಣೆಗಾರರನ್ನಾಗಿಸಿದ್ದೇವೆ. ಇನ್ನು ಮುಂದೆ ಈ ಕಾಯಿದೆಯಲ್ಲಿ ಅವಲೋಕಿಸಲಾದಂತೆ, ಪತ್ರಕರ್ತ, ಪ್ರಾಮಾಣಿಕ ಸಂಪಾದಕನ ಸ್ಥಿತಿಯೇನೆಂದರೆ ಒಂದು ಕಡೆಯಲ್ಲಿ ಮುದ್ರಕ ಮತ್ತು ಇನ್ನೊಂದು ಕಡೆಯಲ್ಲಿ ಪ್ರಕಾಶಕ ಇವರಿಬ್ಬರ ನಡುವೆ ಒಬ್ಬ ಸಂಭಾವಿತ ಸಿಲುಕಿಕೊಂಡಂತಾಗುತ್ತದೆ. ಬಲಗಡೆಯಿಂದ ಒಬ್ಬ ಮತ್ತು ಎಡಗಡೆಯಿಂದ ಒಬ್ಬ ಇಬ್ಬರೂ ಸೇರಿ ಅವನಿಗೆ ತಿವಿಯುತ್ತಾರೆ. ಪ್ರತಿಯೊಬ್ಬನೂ ಸಂಪಾದಕನ ಕೈಯನ್ನು ಹಿಡಿದು ಹೀಗೆ ಹೇಳುತ್ತಿರುತ್ತಾರೆ "ಇಲ್ಲಿ ನೋಡು, ನೀನು ಇದನ್ನು ಬರೆಯಬಾರದು, ನಾನು ಇದನ್ನು ಪ್ರಕಟಿಸುವುದಿಲ್ಲ, ನಾನು ಇದನ್ನು ಪ್ರಕಟಿಸಿದರೆ, ನಾನು ಅದಕ್ಕೆ ಮುಂದೆ ಬೆಲೆ ತೆರಬೇಕಾಗುತ್ತದೆ. ನಾನು ದಂಡಾಧಿಕಾರಿಯ (ಮ್ಯಾಜಿಸ್ಟ್ರೇಟ್) ಮುಂದೆ ಹಾಜರಾಗಬೇಕಾಗುತ್ತದೆ." ಬಲಗಡೆಯಲ್ಲಿ ಮುದ್ರಕ ಮತ್ತು ಎಡಭಾಗದಲ್ಲಿ ಪ್ರಕಾಶಕ ಇದ್ದರೆ, ಸಂಪಾದಕನ ಸ್ಥಿತಿಯಂತೂ ಚಿಂತಾಜನಕ. ಸಂಪಾದಕನನ್ನು ಕಡೆಗಣಿಸುವ ಮತ್ತು ಮುದ್ರಕ ಮತ್ತು ಪ್ರಕಾಶಕರನ್ನು ಹೊಣೆಗಾರರನ್ನಾಗಿಸುವ ಈ ಮಸೂದೆ ಅಗತ್ಯವಿದೆಯೇ ಎಂಬುದು ನನ್ನ ಪ್ರಶ್ನೆ. ಈ ರೀತಿಯ ವಾದವನ್ನು ನಾನು ಇನ್ನು ಮುಂದುವರೆಸುವುದಿಲ್ಲ ಸ್ವಾಮಿ.

ಇದು ಸರ್ಕಾರ ಮತ್ತು ಸಾರ್ವಜನಿಕರಿಬ್ಬರಿಗೂ ಸರ್ವಸಾಮಾನ್ಯ ಕಾರಣವಾಗಿದೆಯೆಂಬುದಾಗಿ ನಾನು ಗುರುತಿಸಿದ್ದೇನೆ. ಅಂದರೆ, ಮೊದಲನೆಯದಾಗಿ

ವೃತ್ತ ಪತ್ರಿಕೆಗಳು ರಾಜ್ಯದ ಸೇವಾ ಸಾಧನಗಳಾಗಿವೆ ಮತ್ತು ಮಹತ್ವದ ಮೌಲ್ಯವನ್ನು ಹೊಂದಿದ್ದು ಸಾರ್ವಜನಿಕರಿಗೆ ಉಪಯುಕ್ತವಾಗಿವೆ. ಅವು, ತಮ್ಮ ಪ್ರಕಾರ್ಯಗಳನ್ನು ನಿರ್ವಹಿಸುವ ನಿಟ್ಟಿನಲ್ಲಿ ಹೆಚ್ಚಿನ ಸ್ವಾತಂತ್ರ್ಯ ಪಡೆಯಲು ಅರ್ಹವಾಗಿವೆ. ಸರ್ಕಾರವು ಇದನ್ನು ಗಮನಿಸಿದೆ ಮತ್ತು ಸಾರ್ವಜನಿಕರು ಇದಕ್ಕಿಂತ ಬೇರೇನನ್ನೂ ಹೆಚ್ಚು ಒತ್ತಾಯಪಡಿಸುವುದಿಲ್ಲ. ಎರಡನೆಯದಾಗಿ, ವೃತ್ತ ಪತ್ರಿಕೆಗಳ ಅತಿರೇಕಗಳನ್ನು ತಡೆಯಲು ನಿರ್ದಿಷ್ಟ ಪ್ರಮಾಣದ ಕಾನೂನು, ಕಾನೂನು ಪ್ರಕ್ರಿಯೆಗಳು ಇರಬೇಕೆಂಬುದು ಸರ್ಕಾರ ಮತ್ತು ಸಾರ್ವಜನಿಕರ ನಡುವೆ ಸಮಾನವಾಗಿರುವ ಸಾಮಾನ್ಯ ಕಾರಣವಾಗಿದೆ. ವೈಯಕ್ತಿಕವಾಗಿ ಹೇಳುವುದಾದರೆ, ಯಾವುದೇ ಗುರುತರವಾದ ಅಥವಾ ಹೇಯವಾದ ಅತಿರೇಕದ ಆಪಾದನೆಯನ್ನು ಹೊತ್ತಿರುವಂಥ ಯಾವುದೇ ವೃತ್ತ ಪತ್ರಿಕೆಗಳಿವೆಯೆಂದು ನನಗನಿಸುತ್ತಿಲ್ಲ. ಆದರೆ, ಕಾನೂನು ವಾಸ್ತವಿಕ ಸ್ಥಿತಿಗತಿಗಳಿಗೆ ಮಾತ್ರವಲ್ಲದೆ ದುರದೃಷ್ಟಕರ ಸಂಭಾವ್ಯತೆಗಳಿಗೂ ಸಹ ಅವಕಾಶ ಕಲ್ಪಿಸಬೇಕಾಗಿದೆ. ಆದ್ದರಿಂದ ವೃತ್ತಪತ್ರಿಕೆಗಳ ಮೇಲೆ ಚಲಾಯಿಸಬೇಕಾದಂಥ ಹಿತಕರವಾದ, ಆರೋಗ್ಯಕರವಾದ ಹಾಗೂ ಸ್ವತಂತ್ರ ನಿಯಂತ್ರಣದ ಕೆಲವು ಕ್ರಮಗಳಿರಬೇಕೆಂಬುದನ್ನು ರಾಷ್ಟ್ರವು, ಸರ್ವೇಸಾಧಾರಣವಾಗಿ ಒಪ್ಪಿದೆ. ಇದರ ಬಗ್ಗೆಯೂ ಸಹ ಯಾವುದೇ ತಪ್ಪು ಆಗಬಾರದು. ಈಗ ವಾದ ವಿವಾದಗಳನ್ನು ಮುಂದುವರೆಸುವುದು ಬೇಡ. ಮಿಲ್ಟನ್ನಿನ ಕಾಲದಿಂದ ಬರ್ನಾಡ್ ಷಾ ವರೆಗೆ ಪ್ರಬಂಧವನ್ನು ಬರೆಯುವುದು ಯಾರಿಗೇ ಆಗಲಿ ಸುಲಭವಾಗಿರಬಹುದು. ಹಾಗೆಯೇ ನನ್ನ ಸ್ನೇಹಿತರಾದ ಶ್ರೀಯುತ ಹಯವದನರಾವ್‌ರವರು ಉದ್ಧರಿಸಿದಂತೆ ಬಹುಶಃ VIII ನೇ ಹೆನ್ರಿಯಿಂದ ಲಾರ್ಡ್ ಹೋರ್ಡರ್‌ವರೆಗೆ ಪತ್ರಿಕಾ ನಿಯಂತ್ರಣದ ಅಗತ್ಯತೆ ಎಂಬ ಬಗ್ಗೆ ಒಂದು ಪ್ರಬಂಧವನ್ನು ಬರೆಯುವುದೂ ಸಹ ಅಷ್ಟೇ ಸುಲಭ. ನಿಯಂತ್ರಣವೂ ಸಹ ಅಗತ್ಯ. ಹಾಗಾಗಿ ಈ ಎರಡೂ ಅಂಶಗಳ ಬಗ್ಗೆ ಯಾವುದೇ ವಿವರವಾದ ವಾದ ವಿವಾದ ಬೇಕಿಲ್ಲ. ಅವು ನಮ್ಮಿಬ್ಬರಿಗೂ ಸಾಮಾನ್ಯವಾದುದು. ನಮಗೆ ಏನು ಬೇಕೆಂಬುದರ ಬಗ್ಗೆ ನಾವು ಸ್ಪಷ್ಟ ಅಭಿಪ್ರಾಯ ಹೊಂದಿರಬೇಕು. ನನ್ನ ಪ್ರಸ್ತಾವವನ್ನು ಮತ್ತೊಮ್ಮೆ ಪುನರುಚ್ಚರಿಸುತ್ತೇನೆ:

ರಾಜ್ಯದ ಯಾವೊಬ್ಬ ಪ್ರಜೆಯನ್ನು ಪರಿಗಣಿಸುವಂತೆಯೇ ಪತ್ರಕರ್ತರನ್ನೂ ಸಹ ಪರಿಗಣಿಸುವುದಕ್ಕೆ ಅವರು ಹಕ್ಕುಳ್ಳವರಾಗಿದ್ದಾರೆ. ವಿರುದ್ಧವಾದುದು ಸಾಬೀತಾಗುವವರೆಗೆ ಆತನ ವಿರುದ್ಧ ಯಾವುದೇ ಪೂರ್ವಾಗ್ರಹಭಾವನೆಯನ್ನು ಇಟ್ಟುಕೊಳ್ಳಬಾರದು. ಆತನ ಸ್ವಾತಂತ್ರ್ಯ ಸಾರ್ವಜನಿಕರ ಸ್ವಾತಂತ್ರ್ಯದ ಒಂದು

ಭಾಗ. ಆತ ಸಾರ್ವಜನಿಕರಿಗಿಂತ ದೊಡ್ಡ ವ್ಯಕ್ತಿಯಲ್ಲ. ವಾಸ್ತವವಾಗಿ ಯಾವಾಗಲೇ ಆಗಲಿ, ಸಾರ್ವಜನಿಕರ ಹಕ್ಕುಗಳು, ಪತ್ರಕರ್ತನ ಹಕ್ಕುಗಳಿಗಿಂತ ತುಂಬಾ ಮಹತ್ವವಾದವು. ಆದರೆ ಪತ್ರಕರ್ತನು, ಶಾಂತಚಿತ್ತತೆ ಹಾಗೂ ಸ್ಪಷ್ಟ ಔಚಿತ್ಯ ಪ್ರಜ್ಞೆಯಿಂದ ತನ್ನ ವೃತ್ತಿಯನ್ನು ಗೌರವಯುತವಾಗಿ ನಿರ್ವಹಿಸಬೇಕೆಂಬ ದೃಷ್ಟಿಯಿಂದ ಅವನು ಕಾನೂನು ನಿಯಂತ್ರಣಕ್ಕೆ ಎಷ್ಟು ಹಕ್ಕುಳ್ಳವನಾಗಿದ್ದಾನೋ, ಕಾನೂನು ರಕ್ಷಣೆಗೂ ಅಷ್ಟೇ ಹಕ್ಕುಳ್ಳವನಾಗಿದ್ದಾನೆ. ಆದ್ದರಿಂದ, ಮೊದಲನೆಯದಾಗಿ, ಶಾಸನ ಸಭೆಯು, ಆತನ ವಿರುದ್ಧ ಯಾವುದೇ ಪೂರ್ವಾಗ್ರಹಭಾವನೆಯನ್ನು ಇಟ್ಟುಕೊಳ್ಳಬಾರದು ಎಂದು ನಾನು ಹೇಳಬಯಸುತ್ತೇನೆ. ಪರವಾನಗಿಯನ್ನು ಪಡೆಯುವಂತೆ ಪತ್ರಕರ್ತನನ್ನು ಅಗತ್ಯಪಡಿಸುವ ಹಳೆಯ ಕಾನೂನಿನಲ್ಲಿ ಆತ ಒಬ್ಬ ಸಂಭಾವ್ಯ ಅಪರಾಧಿಯೆಂದೂ, ಆತನು ಪರವಾನಗಿ ಪಡೆಯದೆ ಪತ್ರಿಕೆಯನ್ನು ಪ್ರಕಟಿಸಿದರೆ, ಆತನು ಸಾರ್ವಜನಿಕರಿಗೆ ಕೇಡುಂಟುಮಾಡುವ ಸಂಭಾವ್ಯತೆ ಇದೆಯೆಂದು ಹಾಗೂ ಹಾನಿಕರವಾದ ದುರುದ್ದೇಶಪೂರಿತ ಮತ್ತು ರಾಜ್ಯದ ಹಿತಾಸಕ್ತಿಗೆ ಧಕ್ಕೆಯುಂಟು ಮಾಡುವ ಪ್ರಚಾರವನ್ನು ನಡೆಸುತ್ತಾನೆಂದು ಮತ್ತು ಆತನನ್ನು ಅಪರಾಧಿಯಂತೆ ಶಿಕ್ಷಿಸಲಾಗುವುದೆಂದು ವ್ಯಕ್ತವಾಗುತ್ತದೆ. ಆದ್ದರಿಂದ ಹಳೆಯ ಕಾನೂನು ಪರವಾನಗಿಯನ್ನು ಕಡ್ಡಾಯಗೊಳಿಸಿದೆ. ಆದರೆ ಈಗ ಪ್ರಸಕ್ತ ಮಸೂದೆ ಏನನ್ನು ಮಾಡುತ್ತದೆ? ಇದೂ ಸಹ ಆತನಿಂದ ಪರವಾನಗಿಯನ್ನು ಅಪೇಕ್ಷಿಸುತ್ತದೆ. ಆದರೆ ಹಳೆಯ ಕಾನೂನಿನಲ್ಲಿದ್ದಂತೆ ಪ್ರಾಮಾಣಿಕನಾದ ಸಂಪಾದಕನಿಂದ ಅಲ್ಲ, ಇದು ಪ್ರಕಾಶಕ ಮತ್ತು ಮುದ್ರಕರಿಂದ ಪರವಾನಗಿಯನ್ನು ಅಪೇಕ್ಷಿಸುತ್ತದೆ.

ಆಗ ಸರ್ಕಾರದ ಮುಖ್ಯ ಕಾರ್ಯದರ್ಶಿಯವರಿಗೆ ಪರವಾನಗಿಗಾಗಿ ಅರ್ಜಿ ಸಲ್ಲಿಸಬೇಕಾಗಿತ್ತು. ಈಗ ದಂಡಾಧಿಕಾರಿಗೆ ಸಲ್ಲಿಸಬೇಕಾಗಿದೆ. ಹಿಂದೆ ಪರವಾನಗಿಯನ್ನು ಪಡೆಯುವುದಕ್ಕಾಗಿ ಭಾವಿ ಸಂಪಾದಕನು ಮುಖ್ಯ ಕಾರ್ಯದರ್ಶಿಯವರಿಗೆ ಅರ್ಜಿ ಸಲ್ಲಿಸಬೇಕಾಗಿತ್ತು, ಇನ್ನು ಮುಂದೆ, ಭಾವಿ ಮುದ್ರಕ ಮತ್ತು ಭಾವಿ ಪ್ರಕಾಶಕನು ದಂಡಾಧಿಕಾರಿಯ ಮುಂದೆ ಹೋಗಿ ಘೋಷಣೆಯನ್ನು ಮಾಡಬೇಕಾಗುತ್ತದೆ. ದಂಡಾಧಿಕಾರಿಯು ಜಾಮೀನು ಪಡೆಯುವಂತೆ ಸಹ ಕೇಳಬಹುದು. ಕಾನೂನಿನ ಅಡಿಯಲ್ಲಿ ಏನು ಮಾಡಲು ಸಾಧ್ಯವೋ ಅದನ್ನು ವಾಸ್ತವಿಕವಾಗಿ ಹಲವು ಬಾರಿ ಜಾರಿಗೊಳಿಸಲಾಗುತ್ತದೆ. ಈ ಪ್ರಾರಂಭಿಕ ಪೂರ್ವಾಗ್ರಹಭಾವನೆ ಏಕೆ? ಎಂದು ನಾನು ಕೇಳುತ್ತೇನೆ. ಸರ್ಕಾರವು, ಮಸೂದೆಯಿಂದ 3ನೇ ಖಂಡವನ್ನು ತೆಗೆದುಹಾಕುವುದಕ್ಕೆ ತುಂಬಾ ಉದಾರ

ಮನೋಭಾವದಿಂದ ಒಪ್ಪಿಗೆ ನೀಡಿದೆ. ಆದರೆ, ಆ ಖಂಡದ ಸಾರಾಂಶ ರೂಪವು 4ನೇ ಖಂಡದಲ್ಲಿ ವ್ಯಕ್ತವಾಗಿದೆ. ಆದ್ದರಿಂದ ಇದು ನನ್ನ ಮೊದಲ ಆಕ್ಷೇಪಣೆಗೆ ಕಾರಣವಾಗಿದ್ದು, ನಾನಿದನ್ನು ಆಕ್ಷೇಪಿಸುತ್ತೇನೆ.

ನನ್ನ ಆಕ್ಷೇಪಣೆಗೆ ಎರಡನೆ ಕಾರಣವೆಂದರೆ, ಹಳೆಯ ಮಸೂದೆಯು ಅಪರಾಧವನ್ನು ಪರಿಭಾಷಿಸಿಲ್ಲ. ಪ್ರಸಕ್ತ ಮಸೂದೆಯಲ್ಲಿ ಅಪರಾಧವನ್ನು ಪರಿಭಾಷಿಸಿರುವುದರಲ್ಲಿ ಸಂದೇಹವಿಲ್ಲ. ಆದರೆ, ಪರಿಭಾಷೆಯನ್ನು ಓದಿದ ನಂತರ ಇದು ಗೌಣ ಅಥವಾ ಸಣ್ಣ ಅಪರಾಧಕ್ಕಾಗಿ ಈಗಾಗಲೇ ಉಪಂಧಿಸಲಾಗಿರುವುದಕ್ಕಿಂತ ಎರಡು ಪಟ್ಟು ಹೆಚ್ಚಿನ ಪರಿಹಾರ ಸೂಚಿಸುತ್ತದೆ ಎಂದು ಕಂಡುಬರುತ್ತದೆ. ಇವು ಅಸ್ತಿತ್ವದಲ್ಲಿರುವ ಇತರ ಕಾನೂನುಗಳ ಅಡಿಯಲ್ಲಿ ವ್ಯವಹರಿಸಬಹುದಾದ ಅಪರಾಧಗಳಾಗಿವೆ; ಅಸ್ತಿತ್ವದಲ್ಲಿರುವ ಕಾನೂನುಗಳು ಈ ಅಪರಾಧಗಳ ಉದ್ದೇಶಗಳಿಗೆ ಸಮರ್ಪಕವಾಗಿಲ್ಲದ್ದಿದ್ದರೆ, ಆಗ ರಾಷ್ಟ್ರದ ದಂಡನೀಯ ಕಾನೂನುಗಳಿಗೆ ಮತ್ತಷ್ಟು ಕಾನೂನನ್ನು ಯುಕ್ತವಾಗಿ ಸೇರಿಸಬಹುದಾಗಿದೆ ಮತ್ತು ಬಲಪಡಿಸಬಹುದಾಗಿದೆ ಎಂಬುದಾಗಿ ನಾವು ಹತ್ತು ವರ್ಷಗಳ ಹಿಂದೆಯೇ ಎಂದರೆ, 1928ರಲ್ಲಿ ಹೇಳಿದ್ದೆವು. ಹೀಗಿರುವಲ್ಲಿ ಅವು ದೇಶದ ಸಾಮಾನ್ಯ ಕಾನೂನಿನ ಮತ್ತಷ್ಟು ವಿವರಗಳ ಸೇರ್ಪಡೆಗಳಾಗಿರಬಹುದಷ್ಟೇ ಹೊರತು ಹೊಸ ಕಾನೂನು ಅಲ್ಲ. ಎರಡನೆಯದಾಗಿ ಈ ಮಸೂದೆಯಲ್ಲಿ ಯಾವುದೇ ಸುಧಾರಣೆಯಾಗಿಲ್ಲ.

ನಾನು ಈಗ ಮೂರನೇ ಶೀರ್ಷಿಕೆಗೆ ಬರುತ್ತೇನೆ. ಅದೇ ನ್ಯಾಯಾಂಗ ಪ್ರಕ್ರಿಯೆಗಳು, ಹಳೆಯ ಕಾನೂನಿನಲ್ಲಿ ಯಾವುದೇ ನ್ಯಾಯಿಕ ಪರಿಹಾರಗಳನ್ನು ಒದಗಿಸಿಲ್ಲ. ಈಗಿನ ಮಸೂದೆಯಲ್ಲಿ ನ್ಯಾಯಿಕ ಪ್ರಕ್ರಿಯೆಗಳನ್ನು ಕಲ್ಪಿಸಲಾಗಿದೆ ಎಂಬುದರಲ್ಲಿ ಸಂಶಯವೇ ಇಲ್ಲ. ಆದರೆ ಯಾವಾಗ? ಅತ್ಯಂತ ಕೊನೆಯ ಹಂತದಲ್ಲಿ ಹಾಗೂ ವಿಶೇಷ ವಿಧಾನದ ಮೂಲಕ. ಇದರ ನಿರ್ಣಯಕ್ಕಾಗಿ ವಿಶೇಷ ಪೀಠ ಯಾಕೆ? ಯಾಕೆ ಸಾಮಾನ್ಯ ಪೀಠ ಮಾಡಬಾರದಿತ್ತು. ಕಾನೂನಿನ ಸಾಮಾನ್ಯ ಪ್ರಕ್ರಿಯೆಗಳು ಏಕೆ ಇಲ್ಲ ಎಂಬುದು ನನ್ನ ಪ್ರಶ್ನೆ. ಸ್ವಾಮಿ ವೃತ್ತಪತ್ರಿಕೆಗಳ ಸಾಮಾನ್ಯ ಅಪರಾಧಗಳಿಗೆ ಸಂಬಂಧಪಟ್ಟಂತೆ ಈ ಟೀಕೆ. ಸಂಪಾದಕನು ಯಾವುದೇ ಲೈಸೆನ್ಸ್ ಇಲ್ಲದೆ ಒಂದು ಪತ್ರಿಕೆಯನ್ನು ಪ್ರಾರಂಭಿಸಲಿ, ಮುಖ್ಯ ಕಾರ್ಯದರ್ಶಿ ಅಥವಾ ಮ್ಯಾಜಿಸ್ಟ್ರೇಟರ ಅನುಮತಿಗೆ ಕಾಯದೆ ಪ್ರಾರಂಭಿಸಲಿ ಅವನು ಬಯಸುವ ಪತ್ರಿಕೆ ಪ್ರಾರಂಭಿಸಲಿ, ತಪ್ಪು ಕೃತ್ಯಕ್ಕಾಗಿ ಅವನು ಸಿಕ್ಕಿಹಾಕಿಕೊಂಡ ಹೊರತು ಆತನ ವಿರುದ್ಧ ಯಾವುದೇ ಪೂರ್ವಭಾವನೆ ಬೇಡ. ತಪ್ಪು ಕೃತ್ಯಗಳು ಎರಡು ಬಗೆಯವು.

ಕಾನೂನು ರಿತ್ಯ ಒಂದರ ವಿರುದ್ಧ ಕ್ರಮಕೈಗೊಳ್ಳಬಹುದು, ಇನ್ನೊಂದರ ವಿರುದ್ಧ ಕ್ರಮ ಕೈಗೊಳ್ಳಲಾಗದು. ನ್ಯಾಯಯುಕ್ತ ವಿಷಯವಾಗಿದ್ದರೆ, ಅವನನ್ನು ನ್ಯಾಯಾಲಯದ ಮುಂದೆ ಹಾಜರುಪಡಿಸಿ, ಕಾನೂನಿನ ಸಾಮಾನ್ಯ ಪ್ರಕ್ರಿಯೆಗೆ ಅನುಸಾರವಾಗಿ ವ್ಯವಹರಣೆಯಾಗಲಿ. ಅದು ವ್ಯಾಜ್ಯ ಯೋಗ್ಯವಲ್ಲದಾಗ ಮಾತ್ರ ಸರ್ಕಾರಕ್ಕೆ ನಿಜವಾದ ತೊಂದರೆ ಉಂಟಾಗುತ್ತದೆ. ನನ್ನ ಮಾತನ್ನು ಯಾವುದೇ ರೀತಿಯ ಜವಾಬ್ದಾರಿಯಿಲ್ಲದ ಅಥವಾ ಸರ್ಕಾರದ ತೊಂದರೆಯನ್ನು ಪರಿಗಣಿಸದವನೆಂಬ ರೀತಿಯಲ್ಲಿ ನೋಡುವುದಿಲ್ಲವೆಂದು ಆಶಿಸುತ್ತೇನೆ. ನಾನು ಸರ್ಕಾರದ ಕಷ್ಟವನ್ನು ಸಮರ್ಪಕವಾಗಿ ಅರ್ಥಮಾಡಿಕೊಳ್ಳಲು ಪ್ರಯತ್ನಿಸಿದ್ದೇನೆಂದು ನನ್ನ ಭಾವನೆ. ಒಬ್ಬ ಸಂಪಾದಕ, ಒಬ್ಬ ಪತ್ರಕರ್ತ, ಒಬ್ಬ ಪ್ರಕಾಶಕ ಇವರೆಲ್ಲರ ಬರಹಗಳನ್ನು ಈ ನಾಡಿನ ದಂಡನಾ ಕಾನೂನಿನ ಚೌಕಟ್ಟಿನೊಳಗೆ ತರಲು ಕಷ್ಟವಾಗಬಹುದು, ಆದರೆ ಇವರ ಬರಹಗಳು ವೈರುಧ್ಯದಿಂದ ಕೂಡಿದ್ದರೆ, ಯಾವುದಾದರೂ ತಪ್ಪು ನಿರೂಪಣೆ ಮಾಡಿದ್ದರೆ ಹಾಗೂ ಅವಮಾನಕಾರಿಯಾಗಿದ್ದರೆ ಹಾಗೂ ಗೌರವಯುತವಾಗಿರದಿದ್ದರೆ ಅವನು ನ್ಯಾಯಿಕ ವ್ಯವಹರಣೆಗೆ ಗುರಿಯಾದಂತೆಯೇ. ಹೊಣೆಗೇಡಿತನದ ತಪ್ಪು ನಿರೂಪಣೆ, ತೊಂದರೆ ಸೃಷ್ಟಿಸುವುದು ಅವನಿಗೆ ರೂಢಿಗತ. ಅಂಥವನೊಬ್ಬನಿದ್ದಾನೆಂದು ಭಾವಿಸೋಣ. ನಾವು ಅವನೊಂದಿಗೆ ಹೇಗೆ ವ್ಯವಹರಿಸಬೇಕು? ಇದು ಸರ್ಕಾರಕ್ಕಿರುವ ಸಮಸ್ಯೆ ಹಾಗೂ ಇದೊಂದು ಸಮಂಜಸ ಪ್ರಶ್ನೆಯೇ ಆಗಿದೆ. ಬಂಗಾಳದಲ್ಲಿ ಇಂಥ ನಿದರ್ಶನಗಳಿವೆ. ಭಾರತದ ಇತರ ಸ್ಥಳಗಳಲ್ಲಿಯೂ ಇಂಥ ಘಟನೆಗಳು ನಡೆದಿವೆ. ವಾಸ್ತವ ಸಂಗತಿ ಎಂದರೆ, ಬ್ರಿಟಿಷ್ ಭಾರತ ಸರ್ಕಾರವು ಅಂಥ ವ್ಯಕ್ತಿಗಳನ್ನು ಗುರುತಿಸಲು ಅಚತುರ ಪ್ರಯತ್ನವನ್ನು ನಡೆಸಿದೆ. ಇದರ ಫಲಿತಾಂಶವೇ ಈ ಪ್ರಸ್ತುತ ಕಾಯಿದೆಯಾಗಿದೆ. ಇದೊಂದು ನಾಜೂಕಿಲ್ಲದ ಪ್ರಯತ್ನವೇ ಸರಿ. ಆದರೆ ಸಾಮ್ರಾಜ್ಯಶಾಹಿ ಸರ್ಕಾರವು ಪ್ರಯತ್ನದ ಅಂದ ಚೆಂದಗಳನ್ನು ಪರಿಗಣಿಸುವುದಿಲ್ಲ. ಅದು ತನ್ನ ಸಾಮ್ರಾಜ್ಯವನ್ನು ನಿರ್ವಹಿಸಬೇಕಷ್ಟೇ. ಹಾಗಾಗಿ ತನ್ನ ರಕ್ಷಣೆಗಾಗಿ ಯಾವ ರೀತಿಯ ಸಾಧನವನ್ನಾದರೂ ಬಳಸಲು ಅದು ಹಿಂಜರಿಯುವುದಿಲ್ಲ. ಆದರೆ ಇಲ್ಲಿ ಪರಿಸ್ಥಿತಿ ಭಿನ್ನವಾಗಿದೆ. ನಾವು ಅಂಥ ವಿಕೃತ ವಿಧಾನಗಳನ್ನು ಬಳಸಬೇಕಾದ ಅಗತ್ಯವಿಲ್ಲ. ಬೇರೆ ಅನೇಕ ವಿಧಾನಗಳಿವೆ. ಅನೇಕ ಸಭ್ಯ ವಿಧಾನಗಳು ನಮ್ಮಲ್ಲಿವೆ. ಪತ್ರಿಕೆಯ ವರದಿಗಳು ರೂಢಿಗತವಾಗಿ ದ್ವೇಷದ ಸ್ವರೂಪದ್ದಾಗಿದ್ದರೆ ಅಥವಾ ಅವಮಾನಿಸುವ ಸ್ವರೂಪದ್ದಾಗಿದ್ದರೆ, ಅಥವಾ ಒಬ್ಬ ವ್ಯಕ್ತಿ ಕೇಡುಬಗೆಯುವಂಥ ಹೊಣೆಗೇಡಿತನದಿಂದ ಪ್ರಚಾರ ಮಾಡುತ್ತಿದ್ದರೆ, ಅಥವಾ ಅವನು ಚಾಡಿಕೋರನಾಗಿದ್ದರೆ ಸರ್ಕಾರವು

ಆತನ ಚಟುವಟಿಕೆಗಳನ್ನು ನಿರ್ಬಂಧಿಸುವ ಕ್ರಮ ಕೈಗೊಳ್ಳುವ ಹಕ್ಕು ಹೊಂದಿರುತ್ತದೆ. ಸರ್ಕಾರವು ಆತನನ್ನು ನಿಗ್ರಹಿಸಲು ಬೇಕಾದ ಅಧಿಕಾರವನ್ನು ಬಳಸುವ ಹಕ್ಕು ಹೊಂದಿರುತ್ತದೆ. ಸರ್ಕಾರಕ್ಕೆ ನಿಜವಾಗಿಯೂ ಸಮಸ್ಯೆಯೊಡ್ಡಿದ ಇನ್ನೊಂದು ಪ್ರಕರಣವಿದೆ. ಸಾರ್ವಜನಿಕರಲ್ಲಿ ಉದ್ವಿಗ್ನತೆ, ಆತಂಕವನ್ನು ಸೃಷ್ಟಿಸುವ ಸಂದರ್ಭಗಳು ಇವೆ: ಯಾರೋ ರಕ್ತ ಹೆಪ್ಪುಗಟ್ಟುವಂಥ ಸುಳ್ಳು ಸುದ್ದಿ ಸೃಷ್ಟಿಸುತ್ತಾರೆ, ಆ ಕಥೆ ಎಲ್ಲ ಕಡೆ ಹರಡುತ್ತದೆ. ಪತ್ರಿಕಾ ವರದಿಗಾರನು ನಿಜವಾಗಿಯೂ ತಾನು ಜೀವಿಸುವ ಪರಿಸರಕ್ಕಿಂತ ಯಾವ ರೀತಿಯಲ್ಲೂ ಮೇಲ್ಮಟ್ಟದಲ್ಲಿರುವುದಿಲ್ಲ. ಅವನು ಈ ಗಾಳಿ ಸುದ್ದಿಯನ್ನು ಅದು ಸಂಭವನೀಯವೋ, ಅಸಂಭವನೀಯವೋ ಎಂಬುದನ್ನು ನೋಡದೇ ಬುದ್ಧಿವಂತಿಕೆಯಿಂದಲೋ ಅಥವಾ ಅಚಾತುರ್ಯದಿಂದಲೋ ಪಡೆದು, ಅದನ್ನು ಮುದ್ರಿಸಿ, ತೊಂದರೆಗೆ ಸಿಕ್ಕಿಹಾಕಿಕೊಳ್ಳುತ್ತಾನೆ. ಆತ ಸತ್ಯವನ್ನೇ ಪ್ರಕಟಿಸುವುದಿದ್ದರೂ, ಸಾರ್ವಜನಿಕ ಹಿತಕ್ಕಾಗಿ ಸತ್ಯವನ್ನು ನಿರ್ಬಂಧಿಸಬೇಕಾದ ಮರೆಮಾಚಬೇಕಾದ ಹಾಗೂ ಪ್ರತ್ಯೇಕಿಸುವ ಸಂದರ್ಭಗಳೂ ಒದಗುತ್ತವೆ. ಇನ್ನು ಒಂದು ವಿಚಾರಕ್ಕೆ ಸಂಬಂಧಪಟ್ಟಂತೆ ತದ್ವಿರುದ್ಧ ಸಂಗತಿಗಳೂ ಇರುತ್ತವೆ. ಅವುಗಳಲ್ಲಿ ಒಂದನ್ನು ಆಯ್ದುಕೊಂಡು ಉಳಿದವುಗಳನ್ನು ಕೈಬಿಡುತ್ತೇವೆ ಮತ್ತು ಅವುಗಳ ಪ್ರಕಟಣೆಯ ಬಗೆಗೆ ನಿರಾಸಕ್ತಿ ತೋರುತ್ತೇವೆ. ಹಾಗೆಯೇ ಸಾರ್ವಜನಿಕ ಶಾಂತಿಗೆ ಧಕ್ಕೆ ತರುವ, ಸಮಾಜದ ಹಿತಕ್ಕೆ ಅಪಾಯವನ್ನುಂಟು ಮಾಡುವ ಸತ್ಯಗಳೂ ಇರುತ್ತವೆ. ಅಂಥ ಸತ್ಯಗಳು, ಅಪ್ಪಟ ಸತ್ಯಗಳಾಗಿದ್ದರೂ, ಅವು ಹರಡದಂತೆ ನಿರ್ಬಂಧಿಸಬೇಕು. ಉದ್ರೇಕಿಸುವ ವಿಷಯ, ಅಪಾಯಕಾರಿ ಸುದ್ದಿಗಳು, ಭೀತಿ ಹುಟ್ಟಿಸುವ ಕಥೆಗಳು ಇಂಥವುಗಳು ಹರಡುವುದನ್ನು ನಿರ್ಬಂಧಿಸುವ ಅಧಿಕಾರ ಹೊಂದಿರುವ ಹಕ್ಕು ಸರ್ಕಾರಕ್ಕೆ ಇದ್ದೇ ಇರುತ್ತದೆ. ನಾನು ಈ ಎರಡು ಅಂಶಗಳನ್ನು ಒಪ್ಪುತ್ತೇನೆ. ಪ್ರಸ್ತುತ ಮಸೂದೆಯಲ್ಲಿ ಉದ್ದೇಶಿಸಿದ್ದಕ್ಕಿಂತ ಹೊರತಾದ ಈ ಎರಡು ಉದ್ದೇಶಗಳಿಗಾಗಿ ಇತರೇ ರೀತಿಯಲ್ಲಿ ಉಪಬಂಧವನ್ನು ಮಾಡಬೇಕೆಂಬುದು ನನ್ನ ಸವಿನಮ್ರ ಕೋರಿಕೆ.

ಸ್ವಾಮಿ, ಗೌರವಾನ್ವಿತ ಮೊದಲನೇ ಸದಸ್ಯರಲ್ಲಿ ಮೈಸೂರಿಗರದೇ ಆದ ವೈಶಿಷ್ಟ್ಯವಿದೆ. ಮೈಸೂರಿಗರ ಒಂದು ವಿಶಿಷ್ಟ ಗುಣವೆಂದರೆ ಅವರ ವಿನಯಶೀಲತೆ. ಇದನ್ನು ನನ್ನಲ್ಲಿ ಕಾಣಲು ಸಾಧ್ಯವಿಲ್ಲ. ನಾನು ಇದನ್ನು ಬೇರೆಯವರು ಹೇಳಿದ್ದರಿಂದ ತಿಳಿದುಕೊಂಡಿದ್ದೇನೆ. ಏನೆಂದರೆ ಮೈಸೂರಿಗರು ಅತ್ಯಂತ ಸಮರ್ಥರು. ಆದರೆ ಒಂದು ತೂಕ ಹೆಚ್ಚೇ ಎನ್ನುವಂಥ ಅವರ ವಿನಯಶೀಲತೆಯಿಂದ ಅವರ ಸಾಮರ್ಥ್ಯಕ್ಕೆ

ಒಂದಿನಿತು ಊನವಾಗುತ್ತದೆ. ಮೊದಲ ಗೌರವಾನ್ವಿತ ಸದಸ್ಯರು ತಾವು ಈ ದಿಸೆಯಲ್ಲಿ ಯಾವುದೇ ಆದರ್ಶವಾದುದನ್ನು ನಿರೀಕ್ಷಿಸುತ್ತಿಲ್ಲ ಎಂದರು. ಇದು ಒಂದು ವಿನಯಪೂರ್ವಕ ಹೇಳಿಕೆ. ಸ್ವಾಮಿ ಹಾಗೆ ಹೇಳಿಕೊಳ್ಳದೆಯೇ, ನಮ್ಮದೇ ರೀತಿಯಲ್ಲಿ ಒಂದು ಆದರ್ಶವನ್ನು ಒದಗಿಸಲು ಪ್ರಯತ್ನಿಸುತ್ತಿದ್ದೇವೆ. ಅನೇಕ ವಿಷಯಗಳಲ್ಲಿ ಬ್ರಿಟಿಷ್ ಭಾರತವನ್ನು ನಮಗೆ ಆದರ್ಶವೆಂದು ಪರಿಗಣಿಸಿಲ್ಲ. ಆದ್ದರಿಂದ ಬ್ರಿಟಿಷ್ ಭಾರತದ ಅಧಿನಿಯಮವು ಈ ನಿಟ್ಟಿನಲ್ಲಿ ನಮಗೆ ಮಾದರಿಯಾಗಬೇಕಾಗಿಲ್ಲ. ಕಳೆದ ಹತ್ತು ತಿಂಗಳುಗಳಲ್ಲಿ ಬ್ರಿಟಿಷ್ ಭಾರತದಲ್ಲಿ ಪರಿಸ್ಥಿತಿಗಳು ಬದಲಾಗಿದ್ದು ಈ ಬದಲಾವಣೆಯಿಂದ ಬ್ರಿಟಿಷ್ ಭಾರತದ ವ್ಯವಹಾರಗಳಲ್ಲಿ ನೈತಿಕತೆ ಪ್ರಾಧಾನ್ಯ ಪಡೆದಿದೆ ಎಂಬುದನ್ನು ನಾವು ಸ್ಮರಿಸಬಹುದಾಗಿದೆ. ಇಂದು ಮದ್ರಾಸಿನ ಮಂತ್ರಿ ಅಲ್ಲಿರುವ ಯಾವುದೇ ಸಂಪಾದಕನ ವಿರುದ್ಧ ಕಾನೂನನ್ನು ಮಾಡಿ ಪದೇ ಪದೇ ಅದನ್ನು ಅನ್ವಯಿಸಿದರೆ, ಆ ಸಂಪಾದಕ ಕೊನೆಯ ಅಸ್ತ್ರವೆಂಬಂತೆ ಅವನ ಕುರಿತು ಮತದಾರರನ್ನು ದೂಷಿಸುವಂತೆ ಬೊಟ್ಟು ಮಾಡಿ "ನಿಮ್ಮ ಮುಂಡಾ ಮೋಚಿತು. ನೀವು ಆಯ್ಕೆಮಾಡಿ ಕಳುಹಿಸಿ ಅಧಿಕಾರ ಸ್ಥಾನಗಳಲ್ಲಿ ಕುಳ್ಳಿರಿಸಿರುವ ಈ ಸಚಿವರು ಎಂಥವರೆಂದು ನೀವೇ ನೋಡಿ" ಎನ್ನುತ್ತಾನೆ. ಇದು ಬ್ರಿಟಿಷ್ ಭಾರತದ ಪರಿಸ್ಥಿತಿ. ಒಂದು ಜನಪ್ರಿಯ ಸರ್ಕಾರವು ಮಸೂದೆಯನ್ನು ಜಾರಿಗೆ ತರುವ ಉತ್ಸಾಹವನ್ನು ತೋರಲು ಸಿದ್ಧವಾಗಿದೆ. ಮೈಸೂರಿನಲ್ಲಿ ಇಂಥ ಪರಿಸ್ಥಿತಿ ಇಲ್ಲ. ಸ್ವಾಮಿ, ನಾನು ಹೀಗೆ ನನ್ನ ವಾದವನ್ನು ಮಂಡಿಸುತ್ತಿರುವುದನ್ನು ಸರ್ಕಾರದ ಬಗೆಗೆ ನಾನು ಅಸಹಕಾರ ತೋರುತ್ತಿದ್ದೇನೆಂದಾಗಲೀ, ಸರ್ಕಾರದ ಕಷ್ಟಗಳನ್ನು ನಾನು ಸಹಾನುಭೂತಿಯಿಂದ ನೋಡುತ್ತಿಲ್ಲ ಎಂದಾಗಲೀ ಅಂದುಕೊಳ್ಳುವುದಿಲ್ಲ ಎಂದು ನಾನು ಭಾವಿಸುತ್ತೇನೆ. ಮಸೂದೆಯನ್ನು ಎರಡು ಕಾರಣಗಳಿಗಾಗಿ ಸದನದ ಮುಂದೆ ಮಂಡಿಸಲಾಗಿದೆ. ಮೊದಲನೆಯದಾಗಿ ಇದನ್ನು ಅನುಕರಿಸಲು ಸುಲಭವಾಗಿದೆ. ಎರಡನೆಯದಾಗಿ ಇದು ಬ್ರಿಟಿಷ್ ಭಾರತದ ಶಾಸನವಾಗಿರುವುದರಿಂದ ಅದು ಬುದ್ಧಿಮತ್ತೆಯ ಸತ್ವವನ್ನು ಹೊಂದಿದೆ ಎಂದು. ಆದರೆ ಈ ಪ್ರಸ್ತಾವಗಳಲ್ಲಿ ಯಾವುದನ್ನೂ ನಾನು ಅನುಮೋದಿಸಲಾರೆ.

**ಶ್ರೀಯುತ ಎಸ್ ಸಿ ರಾಜಗೋಪಾಲಚಾರಿ:–** ನಾನು ಕೂಡಾ ಮಾಡಲಾರೆ.

**ಶ್ರೀಯುತ ಡಿ. ವಿ. ಗುಂಡಪ್ಪ:** ಧನ್ಯವಾದಗಳು ಸ್ವಾಮಿ. ನಾನು ಹೇಳಿದಂತೆ ನಾವು ಎರಡು ರೀತಿಯ ಸಂದರ್ಭಗಳಿಗೆ ಉಪಬಂಧ ಕಲ್ಪಿಸಬೇಕಾಗಿದೆ. ಮೊದಲನೆಯದಾಗಿ, ಭಯ ಹಾಗೂ ಸಾರ್ವಜನಿಕ ಉದ್ರೇಕದ ಸಂದರ್ಭಗಳು

ಮತ್ತು ಎರಡನೆಯದಾಗಿ, ಉದ್ದೇಶಪೂರ್ವಕವಾಗಿ ಕೆಸರೆರಚುವ ಬೇಜವಾಬ್ದಾರಿಯ ಪ್ರಚಾರದ ಸಂದರ್ಭ ಈ ಎರಡು ಕಾರಣಗಳಿಗಾಗಿ ಯುಕ್ತ ಉಪಬಂಧ ಕಲ್ಪಸಬೇಕೆಂದು ನಾನು ಭಾವಿಸುತ್ತೇನೆ. ಈ ವಿಷಯದಲ್ಲಿ ಇಡೀ ಸದನ ನನ್ನೊಂದಿಗೆ ಇರುತ್ತದೆ ಎಂಬುದಂತೂ ಖಚಿತ. ಆದ್ದರಿಂದಲೇ ನಾನು ತುಂಬಾ ವಿನಮ್ರನಾಗಿ ಈ ಸಲಹೆಯನ್ನು ನಿಮ್ಮ ಪರಿಶೀಲನೆಗೆ ಒಪ್ಪಿಸುತ್ತಿದ್ದೇನೆ. ಈ ಮಸೂದೆಯನ್ನು ಕೈ ಬಿಡೋಣ. ಸ್ಥಳೀಯ ಪತ್ರಕರ್ತರು, ಈಗಿರುವ ವೃತ್ತ ಪತ್ರಿಕೆಗಳ ಸಂಪಾದಕರು, ಕನಿಷ್ಠ ಎರಡು ಅಥವಾ ಮೂರು ಜನರು ಇರುವ ಒಂದು ಸಣ್ಣ ಸಮಿತಿ ಅಥವಾ ವೇದಿಕೆಯನ್ನು ರಚಿಸಲು ನಾನು ಸರ್ಕಾರಕ್ಕೆ ಮನವಿ ಮಾಡಿಕೊಳ್ಳುತ್ತೇನೆ. ಅವರನ್ನು ನಾವು ವಿಶ್ವಾಸಕ್ಕೆ ತೆಗೆದುಕೊಳ್ಳೋಣ. ಈ ಸದನದ ಒಬ್ಬರು ಅಥವಾ ಇಬ್ಬರು ಸದಸ್ಯರು ಇರಲಿ. ಪ್ರತಿನಿಧಿ ಸಭೆಯ ನಾಲ್ವರು ಸದಸ್ಯರು, ಎಂದರೆ ಅವರಲ್ಲಿ ಇಬ್ಬರು ಈ ಕ್ರಮವನ್ನು ಸಮರ್ಥಿಸಿದವರು, ಇನ್ನಿಬ್ಬರು ಇದನ್ನು ವಿರೋಧಿಸಿದವರು ಇರಬೇಕೆಂದು ನನ್ನ ಸಲಹೆ. ಇದು ಏಳು ಅಥವಾ ಎಂಟು ಅಥವಾ ಹತ್ತು ಜನರ ಸಣ್ಣ ಸಮಿತಿಯಾಗಿರುತ್ತದೆ. ಸರ್ಕಾರದ ಒಬ್ಬರು ಅಥವಾ ಇಬ್ಬರು ಸದಸ್ಯರು ಇರಲಿ. ಈ ಸರ್ಕಾರೀ ಸದಸ್ಯರು ಸರ್ಕಾರದ ಸಮಸ್ಯೆಗಳನ್ನು ವಿವರಿಸಲಿ. ಈ ಸಮಾವೇಶ ವಿಧಾನದಿಂದ ನಾವು ಒಂದು ಒಪ್ಪಂದಕ್ಕೆ ಬರುವುದು ಸುಲಭವಾಗುತ್ತದೆ. ಈ ರೀತಿಯಲ್ಲಿ ಇದುವರೆಗೆ ಪ್ರಯತ್ನ ನಡೆದಿಲ್ಲ. ಈ ಪ್ರಯೋಗವನ್ನು ಮಾಡಿದರೆ ಎಲ್ಲ ಪಕ್ಷಗಳಿಗೆ ಸಮಾಧಾನವಾಗಬಹುದು ಎಂಬ ಭರವಸೆ ನನಗಿದೆ. ಕೆಲವು ಸ್ಥಳೀಯ ಪತ್ರಿಕೆಗಳ ಸಂಪಾದಕರು ನನಗೆ ಗೊತ್ತಿದ್ದಾರೆ. ಅವರಲ್ಲಿ ನಿಜವಾದ ನಿಷ್ಠೆ ಹಾಗೂ ದೇಶಭಕ್ತಿ ಇದೆ ಎಂಬ ಬಲವಾದ ನಂಬಿಕೆ ನನಗಿದೆ. ಜೊತೆಗೆ ಜವಾಬ್ದಾರಿ ಪ್ರಜ್ಞೆ ಉಳ್ಳವರು, ಶ್ರದ್ಧೆಯುಳ್ಳವರು, ದೇಶಕ್ಕಾಗಿ ದೊಡ್ಡ ತ್ಯಾಗ ಮಾಡಿದವರು, ಮತ್ತು ಅವರು ಕೇವಲ ಲಾಭದ ದೃಷ್ಟಿಯುಳ್ಳವರಲ್ಲ. ಸ್ವಾಮಿ, ನಮ್ಮ ಪತ್ರಿಕೋದ್ಯಮಕ್ಕೆ ಇನ್ನೂ ವ್ಯಾಪಾರೀ ಮನೋಭಾವ ಬಂದಿಲ್ಲ ಎಂದು ತುಂಬಾ ವಿನಯದಿಂದ ಹೇಳಲಿಚ್ಛಿಸುತ್ತೇನೆ. ಈಗಲೂ ಅನೇಕ ಪ್ರಾಮಾಣಿಕರಾದ ಹಾಗೂ ನೇರ ನಡೆ ನುಡಿಯ ಒಳ್ಳೆಯ ಪತ್ರಕರ್ತರು ಇದ್ದಾರೆ. ಅವರ ನೆರವನ್ನು ಪಡೆಯುವುದಾದರೆ ಅವರನ್ನು ಪರಿಷತ್ತಿಗೆ ಕರೆಸಿ, ಸರ್ಕಾರದ ಸಮಸ್ಯೆಗಳನ್ನು ಮುಕ್ತವಾಗಿ ಅವರ ಮುಂದೆ ಇಡಬಹುದು. ರಾವ್‌ಸಾಹಿಬ್ ಸಿ ಹಯವದನರಾವ್, ಖಾನ್ ಬಹುದ್ದೂರ್ ಮಹಮ್ಮದ್ ಅಬ್ಬಾಸ್ ಖಾನ್‌ರಂತಹ ಶಾಂತ ಸ್ವಭಾವದವರು, ಸಚ್ಚಾರಿತ್ರ್ಯವುಳ್ಳವರು ಸಮಿತಿಯಲ್ಲಿದ್ದು, ಮಧ್ಯಸ್ಥಗಾರರಾಗಿ ಸರ್ಕಾರದ ವಿಚಾರಗಳನ್ನು ವ್ಯಾಖ್ಯಾನಿಸಿ, ಸರ್ಕಾರದ ಸಮಸ್ಯೆಗಳನ್ನು ಪತ್ರಕರ್ತರಿಗೆ ತಿಳಿಸಿ ಹೇಳಿದರೆ ಹಾಗೂ ಪತ್ರಕರ್ತರ

ಸಮಸ್ಯೆಗಳನ್ನು ಸರಿಯಾಗಿ ವಿಶ್ಲೇಷಿಸಿದರೆ ಆಗ ಎಲ್ಲರಿಗೂ ಒಪ್ಪಿಗೆಯಾಗುವಂಥ ಉತ್ತಮ ಫಲಿತಾಂಶ ಸಿಗಬಹುದೆಂದು ನಾನು ಆಶಿಸುತ್ತೇನೆ. ನಾನೇನೂ ನಿರಾಶವಾದಿಯಲ್ಲ. ಇದೊಂದು ಅಸಾಧ್ಯ ಪ್ರಕ್ರಿಯೆ ಎಂದು ಸರ್ಕಾರ ಭಾವಿಸಿರಬಹುದು. ನಾನು ಯಾವತ್ತೂ ಹಾಗೆ ಯೋಚಿಸಿಲ್ಲ. ಇದು ಜನತೆಯ ಮೂಲಭೂತ ಹಕ್ಕುಗಳಿಗೆ ಸಂಬಂಧಪಟ್ಟಿರುವ ವಿಷಯವಾಗಿರುವುದರಿಂದ, ಮತ್ತು ಇಂತಹ ಮಹತ್ವದ ಮಸೂದೆಯ ಸಂಬಂಧದಲ್ಲಿ ಇದೇ ಪ್ರಕ್ರಿಯೆಯನ್ನು ಅನುಸರಿಸುವುದು ಸೂಕ್ತ ಎಂದು ತುಂಬಾ ಗಂಭೀರವಾಗಿ ಹಾಗೂ ಶ್ರದ್ಧೆಯಿಂದ ನಿವೇದಿಸುತ್ತೇನೆ. ಪತ್ರಕರ್ತರ ಹಕ್ಕುಗಳ ಬಗ್ಗೆ ನನಗೆ ಚಿಂತೆ ಇಲ್ಲ. ಏಕೆಂದರೆ ಪತ್ರಕರ್ತರ ಹಕ್ಕುಗಳು ಜನರ ಹಕ್ಕುಗಳ ಭಾಗವಾಗಿರುತ್ತದೆ ಅಷ್ಟೇ. ಆದ್ದರಿಂದ ಇಂಥ ಮಸೂದೆ ಪತ್ರಿಕೋದ್ಯಮದ ಬೆಳವಣಿಗೆ ಹಾಗೂ ಸ್ವಾತಂತ್ರ್ಯಕ್ಕೆ ಸಂಬಂಧಪಟ್ಟಿರುವುದರಿಂದ ಆ ವೃತ್ತಿ ನಿರತರೊಂದಿಗೆ ಮೊದಲು ಸಮಾಲೋಚಿಸಬೇಕು. ರಾಜ್ಯದ ವಿವಿಧ ಪತ್ರಕರ್ತರ ಒಕ್ಕೂಟಗಳು ಅಂಗೀಕರಿಸಿದ ಠರಾವುಗಳು ನನಗೆ ಬಲ ನೀಡಿದ್ದು, ನಾನು ಈ ಮೂಲಕ ಮನವಿಮಾಡಿಕೊಳ್ಳುತ್ತೇನೆ. ಈ ಕ್ಷಣದಲ್ಲಿ ಮೈಸೂರು ಒಕ್ಕೂಟ ಹಾಗೂ ಶಿವಮೊಗ್ಗ ಒಕ್ಕೂಟ ಪಾಸು ಮಾಡಿದ ಠರಾವುಗಳ ಪ್ರತಿಗಳು ನನ್ನಲ್ಲಿಲ್ಲ. ಈಗಿನ ಮಸೂದೆಯ ಬಗ್ಗೆ ಅವರ ವಿರೋಧವಿದ್ದರೂ ಅದರ ಬದಲಾಗಿ ಮತ್ತೊಂದು ಹೆಚ್ಚು ವಿಚಾರಪರ ಮಸೂದೆ ಬಂದರೆ ಅವರಿಗೆ ಅಭ್ಯಂತರವಿಲ್ಲ ಎಂದು ನಾನು ಭಾವಿಸುತ್ತೇನೆ. ಇಡೀ ರಾಜ್ಯದ ಪ್ರಾತಿನಿಧಿಕ ಸಂಸ್ಥೆಯಾಗಿರುವ, ರಾವ್ ಸಾಹಿಬ್ ಸಿ ಹಯವದನರಾವ್ ಅಧ್ಯಕ್ಷರಾಗಿರುವ ಬೆಂಗಳೂರು ಪತ್ರಕರ್ತರ ಒಕ್ಕೂಟವು ಅಂಗೀಕರಿಸಿರುವ ಠರಾವಿನಲ್ಲಿ ಪ್ರಸ್ತುತ ಮಸೂದೆಯನ್ನು ಹಿಂತೆಗೆದುಕೊಂಡು ಅದರ ಬದಲಾಗಿ ಸರ್ಕಾರವು ಅಗತ್ಯವೆಂದು ಕಂಡುಬಂದರೆ ಹೆಚ್ಚು ಉದಾರವಾದ ಹಾಗೂ ಪತ್ರಕರ್ತರ ಸಂದರ್ಭ ಮತ್ತು ಅಗತ್ಯಗಳಿಗೆ ಸ್ಪಂದಿಸುವ ಬೇರೊಂದು ಮಸೂದೆಯನ್ನು ಜಾರಿಗೊಳಿಸಬೇಕೆಂದು ಕೇಳಿಕೊಂಡಿದೆ. ಇದು ವೃತ್ತಿನಿರತರ ನಿಲುವಿನ ಸೂಚಕವಾಗಿದ್ದು, ನನ್ನ ಪ್ರಕಾರ ಇದು ಜನತೆಯ ನಿಲುವು ಎಂದು ಸರ್ಕಾರ ಪರಿಗಣಿಸುವುದು ನ್ಯಾಯಯುತ ಹಾಗೂ ಸಮಂಜಸವಾಗಿದ್ದು ಈ ಬಗ್ಗೆ ಕೆಲವು ಕಾಲ ಸರ್ಕಾರ ಸುಮ್ಮನಿರುವುದು ಒಳಿತು. ನಾನು ಒಂದು ಮೆಳ್ಳಗಣ್ಣಿನ ಓರೆ ನಡೆಯ ಪ್ರಾಣಿಯ ಬಗ್ಗೆ ಕೇಳಿದ್ದೇನೆ. ಅದು ಉತ್ತರಕ್ಕೆ ಹೋಗಬೇಕಾದರೆ ಈಶಾನ್ಯದ ಕಡೆಗೆ ಅಥವಾ ವಾಯುವ್ಯದ ಕಡೆಗೆ ಸಾಗುತ್ತದೆ. ಈ ಮಸೂದೆಯು ಕೂಡಾ ಅದನ್ನೇ ಮಾಡುತ್ತಿದೆ. ಅದು ನಿಜವಾಗಿಯೂ ವೃತ್ತ ಪತ್ರಿಕೆಗಳ ಬಗ್ಗೆ ಪ್ರಸ್ತಾಪಿಸಬೇಕು. ಆದರೆ ಇದು ಸಂಪಾದಕನನ್ನು

ಒತ್ತಟ್ಟಿಗಿಟ್ಟು ಮೊದಲು ಮುದ್ರಕ ನಂತರ ಪ್ರಕಾಶಕನ ಬಗ್ಗೆ ಪ್ರಸ್ತಾಪಿಸುತ್ತದೆ. ಸ್ವಾಮಿ ಇದನ್ನು ನಾನು ಆಕ್ಷೇಪಿಸುತ್ತೇನೆ. ನಾನು ಈಗ ಸಂಪಾದಕನಾಗಿಲ್ಲ. ನಾನು ಈಗ ಸಂಪಾದಕನ ಪಳೆಯುಳಿಕೆ ಮಾತ್ರ. ಸಂಪಾದಕರಿಗೆ ತಮ್ಮ ಕೃತ್ಯದ ಪರಿಣಾಮಗಳ ಭಯ ಇಲ್ಲ ಎಂದು ನಾನು ಹೇಳುತ್ತೇನೆ. ಅವರ ಗುಣಾವಗುಣಗಳಿಗನುಗುಣವಾಗಿ ಅವರಿಗೆ ಸಲ್ಲಬೇಕಾದುದನ್ನು ಅವರಿಗೆ ನೇರವಾಗಿ ಕೊಟ್ಟುಬಿಡಿ.

ಈ ಎಲ್ಲ ಕಾರಣಗಳಿಗಾಗಿ ನಾನು ಸಂಪೂರ್ಣವಾಗಿ ಈ ಮಸೂದೆಯನ್ನು ವಿರೋಧಿಸಬೇಕಾಗಿದೆ. ನಾನು ಈ ಮಸೂದೆಯ ಯಾವ ಭಾಗವನ್ನೂ ಇಷ್ಟಪಡುವುದಿಲ್ಲ. ಮಸೂದೆಯ ವಿವರಗಳು ಇಲ್ಲಿ ಅನಗತ್ಯ. ಯಾಕೆಂದರೆ, ಅದು ನನ್ನ ಉದ್ದೇಶಕ್ಕೆ ಅಪ್ರಸ್ತುತ. ಮೂಲಭೂತ ನೆಲೆಯಲ್ಲೇ ಅದು ಗಮನಿಸಲು ಅರ್ಹವಾದದ್ದು ಆಗಿಲ್ಲ. ಆದ್ದರಿಂದ ಅದನ್ನು ಪರಿಶೀಲನೆಗೆ ಕೈಗೆತ್ತಿಕೊಳ್ಳುವುದಾಗಲೀ ಆಯ್ಕೆ ಸಮಿತಿಗೆ ಒಪ್ಪಿಸುವುದಾಗಲೀ ನನಗೆ ಸಮ್ಮತವಿಲ್ಲ. ಸರ್ಕಾರವು ಆದಷ್ಟು ಬೇಗ ಪತ್ರಕರ್ತರು ಹಾಗೂ ಸಾರ್ವಜನಿಕರ ಜೊತೆ ಸಮಾಲೋಚಿಸುವುದು ಲೇಸು ಎಂದು ನಾನು ಸೂಚಿಸುತ್ತೇನೆ. ಸಮಾಲೋಚನಾ ವಿಧಾನ ಅತ್ಯುತ್ತಮ ವಿಧಾನ. ದುಂಡು ಮೇಜಿನ ಪರಿಷತ್ತುಗಳು ವಿಫಲವಾದರೂ ಸಮಾಲೋಚನಾ ವಿಧಾನಕ್ಕೆ ಅದರದೇ ಆದ ಸಾಮರ್ಥ್ಯವಿದೆ ಹಾಗೂ ಸರ್ಕಾರವು, ಈ ಮಸೂದೆಯನ್ನು ಹಿಂದಕ್ಕೆ ಪಡೆಯುವುದು ಒಳ್ಳೆಯದೆನ್ನುವ ಸಲಹೆಯನ್ನು ನೀಡುತ್ತೇನೆ.

ಕೊನೆಯದಾಗಿ, ನಾನು ಶ್ರೀಯುತ ಬೇಲೂರು ಶ್ರೀನಿವಾಸ ಅಯ್ಯಂಗಾರರ ವಾದಗಳನ್ನು ಬೆಂಬಲಿಸುತ್ತೇನೆ. ಇಂಥ ಮಸೂದೆಯನ್ನು ತರಲು ಇದು ತಕ್ಕ ಸಮಯವಲ್ಲ. ನಾವು ಈಗ ಪರಿಷ್ಕರಿಸಲು ಉದ್ದೇಶಿಸಿರುವ 1908ರ ಮಸೂದೆಯು 30 ವರ್ಷಗಳಷ್ಟು ಹಿಂದಿನದು. ಇದು ನನ್ನ ಪತ್ರಿಕೋದ್ಯಮ ವೃತ್ತಿಯಷ್ಟೇ ಹಳೆಯದು. ಆವಾಗ ನಾನು ಹೊಸಬ, ಅನನುಭವಿಯಾಗಿದ್ದೆ. ಈಗ ನನಗೆ ತಲೆ ನೆರೆತಿದೆ ಅನುಭವಮಾಗಿದೆ. ಆದರೆ ಈ ಕಾಯ್ದೆ ಆಗಿನಿಂದಲೂ ಇದ್ದೇ ಇದೆ. ಮತ್ತು ಅದು ಇದ್ದುದರಿಂದಲೇ ಪತ್ರಕರ್ತರು ಹುಚ್ಚರಾಗಲಿಲ್ಲ ಎಂದೇನೂ ಅಲ್ಲ. ಬದಲಾಗಿ ಅವರು ಸಮಚಿತ್ತರು ಅವರು ತಮ್ಮ ಕರ್ತವ್ಯಗಳನ್ನು ಸಮರ್ಪಕವಾಗಿ ಮಾಡಿದರು. ಆದಾಗ್ಯೂ ಇದೊಂದು ಅಪ್ರಧಾನ ಅಭಿಪ್ರಾಯ. ಇದು ಮುಂದಿನ ಆಡಳಿತಗಾರರ ಸಹನೆ ಮತ್ತು ನಿಷ್ಪಕ್ಷಪಾತತೆ ಬಗ್ಗೆ ಸಾಕಷ್ಟು ಸೂಚಿಸುತ್ತದೆ. ವೃತ್ತಪತ್ರಿಕೆಯ ಸಂಪಾದನಾ ಕಾರ್ಯದಲ್ಲಿ ಕ್ರಿಯಾಶೀಲವಾಗಿ ತೊಡಗಿರುವ ಸುಯೋಗ ನನಗೆ ಒದಗಿದ್ದ ಕಾಲದ ರೂಢಿಯನ್ನು ಸಂಕ್ಷಿಪ್ತವಾಗಿ ನೆನಪಿಸಿಕೊಂಡು ನಾನು ಮುಕ್ತಾಯಮಾಡುತ್ತೇನೆ.

ಒಂದಾನೊಂದು ಕಾಲದಲ್ಲಿ ಯುವಕನಾಗಿದ್ದಾಗ, ಯಾವಾಗಲೂ ನಾನು ಶಾಂತತೆ ಮತ್ತು ಸಮಚಿತ್ತತೆಗೆ ಮಾದರಿಯಾಗಿರಲಿಲ್ಲ. ಆ ದಿನಗಳಲ್ಲಿ ಸರ್ ಎಂ ವಿಶ್ವೇಶ್ವರಯ್ಯನವರು ಮೈಸೂರಿನ ದಿವಾನರಾಗಿದ್ದಾಗ, ಆಡಳಿತಕ್ಕೆ ತೊಂದರೆ ಕೊಟ್ಟಿದ್ದು ಹಾಗೂ ಅನಾನುಕೂಲವನ್ನುಂಟು ಮಾಡಿದ್ದೇ ನಾನು ಮಾಡಿದ ದೊಡ್ಡ ಕೆಲಸ. ಆ ದಿನಗಳಲ್ಲಿ ನಾನು ಬಾಲಬ್ರೂಯಿಯಲ್ಲಿ ಚಹ ಕುಡಿಯಬೇಕೆಂದು ಬಯಸಿದರೆ, ನಾನು ನನ್ನ ಸ್ಥಿಮಿತತೆ ಕಳೆದುಕೊಂಡು ಒಂದು ಖಾರವಾದ ಲೇಖನ ಅಥವಾ ಉಗ್ರವಾದ ಪತ್ರ ಬರೆಯುತ್ತಿದ್ದೆ. ಮರುದಿನವೇ ನನಗೆ 'ಬಾಲಬ್ರೂಯಿ' ಯಿಂದ ಚಹಕ್ಕೆ ಆಹ್ವಾನ ಬರುತ್ತಿತ್ತು. ಚಹ ಕುಡಿಯಲು ಆಹ್ವಾನ ಬಂದಾಗ, ನಾನು ನನ್ನ ಸ್ಥಿಮಿತತೆಯನ್ನು ಕಳೆದುಕೊಂಡು, ನನ್ನ ಪೆನ್ನು ನನ್ನ ಹತೋಟಿ ಮೀರಿ ಬರಹಕ್ಕೆ ಇಳಿದದ್ದೇ ಇದಕ್ಕೆ ಕಾರಣ ಎಂದು ಅರಿವಾಗುತ್ತಿತ್ತು.

**ಶ್ರೀಯುತ ಎಸ್.ಪಿ. ರಾಜಗೋಪಾಲಚಾರಿ:** ಇವೆಲ್ಲವೂ ಖಾಸಗಿ ವಿಷಯಗಳಲ್ಲವೇ?

**ಶ್ರೀಯುತ ಡಿ. ವಿ. ಗುಂಡಪ್ಪ:** ಇದು ನನಗೆ ಸಂಬಂಧಿಸಿದ್ದು, ಬೇರೆಯವರಿಗಲ್ಲವಾಗಿರುವುದರಿಂದ ಈ ಘಟನೆಯನ್ನು ನಾನು ಬಹಿರಂಗಪಡಿಸಿದ್ದೇನೆ. ನಾನು ಆಹ್ವಾನ ಸ್ವೀಕರಿಸಿದೆ. ದಿವಾನರು ನನಗೆ ಎಚ್ಚರಿಕೆ ಹೇಳಿದರು "ನಿಮ್ಮ ಮೇಲೆ ರಾಜದ್ರೋಹದ ಆಪಾದನೆಯನ್ನು ಪ್ರಯೋಗಿಸಲು ನನಗೆ ಇಷ್ಟವಿಲ್ಲ. ನಾನು ಈ ಬಗ್ಗೆ ಗಮನವಹಿಸಬೇಕಾದ ಅನಿವಾರ್ಯತೆಯನ್ನು ನೀವು ಒದಗಿಸಬಾರದು". ಹಾಗಿತ್ತು ನಮ್ಮ ಸಂಬಂಧ! ಇದನ್ನು ಪದೇ ಪದೇ ನೆನಪಿಸಿಕೊಳ್ಳುತ್ತಿದ್ದೆ. ತದನಂತರ ಅನೇಕ ವಾರ ನಾನೊಬ್ಬ ಒಳ್ಳೆಯ ಹುಡುಗನಾಗಿದ್ದೆನೆಂಬ ಭರವಸೆಯಿದೆ. ಮಾನ್ಯರೇ, ಇವತ್ತಿನ ಸಂಪಾದಕರನ್ನು ಈ ದೇಶದ ಗಣ್ಯ ವ್ಯಕ್ತಿಯೋರ್ವರ ಗದರುವಿಕೆ, ವಾದ ಮತ್ತು ತರ್ಕಗಳ ಪ್ರಭಾವದಿಂದ ತಿದ್ದಬಹುದಾಗಿದೆ. ಆ ದಿನಗಳು ಇನ್ನೂ ಕಳೆದುಹೋಗಿಲ್ಲ; ಜನ ಇನ್ನೂ ಅಷ್ಟು ಹಾಳಾಗಿಲ್ಲ. ಆದ್ದರಿಂದ ಅದೇ ವಿಧಾನದ ಮೂಲಕ ತಾವು ಪ್ರಯತ್ನಿಸಬಹುದೆಂದು ಪ್ರಾರ್ಥಿಸುತ್ತೇನೆ.

**ಶ್ರೀಯುತ ಕೆ.ಆರ್. ಸುಬ್ಬಣ್ಣಾಚಾರ್:** ಅವರು ನಿಮ್ಮನ್ನು ಕರೆದು ಚಹ ನೀಡಿ ಉಪಚರಿಸಿದರೆ?

**ಶ್ರೀಯುತ ಡಿ. ವಿ. ಗುಂಡಪ್ಪ:** ಹೌದು ಚಹ ನೀಡಿದರು. ವಿಧಾನಮಂಡಲದ ಒಬ್ಬ ಸದಸ್ಯನು ದಿವಾನರ ಜೊತೆ ಚಹ ಕುಡಿಯುವುದಾದರೆ ಪತ್ರಕರ್ತ ಏಕೆ

ಕುಡಿಯಬಾರದು? ಇದರಲ್ಲಿ ಅಪಹಾಸ್ಯ ಮಾಡುವಂಥದೇನೂ ಇಲ್ಲ. ನನ್ನ ಸ್ನೇಹಿತರು ಇದನ್ನು ಅರ್ಥಮಾಡಿಕೊಳ್ಳುತ್ತಾರೆಂದು ಭಾವಿಸುತ್ತೇನೆ.

**ಶ್ರೀಯುತ ಕೆ. ಆರ್ ಸುಬ್ಬಣ್ಣಾಚಾರ್:** ನೀವು ಚಹದ ಪ್ರಭಾವಕ್ಕೊಳಗಾದಂತೆ ನಾನು ಆಗಲಾರೆ.

**ಶ್ರೀಯುತ ಡಿ. ವಿ. ಗುಂಡಪ್ಪ:** ಈ ರೀತಿ ಬೈಯುತ್ತಾರೆಂದು ನಾನು ನನ್ನ ಸ್ನೇಹಿತರ ಬಗ್ಗೆ ಯೋಚಿಸಿಯೇ ಇರಲಿಲ್ಲ. ಆದರೂ ಅವರು ಅಷ್ಟು ಸಮರ್ಥರೆಂದು ಭಾವಿಸುತ್ತೇನೆ.

**ಶ್ರೀಯುತ ಕೆ. ಆರ್ ಸುಬ್ಬಣ್ಣಾಚಾರ್:** ಪ್ರಭಾವಿತರಾದದ್ದನ್ನು ನೀವೇ ಹೇಳಿದ್ದು.

**ಶ್ರೀಯುತ ಡಿ. ವಿ. ಗುಂಡಪ್ಪ:** ಇದು ಚಹಾದ ಪ್ರಭಾವ ಎಂದು ನಾನು ಹೇಳಿಲ್ಲ. ಇದಕ್ಕೆ ಸರ್ ಎಂ ವಿಶ್ವೇಶ್ವರಯ್ಯರಂಥ ವ್ಯಕ್ತಿಯ ತರ್ಕ ಮತ್ತು ಎಚ್ಚರಿಕೆ ಕಾರಣ ಎಂದು ನಾನು ಹೇಳಿದೆ. ಪತ್ರಕರ್ತರು, ಸರ್ ಎಂ ವಿಶ್ವೇಶ್ವರಯ್ಯ ಅವರನ್ನು ಅತ್ಯಂತ ಗೌರವಾನ್ವಿತ ಗಣ್ಯವ್ಯಕ್ತಿ ಎಂದು ಆದರಿಸಿದರು. ಅವರ ಕಾರ್ಯಕ್ರಮಗಳು, ಆದರ್ಶಗಳ ಬಗ್ಗೆ ದೇಶದ ಅಭಿಪ್ರಾಯ ಏನೇ ಇದ್ದರೂ ಅವರ ನಿಷ್ಠೆ, ಪ್ರಾಂಜಲ ಉದ್ದೇಶ, ದೂರದರ್ಶಿತ್ವ, ಪರಿಶುದ್ಧ ಚಾರಿತ್ರ್ಯ ಪ್ರಶ್ನಾತೀತವೇ ಸರಿ. ಈ ದೇಶದ ಸಾರ್ವಜನಿಕ ಬದುಕಿನಲ್ಲಿ ಕಂಡು ಬರುವ ಕೊರತೆಯೇ ವೃತ್ತಪತ್ರಿಕೆಗಳಲ್ಲೂ ಕಂಡು ಬರುತ್ತದೆ. ಅವೆಂದರೆ ಉತ್ತಮ ಗುಣಮಟ್ಟದ ಘನತೆ, ಉನ್ನತಿಕೆ ಹಾಗೂ ಸಾರ್ವಜನಿಕ ಬದುಕಿನ ಉತ್ಕರ್ಷ. ಈ ಮೂರು ಒಂದು ಪಕ್ಷದ ಪ್ರಯತ್ನದಿಂದಲ್ಲ, ಮೂರು ಪಕ್ಷದವರ ಎಂದರೆ ಮೊದಲನೆವಾಗಿ ಸರ್ಕಾರ, ಎರಡನೆಯದಾಗಿ ಇಲ್ಲಿರುವ ಗಣ್ಯರ ಹಾಗೂ ಮೂರನೆಯದಾಗಿ ಪತ್ರಿಕೋದ್ಯಮಿಗಳ ಪ್ರಯತ್ನದಿಂದ ಸಾಧ್ಯವಾಗುತ್ತದೆ. ದಿನಪತ್ರಿಕೆಗಳಲ್ಲಿ ಘನತೆ ಮತ್ತು ಉತ್ತಮಿಕೆ ಇರಲೇಬೇಕಾಗುತ್ತದೆ. ಆದರೆ ಈ ಘನತೆ ಮತ್ತು ಉತ್ತಮಿಕೆ ನಮ್ಮ ಸಾರ್ವಜನಿಕ ಬದುಕಿನಲ್ಲಿದೆಯೇ? ಈ ದಿಸೆಯಲ್ಲಿ ಸರ್ಕಾರ ಏನನ್ನಾದರೂ ಮಾಡಿದೆಯೇ? ನಿಮ್ಮ ಹೇಳಿಕೆಗಳಲ್ಲಿ ತೋರ್ಪಡಿಸುವ ಘನತೆ ಮತ್ತು ಉತ್ತಮಿಕೆಗಳ ಪ್ರಮಾಣಾನುಸಾರ ದಿನಪತ್ರಿಕೆಗಳಲ್ಲಿ ಘನತೆ ವ್ಯಕ್ತವಾಗುತ್ತದೆ.

ಪತ್ರಕರ್ತರನ್ನು ವಿಶ್ವಾಸಕ್ಕೆ ತೆಗೆದುಕೊಂಡು, ಅವರ ಬೆಂಬಲವಿರುವಂಥ ಮಸೂದೆ ತನ್ನಿ ಎಂದು ಕೇಳಿಕೊಳ್ಳುತ್ತೇನೆ. ಹಾಗಾದಾಗ ನಾನೂ ಅದನ್ನು ಬೆಂಬಲಿಸಲು ಸಿದ್ಧ.

(ಅಂತಿಮವಾಗಿ ಮಸೂದೆಯು ಪರಿಶೀಲನಾ ಸಮಿತಿಗೆ ಒಪ್ಪಿಸಲ್ಪಟ್ಟಿತು).

**ಎ) ಪರಿಶೀಲನಾ ಸಮಿತಿಯ ವರದಿ ಮತ್ತು ಆ ಸಮಿತಿ ತಿದ್ದುಪಡಿ ಮಾಡಿದ ಮಸೂದೆಯನ್ನು ಪರಿಗಣನೆಗೆ ತೆಗೆದುಕೊಳ್ಳಲು ಗೊತ್ತುವಳಿ ಮಂಡನೆ.**

**ಪ್ರಥಮ ಸದಸ್ಯರು (ರಾಜಮಂತ್ರಿ ಪ್ರವೀಣ ಎನ್. ಮಾಧವರಾವ್):** ಬ್ರಿಟಿಷ್ ಭಾರತದ ಶಾಸನಕ್ಕಿಂತ ಈ ಮಸೂದೆ ಹೆಚ್ಚು ತೀಕ್ಷ್ಣವಾಗಿದೆ ಎಂದು ಈ ಮಸೂದೆಯ ಬಗ್ಗೆ ಸಾರ್ವಜನಿಕ ಅಭಿಪ್ರಾಯ ವ್ಯಕ್ತವಾಗಿರುವುದನ್ನು ನಾನು ತಿಳಿಸಬಯಸುತ್ತೇನೆ. ಮಸೂದೆಯಲ್ಲಿರುವ ಅಂಶಗಳ ತಪ್ಪು ಗ್ರಹಿಕೆ ಅಥವಾ ತಪ್ಪು ನಿರೂಪಣೆಯಿಂದ ಇಂಥ ಟೀಕೆಗೆ ಅವಕಾಶವಾಗಿರುತ್ತದೆ. ಮಸೂದೆಯ ಮಂಡನೆಯಾದಾಗ ಈ ಪರಿಷತ್ತಿನಲ್ಲಿ ನಡೆದ ಚರ್ಚೆಯಲ್ಲಿ ನಾವು ಬ್ರಿಟಿಷ್ ಭಾರತದ ಶಾಸನದ ಉಪಬಂಧಗಳನ್ನು ಯಥಾವತ್ತಾಗಿ ನಿರೂಪಿಸಿದೆವು ಎಂದು ಎಲ್ಲರೂ ಪರಿಗಣಿಸಿದರು. 3 ನೇ ಖಂಡಕ್ಕೆ ಸಂವಾದಿಯಾದ ಖಂಡವು ಆ ಶಾಸನದಲ್ಲಿ ಇರಲಿಲ್ಲವೆಂಬ ಕಾರಣಕ್ಕಾಗಿ ಅದನ್ನು ತೆಗೆದುಹಾಕಬೇಕೆಂದು ತಿಳಿಸಲಾಯಿತು. ಇದನ್ನು ಮಾಡಲಾಗಿದೆ. ಏನೇ ಆದರೂ, ಪರಿಶೀಲನಾ ಸಮಿತಿಯಿಂದ ಬಂದಿರುವ ಈ ಮಸೂದೆಯ ಉಪಬಂಧಗಳು ಬ್ರಿಟಿಷ್ ಭಾರತದ ಕಾಯಿದೆಯಷ್ಟು ಕಟುವಾಗಿಲ್ಲ. ಈ ಮಸೂದೆಯು ಬ್ರಿಟಿಷ್ ಭಾರತ ಕಾಯಿದೆಯ ಉಪಬಂಧಗಳನ್ನು ಮೀರುತ್ತದೆ ಹಾಗೂ ಅದಕ್ಕಿಂತಲೂ ಹೆಚ್ಚು ತೀವ್ರವಾಗಿರುತ್ತದೆ ಎಂದು ಯಾರಿಗಾದರೂ ಅನ್ನಿಸುತ್ತದೆನ್ನುವುದು ನಮ್ಮ ತಿಳುವಳಿಕೆಯನ್ನ ಮೀರಿದ ಸಂಗತಿಯಾಗಿದೆ. ಪರಿಷತ್ತು ಈ ಮಸೂದೆಯ ಹಿನ್ನೆಲೆಯಲ್ಲಿರುವ ತತ್ವಗಳನ್ನು ಅಂಗೀಕರಿಸಿದೆ ಹಾಗೂ ಪರಿಶೀಲನಾ ಸಮಿತಿಯು ಅದರ ಉಪಬಂಧಗಳನ್ನು ಅತ್ಯಂತ ಸೂಕ್ಷ್ಮವಾಗಿ ಪರಿಶೀಲಿಸಿದೆ. ಸಮಿತಿಯು ಸೂಚಿಸಿದಂಥ ಹಾಗೂ ಕೆಲವು ಲೋಪಗಳನ್ನು ಸರಿಪಡಿಸಲು ಉದ್ದೇಶಿಸಿ ನೀಡಿದ ಒಂದು ಅಥವಾ ಎರಡು ಶಾಬ್ದಿಕ ತಿದ್ದುಪಡಿಗಳನ್ನು ಶೀಘ್ರದಲ್ಲಿ ಮಂಡಿಸಲಾಗುವುದು.

ಪರಿಷತ್ತು ವರದಿಯನ್ನು ಪರಿಗಣನೆಗೆ ತೆಗೆದುಕೊಳ್ಳಬೇಕೆಂದು ವಿನಂತಿಸುತ್ತೇನೆ.

**ಸರ್ಕಾರದ ಮುಖ್ಯ ಕಾರ್ಯದರ್ಶಿ [ರಾಜಸೇವಾ ಪ್ರಸಕ್ತ ಬಿ ಟಿ ಕೇಶವಯ್ಯಂಗಾರ್]:** ಸ್ವಾಮಿ ನಾನು ನಿಲುವಳಿಯನ್ನು ಅನುಮೋದಿಸುತ್ತೇನೆ.

**ಶ್ರೀಯುತ ಡಿ. ವಿ. ಗುಂಡಪ್ಪ:** ಸ್ವಾಮಿ ನನ್ನ ಮನಸ್ಸಿನ ಪ್ರಾಮಾಣಿಕತೆ ಹಾಗೂ ಆತ್ಮಸಾಕ್ಷಿಯು ಪದೇ ಪದೇ ಹೀಗೆ ಮಾಡಬೇಕೆಂದು ಸೂಚಿಸಿದ್ದರಿಂದ ಈ ಮಸೂದೆಯನ್ನು ವಿರೋಧಿಸಿ ಪ್ರತಿಭಟಿಸುತ್ತೇನೆ. ಇದು ಸಂಪೂರ್ಣವಾಗಿ

ಪ್ರಜಾಪ್ರಭುತ್ವ ವಿರೋಧಿ ಮಸೂದೆ. ಇದು ನಾಗರಿಕತ್ವದ ಮುಕ್ತ ಚಲಾವಣೆಯನ್ನು ನಿರ್ಬಂಧಿಸುತ್ತದೆ. ಇದೆಲ್ಲಕ್ಕಿಂತ ಹೀನಾಯವೆಂದರೆ ಸರ್ಕಾರವು ನಿಗ್ರಹಿಸಲು ಇಚ್ಚಿಸುವ ಅನೇಕ ಶಕ್ತಿಗಳನ್ನು ಇದು ಹುಟ್ಟು ಹಾಕುವುದು ಖಂಡಿತ. ಸರ್ಕಾರವು ದೇಶದಲ್ಲಿ ಯಾವ ಶಕ್ತಿಗಳನ್ನು ಬಲಪಡಿಸಲು ಇಚ್ಚಿಸುತ್ತದೆಯೋ ಅದಕ್ಕೆ ತದ್ವಿರುದ್ಧವಾದ ಶಕ್ತಿಗಳನ್ನು ಈ ಮಸೂದೆಯು ಉದ್ದೀಪನಗೊಳಿಸುತ್ತದೆ. ಶಾಂತಿ, ಸಾಮರಸ್ಯ ಮತ್ತು ವಿಶ್ವಾಸವನ್ನು ಬೆಳೆಸುವುದು ಸರ್ಕಾರದ ಗುರಿಯಾಗಿರುತ್ತದೆ ಎಂಬುದರಲ್ಲಿ ನನಗೆ ಸಂಶಯವೇ ಇಲ್ಲ. ಆದರೆ ಈ ಮಸೂದೆಯನ್ನು ಅಂಗೀಕರಿಸುವುದರ ಪರಿಣಾಮವಾಗಿ ಸಾರ್ವಜನಿಕರ ಮನಸ್ಸಿನಲ್ಲಿ ದ್ವೇಷ, ವ್ಯಗ್ರತೆ ಉಂಟಾಗಿ ಅವ್ಯವಸ್ಥೆ ಬೆಳೆಯುತ್ತದೆಂಬುದು ಖಚಿತ.

**ಅಧ್ಯಕ್ಷರು:** ಸಾಮಾನ್ಯ ತತ್ವಗಳ ಬಗೆಗಿನ ಚರ್ಚೆಯ ಹಂತವು ಮುಗಿದಿದೆ ಎಂದು ನಾನು ನಂಬುತ್ತೇನೆ. ಪರಿಷತ್ತಿನ ಕಳೆದ ಸಭೆಯಲ್ಲಿ ಆ ತತ್ವಗಳ ಬಗ್ಗೆ ದೀರ್ಘವಾಗಿ ಚರ್ಚಿಸಲಾಗಿತ್ತು. ಈ ಹಂತದಲ್ಲಿ ಚರ್ಚೆಯನ್ನು ಪುನಃ ಅದೇ ಆಧಾರದ ಮೇಲೆ ನಡೆಸುವುದು ಸಂಪೂರ್ಣವಾಗಿ ಅನಗತ್ಯ.

**ಶ್ರೀಯುತ ಡಿ. ವಿ. ಗುಂಡಪ್ಪ:** ಈ ಮಸೂದೆಯನ್ನು ಯಥಾವತ್ತಾಗಿ ತಿರಸ್ಕರಿಸುವಂತೆ ಈ ಸದನದ ಮನವೊಲಿಸುವ ದೃಷ್ಟಿಯಿಂದ, ಮತ್ತು ಈ ಕಾನೂನು ಕ್ರಮವನ್ನು ಹಿಂತೆಗೆದುಕೊಂಡು ಸ್ವಲ್ಪ ಸಮಯವಾದರೂ ಸುಮ್ಮನೆ ಇರುವಂತೆ ನಿಮ್ಮ ಮತ್ತು ಸರ್ಕಾರದ ಇತರ ಸದಸ್ಯರ ಮನವೊಲಿಸುವ ದೃಷ್ಟಿಯಿಂದ, ಇಡೀ ಮಸೂದೆಗೆ ನನ್ನ ಒಟ್ಟಾರೆ ವಿರೋಧವನ್ನು ಮತ್ತು ಈ ಮಸೂದೆಯಲ್ಲಿ ಒಳಗೊಂಡಿರುವ ಪ್ರತಿಯೊಂದು ನಿರ್ದಿಷ್ಟ ತತ್ವಕ್ಕೆ ನನ್ನ ನಿರ್ದಿಷ್ಟ ವಿರೋಧವನ್ನು ವ್ಯಕ್ತಪಡಿಸಲು ನನಗೆ ಅವಕಾಶ ಕೊಡಬೇಕೆಂದು ನಾನು ಕೋರಿಕೊಳ್ಳುತ್ತೇನೆ. ಇದೇ ನನ್ನ ಉದ್ದೇಶ. ಮಸೂದೆಯ ವಿವರಗಳ ಬಗ್ಗೆ ದೀರ್ಘ ವಿವರಣೆ ಕೊಡುವುದಿಲ್ಲ.

ಪ್ರಾಜ್ಞ ಸೂಚಕರು, ತಮ್ಮ ಹೇಳಿಕೆಯ ಸಂದರ್ಭದಲ್ಲಿ, ಈಗ ತಾನೇ ಪರಿಶೀಲನಾ ಸಮಿತಿಯಿಂದ ಹೊರಬಿದ್ದಿರುವಂತಹ ಹಾಗೂ 1908ರ ಅಧಿನಿಯಮದ ಬದಲಿಗೆ ಮಂಡಿಸಲು ಉದ್ದೇಶಿಸಿರುವ ಈ ಮಸೂದೆಯು 1908ರ ಅಧಿನಿಯಮದಷ್ಟು ಕಟುವಾದುದಾಗಿಲ್ಲ ಎಂದು ತಿಳಿಸಿದ್ದಾರೆ. ಸ್ವಾಮಿ, ಕೆಲವು ವರ್ಷಗಳ ಹಿಂದೆ ಈ ಸದನದಲ್ಲಿ 1908ರ ಅಧಿನಿಯಮವನ್ನು ಸಂಪೂರ್ಣವಾಗಿ ರದ್ದುಪಡಿಸುವಂತೆ ಕೋರಿ ಒಂದು ಠರಾವನ್ನು ಮಂಡಿಸಲು ನನಗೆ ವಿಶೇಷವಾದ ಅವಕಾಶ ದೊರೆತ ಸಂದರ್ಭದಲ್ಲಿ ಸರ್ಕಾರದ ಸದಸ್ಯರು ಹಾಗೂ ಆ ಠರಾವಿನ ಪರವಾದ ಪ್ರತಿನಿಧಿಗಳ

ನಡುವೆ ಮಾತುಕತೆ ನಡೆದು ಆ ಹಳೆಯ ಕಾಯ್ದೆಯನ್ನು ರದ್ದುಪಡಿಸಬೇಕೆಂದು ಹಾಗೂ ರಾಜ್ಯದಲ್ಲಿನ ಕೆಲವು ಗಣ್ಯ ವ್ಯಕ್ತಿಗಳ ವರ್ಗಕ್ಕೆ ನಿರ್ದಿಷ್ಟವಾಗಿ ರಕ್ಷಣೆ ಕೊಡುವ ಒಂದು ಕಾಯ್ದೆಯನ್ನು ಅದರ ಸ್ಥಾನದಲ್ಲಿ ತರಬೇಕೆಂದು ಒಪ್ಪಿಕೊಳ್ಳಲಾಗಿತ್ತು. ಇದಿಷ್ಟೇ ಆಗ ನಮ್ಮ ನಡುವೆ ನಡೆದ ಒಪ್ಪಂದವಾಗಿತ್ತು. ಆ ಸಭೆಯ ನಡವಳಿಗಳ ಬಗ್ಗೆ ನಾನು ಸದನದ ಗಮನವನ್ನು ಸೆಳೆಯಬಯಸುತ್ತೇನೆ. ಆ ಸಮಯದಲ್ಲಿ ಸದಸ್ಯರಾದ ಶ್ರೀಯುತ ಕೆ. ಚಾಂದಿಯವರು ಈ ವಿಷಯಕ್ಕೆ ಸಂಬಂಧಪಟ್ಟವರಾಗಿದ್ದರು. ಸದನವು ಕೆಲವು ಗಣ್ಯವ್ಯಕ್ತಿಗಳ ವರ್ಗಗಳಿಗೆ ಅಗತ್ಯವಿರುವ ರಕ್ಷಣೆಯ ಬಗ್ಗೆ ಕೆಲವು ಕ್ರಮಗಳನ್ನು ತರುವ ಹೊಸ ಕಾಯ್ದೆಯನ್ನು ಶಾಸನ ರೂಪದಲ್ಲಿ ತರಲು ಒಪ್ಪಿಕೊಂಡದ್ದಲ್ಲದೆ, ಹಳೆಯ ಕಾಯ್ದೆಯನ್ನು ನಿರಸನಗೊಳಿಸಬೇಕೆಂದೂ ಒಪ್ಪಿಕೊಳ್ಳಲಾಗಿತ್ತು. ಅಧಿಕಾರೇತರ ವರ್ಗದವರು ಸರ್ವಸಮ್ಮತವಾಗಿ ಇಂತಹ ರಕ್ಷಣೆಯನ್ನು ನೀಡುವುದನ್ನು ಮತ್ತು ಇಂತಹ ರಕ್ಷಣೆಯ ಬಗೆಗಿನ ಕೋರಿಕೆಯು ನ್ಯಾಯಸಮ್ಮತವೆಂದು ಒಪ್ಪಿಕೊಂಡಿದ್ದರು. ಇದಿಷ್ಟೇ ಹಳೆಯ ಒಪ್ಪಂದ. ಆದರೆ ಈ ಮಸೂದೆಯು ಆ ಒಪ್ಪಂದಕ್ಕಿಂತ ತುಂಬ ವ್ಯಾಪ್ತಿಯನ್ನು ಹೊಂದಿದೆ.

**ಶ್ರೀಯುತ ಸಭಾಧ್ಯಕ್ಷರು:** ಕ್ರಮದ ಬಗೆಗಿನ ಸಾಮಾನ್ಯ ತತ್ವಗಳ ಬಗ್ಗೆ ಸದಸ್ಯರು ಪುನಃ ಚರ್ಚಿಸುತ್ತಿದ್ದಾರೇನೋ ಎನುವುದನ್ನು ನನ್ನ ಭಯವಾಗಿದೆ.

**ಶ್ರೀಯುತ ಡಿ. ವಿ. ಗುಂಡಪ್ಪ:** ನನ್ನನ್ನು 'ಹೌದು' ಅಥವಾ 'ಇಲ್ಲ' ಎಂದು ಹೇಳಿ ಸುಮ್ಮನೆ ಕುಳಿತುಕೋ ಎಂದು ತಿಳಿಸಿದರೆ ನನಗೆ ಏನನ್ನೂ ಹೇಳಲಾಗುವುದಿಲ್ಲ. ಆದರೆ ನಾನು ಸಮಗ್ರ ನೆಲೆಯನ್ನು ಕುರಿತು ಮಾತನಾಡಲು ಹಾಗೂ ಸರ್ಕಾರವು ಗಮನದಲ್ಲಿ ಇಟ್ಟುಕೊಂಡಿರುವ ಉದ್ದೇಶಗಳನ್ನು ಈಡೇರಿಸುವುದಕ್ಕೆ ಬದಲಾಗಿ ಆ ಉದ್ದೇಶಗಳನ್ನು ಈ ಮಸೂದೆಯು ಹೇಗೆ ವಿಫಲಗೊಳಿಸುತ್ತದೆ ಎಂಬುದನ್ನು ಮತ್ತು ಸರ್ಕಾರವು ಹೊಂದಿರುವ ಉದ್ದೇಶಗಳಿಗೆ ಪ್ರತಿಕೂಲವಾದ ಶಕ್ತಿಗಳನ್ನು ಯಾವ ರೀತಿ ಸೃಷ್ಟಿಸುತ್ತದೆ ಎಂಬುದನ್ನು ಸೂಚಿಸಲು ನನಗೆ ಅಧಿಕಾರವಿದೆಯೆಂದು ಭಾವಿಸುತ್ತೇನೆ. ಆದುದರಿಂದ ನನಗೆ ವಿಶೇಷವಾದ ಅನುಗ್ರಹವನ್ನು ತೋರಿ ಈ ಕ್ರಮದ ಕೆಲವು ವಿವರಣೆಗಳನ್ನು ತಿಳಿಸಲು ಸಮ್ಮತಿಯನ್ನು ನೀಡಬೇಕೆಂದು ತಮ್ಮಲ್ಲಿ ಕೋರುತ್ತೇನೆ.

ಸ್ವಾಮಿ, ಪರಿಶೀಲನಾ ಸಮಿತಿಯು ತನ್ನ ಕಾರ್ಯವನ್ನು ಸಮರ್ಥತೆಯಿಂದ ಅಥವಾ ಜಾಗರೂಕತೆಯಿಂದ ನಿಭಾಯಿಸಿಲ್ಲವೆಂಬ ಅಂಶವನ್ನು ತಿಳಿಸಲು ನನಗೆ ವಿಷಾದವೆನಿಸುತ್ತದೆ.

**ಶ್ರೀಯುತ ಕೆ. ಆರ್. ಸುಬ್ಬಣ್ಣಾಚಾರ್:** ಈ ಟೀಕೆಗೆ ಸಂಬಂಧಿಸಿದಂತೆ ನಾನು ತೀವ್ರತರವಾದ ಆಕ್ಷೇಪಣೆಯನ್ನು ಮಾಡ ಬಯಸುತ್ತೇನೆ.

**ಶ್ರೀಯುತ ಡಿ. ವಿ. ಗುಂಡಪ್ಪ:** ಸಮಯ ಬಂದಾಗ ನನ್ನ ಗೌರವಾನ್ವಿತ ಸ್ನೇಹಿತರು ನನ್ನ ಟೀಕೆಗಳನ್ನು ಖಂಡಿಸಲಿ.

ಮೊದಲು ನಾನು ಶಾಸನದ ಕರಡಿನಲ್ಲಿರುವ ಕೆಲವು ನ್ಯೂನತೆಗಳ ಕುರಿತು ಉಲ್ಲೇಖಿಸಬೇಕಾಗಿದೆ. ಹೊಸ ಪ್ರಸ್ತಾವನೆಯಲ್ಲಿ "ವೃತ್ತ ಪತ್ರಿಕೆಗಳ ಪ್ರಕಟಣೆಯ ಮೇಲೆ ಉತ್ತಮ ಹಿಡಿತವನ್ನು ಸಾಧಿಸಲು ಅವಕಾಶ ಕಲ್ಪಿಸಿ ಕಾನೂನನ್ನು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ........." ಎಂದು ಹೇಳಲಾಗಿದೆ. ಈಗಾಗಲೇ ವೃತ್ತ ಪತ್ರಿಕೆಗಳ ಮೇಲೆ ಉತ್ತಮ ಹಿಡಿತ ಸಾಧಿಸುವುದಕ್ಕೆ ಅವಕಾಶ ಕಲ್ಪಿಸಿರುವ ಕಾನೂನನ್ನು ತಾವು ತಿದ್ದುಪಡಿ ಮಾಡುತ್ತಿರುವಿರೇ? ಇಲ್ಲಿ ನಾನು ಒಂದು ವ್ಯಾಕರಣಾಂಶವನ್ನು ಉದ್ಧರಿಸುತ್ತಿದ್ದೇನೆ. "ವೃತ್ತ ಪತ್ರಿಕೆಗಳ ಪ್ರಕಟಣೆಯ ಮೇಲೆ ಉತ್ತಮ ಹಿಡಿತ ಸಾಧಿಸಲು ಅವಕಾಶ ಕಲ್ಪಿಸುವ ಎಂಬ ಪದ ಸಮುಚ್ಚಯ ಪ್ರಯೋಗವು ಒಂದು ಗುಣವಾಚಕ ಖಂಡವಾಗಿದ್ದು, ಈಗಾಗಲೇ ಜಾರಿಯಲ್ಲಿರುವ ಕಾನೂನಿನ ಸ್ವರೂಪವನ್ನು ವಿವರಿಸಲು ಬಯಸುತ್ತದೆ. ವೃತ್ತಪತ್ರಿಕೆಗಳ ಪ್ರಕಟಣೆಗಳ ಮೇಲೆ ಉತ್ತಮ ಹಿಡಿತ ಸಾಧಿಸಲು ಇರುವ ಕಾನೂನು ಈಗಾಗಲೇ ಅಂಥ ಅವಕಾಶ ಕೆಲಸ ಮಾಡುತ್ತಿದ್ದರೆ ಕಲ್ಪಿಸಿದ್ದರೆ ಇದನ್ನು ತಿದ್ದುಪಡಿ ಮಾಡುವುದರಿಂದ ಉಂಟಾಗುವ ಪರಿಣಾಮವೇನು? ಇದೇನಾದರೂ ಕೆಟ್ಟ ಹಿಡಿತವನ್ನು ಉಂಟು ಮಾಡುತ್ತದೆಯೋ? ನಿಮ್ಮ ಉದ್ದೇಶ ಇದೇ ಏನು? ಇದು ಎಚ್ಚರಿಕೆಯಿಂದ ಸಿದ್ಧಪಡಿಸಿರುವ ಕರಡೇನು ಎಂದು ನಾನು ಕೇಳಬೇಕಾಗುತ್ತದೆ.

ಈಗ ನಾನು ಹೊಸ ಖಂಡ 4ರ ಉಪ ಪ್ರಕರಣ (3)ನ್ನು ಉಲ್ಲೇಖಿಸುತ್ತೇನೆ. ಅದರಲ್ಲಿ ಹೀಗಿದೆ: " ——————Government may, by notice in writing to the keeper of the press stating or describing such words, signs or visible representations which in its opinion are of the nature mentioned above————————". "such" ಎಂಬ ನಿರುಪಣಾತ್ಮಕ ಗುಣವಾಚಕದೊಡನೆ "which" ಎಂಬುದು ಹೊಂದುತ್ತದೆಯೇ ಎಂಬುದನ್ನು ನಾನು ತಿಳಿಯಬಯಸುತ್ತೇನೆ. ಇದು ಪುನಃ ವ್ಯಾಕರಣಾಂಶವಾಗುತ್ತದೆ. ಮತ್ತೇ ಶಾಸನದ ಪುನಾರಚನೆ ವ್ಯಾಕರಣಬದ್ಧವಾಗಿರುತ್ತದೆಂದು ನಾನು ನಿರೀಕ್ಷಿಸಿದ್ದೆ. ಕೆಲ ಕಾಲದ ಹಿಂದೆ ಮೈಸೂರು ಸಚಿವಾಲಯವು ಉತ್ತಮ ಇಂಗ್ಲಿಷ್‌ನ್ನು ಬಳಸಿದ ಹೆಮ್ಮೆಯನ್ನು ತನ್ನದಾಗಿಸಿಕೊಂಡಿತ್ತು.

ಇಲ್ಲಿ ಅರ್ಧ ಡಜನ್‌ನಷ್ಟು ವಾಕ್ಯಾಂಶಗಳು ಈ ರೀತಿಯಾಗಿ ಅಸಮಂಜಸವಾಗಿದೆಯೆಂದು ನಾನು ತಿಳಿಸಬಯಸುತ್ತೇನೆ. ಉದಾಹರಣೆಗೆ ಹೊಸ, ಪ್ರಕರಣ 18ನ್ನು ಉದ್ಧರಿಸುತ್ತೇನೆ ಇದು ಹೇಳುವುದೆಂದರೆ:-

" ——————— ಯಾವುದೇ ಅನಧಿಕೃತ ಸುದ್ದಿ ಹಾಳೆ ಅಥವಾ ವೃತ್ತ ಪತ್ರಿಕೆಯನ್ನು ಎಲ್ಲಿಯೇ ಆಗಲಿ ರಚಿಸಿದರೆ, ಮಾರಿದರೆ, ಹಂಚಿದರೆ, ಪ್ರಕಟಿಸಿದರೆ ಅಥವಾ ಸಾರ್ವಜನಿಕವಾಗಿ ಪ್ರದರ್ಶಿಸಿದರೆ ಅಥವಾ ಮಾರಾಟಕ್ಕೆ ಹಂಚಿಕೆ ಅಥವಾ ಪ್ರಕಟಣೆಗೆ ಇಟ್ಟರೆ, ಕಾರಾಗೃಹವಾಸ ಶಿಕ್ಷೆಗೆ ಒಳಪಡುತ್ತಾರೆ".

" ಅನಧಿಕೃತ" ಪದವು " ವೃತ್ತ ಪತ್ರಿಕೆ"ಗಳಿಗೂ ಸಹ ಅನ್ವಯಿಸುತ್ತದೆಯೇ? ಗುಣವಾಚಕವನ್ನು ಪುನರಾವರ್ತಿಸಿ " ಅನಧಿಕೃತ ಸುದ್ದಿ ಹಾಳೆ ಅಥವಾ ಅನಧಿಕೃತ ವೃತ್ತ ಪತ್ರಿಕೆ" ಎಂದು ಏಕೆ ಹೇಳಬಾರದು? ಯಾವುದರಿಂದ ಈ ಅಭಿವ್ಯಕ್ತಿಯಲ್ಲಿನ ಭಿನ್ನತೆ ಉಂಟಾಗಿದೆ? ಸ್ವಾಮಿ, ಶಾಸನದ ಕರಡು ದೋಷಪೂರಿತವಾಗಿದೆ.

ಸ್ವಾಮಿ, ನನಗೆ ಕೆಲವು ಸಂಶಯಗಳಿವೆ. ಪ್ರಸ್ತುತದಲ್ಲಿನ ಖಂಡ-3, ಮುದ್ರಣಾಲಯವನ್ನು ಜಿಲ್ಲಾ ದಂಡಾಧಿಕಾರಿಗಳ ಬಳಿಗೆ ಹೋಗಿ ಘೋಷಣೆಯನ್ನು ಮಾಡುವ ಅಗತ್ಯವಿದೆಯೆಂದು ಹೇಳುತ್ತದೆ. ಪ್ರಸಕ್ತ ಮಸೂದೆಯು ಹಳೆಯ ಅಧಿನಿಯಮ 1867 ರ XXVರ ಬದಲಿಗೆ ಜಾರಿಯಾಗುತ್ತದೆ ಮತ್ತು ಇದನ್ನು ಅಂಗೀಕಾರ ಮಾಡುವಾಗ ಸ್ಪಷ್ಟವಾಗಿ ವಿವರಿಸಲಾಗಿಲ್ಲವೆಂದು ನಾನು ಹೇಳುತ್ತೇನೆ. ಹಳೆಯ ಅಧಿನಿಯಮವನ್ನು ಪರಿಶೀಲಿಸಲು ನಾನು ಮಾನ್ಯ ಸೂಚಕರನ್ನು ಗೌರವಪೂರ್ವಕವಾಗಿ ಕೇಳಿಕೊಳ್ಳುತ್ತಿದ್ದೇನೆ. ಮುದ್ರಣಾಲಯವನ್ನು ಸ್ಥಳೀಯ ಅಧಿಕಾರ ವ್ಯಾಪ್ತಿಯಲ್ಲಿ ಬರುವ ದಂಡಾಧಿಕಾರಿಗಳ ಸಮಕ್ಷಮ ಘೋಷಣೆ ಮಾಡುವುದು ಅಗತ್ಯವಾಗಿದೆ. ಪ್ರಸ್ತುತದಲ್ಲಿ ನೂರಾರು ಮುದ್ರಣಾಲಯಗಳು ಕಾರ್ಯನಿರ್ವಹಿಸುತ್ತಿವೆ. ಅವುಗಳ ಬಗ್ಗೆ ಈ ಅಧಿನಿಯಮದ ನಿಲುವು ಏನು? ಹೊಸ ಕಾನೂನುಕ್ರಮದ ಅಡಿಯಲ್ಲಿ ಹೊಸ ಘೋಷಣೆಗಳನ್ನು ಅವರು ಮಾಡಬೇಕೆ? ಇದರ ಸ್ಪಷ್ಟೀಕರಣ ಎಲ್ಲಿಯೂ ದೊರೆಯುವುದಿಲ್ಲ. ಪ್ರಸ್ತುತದಲ್ಲಿ, ಹೊಸ ಮಸೂದೆಯ ಒಂದು ನಿರ್ದಿಷ್ಟ ಖಂಡದಲ್ಲಿ ಅಂದರೆ, ಖಂಡ 30ರಲ್ಲಿ ಮೈಸೂರಿನಲ್ಲಿ ರೂಢಿಯಲ್ಲಿರುವಂತೆ, ಪತ್ರಿಕಾಲಯ ಮತ್ತು ಪುಸ್ತಕಗಳ ನೋಂದಣಿ ಅಧಿನಿಯಮ, 1907ರ ಪ್ರಕರಣ 4, 5 ಮತ್ತು 8ರ ಅಡಿಯಲ್ಲಿ ಅಗತ್ಯವಿರುವ ಎಲ್ಲ ಘೋಷಣೆಗಳನ್ನು ಜಿಲ್ಲಾ ನ್ಯಾಯಾಧೀಶರ ಸಮ್ಮುಖದಲ್ಲಿ ಮಾಡತಕ್ಕದ್ದು. ಈಗಿರುವ ಕಾಯ್ದೆಯು ಅಂಥ ಘೋಷಣೆಯನ್ನು ಬೆಂಗಳೂರು ನಗರ ದಂಡಾಧಿಕಾರಿಗಳ ಮುಂದೆ ಮಾಡುವಂತೆ

ಅಗತ್ಯಪಡಿಸುತ್ತದೆ. ಆದರೆ ಹೊಸ ಕಾನೂನು ಕ್ರಮವು ಜಿಲ್ಲಾ ದಂಡಾಧಿಕಾರಿಗಳ ಸಮ್ಮುಖದಲ್ಲಿ ಘೋಷಣೆ ಮಾಡುವಂತೆ ಅಗತ್ಯಪಡಿಸುತ್ತದೆ. ಹೊಸ ಕಾಯ್ದೆಯು ಹಳೆಯ ಕಾಯ್ದೆಯನ್ನು ತೆಗೆದು ಹಾಕುತ್ತದೆ ಎನ್ನುವುದಾದರೆ ಈ ಹೊಸ ಖಂಡವನ್ನು ಎಲ್ಲಿ ಸೇರಿಸಬೇಕಾಗುತ್ತದೆ ಎಂದು ಇಲ್ಲಿರುವ ವಕೀಲರನ್ನು ನಾನು ಕೇಳುತ್ತೇನೆ. ಹಳೆಯ ಕಾಯ್ದೆಯಲ್ಲಿ ಅದನ್ನು ಸೇರಿಸಬೇಕೋ ಅಥವಾ ಹೊಸ ಕಾಯ್ದೆಯಲ್ಲಿ ಸೇರಿಸಬೇಕೋ? ಹಳೆಯ ಕಾಯ್ದೆಯಲ್ಲಿ ಒಂದು ಖಂಡವನ್ನು ನೀವು ತಿದ್ದುಪಡಿ ಮಾಡಲು ಉದ್ದೇಶಿಸಿದ್ದೀರಿ. ಆದರೆ ಅದನ್ನು ಹೊಸ ಅಧಿನಿಯಮದಲ್ಲಿ ತಿದ್ದುಪಡಿ ಮಾಡುತ್ತಿದ್ದೀರಿ. ಇದು ಸಂಪೂರ್ಣವಾಗಿ ನಿಷ್ಕೃಷ್ಟವಲ್ಲದ ಹಾಗೂ ದಾರಿ ತಪ್ಪಿಸುವ ವಿಷಯ ಎಂದು ನಾನು ಭಾವಿಸುತ್ತೇನೆ.

ಇನ್ನೂ ಕೆಲವು ದೋಷಗಳನ್ನು ನಾನು ಉಲ್ಲೇಖಿಸುತ್ತೇನೆ. ಉಚ್ಚ ನ್ಯಾಯಾಲಯವು ನಿರ್ದಿಷ್ಟ ಪ್ರಕರಣಗಳಲ್ಲಿ ಮೇಲ್ಮನವಿಯನ್ನು ಆಲಿಸಲು ಅಧಿಕಾರ ಹೊಂದಿದೆ. ಅಂತಹ ಕೆಲವು ಪ್ರಕರಣಗಳ ಪಟ್ಟಿ ನನ್ನ ಮುಂದಿದೆ. ಆ ಪ್ರಕರಣಗಳೆಂದರೆ ದಂಡಾಧಿಕಾರಿಯವರು ಮುದ್ರಕರಿಂದಾಗಲೀ ಅಥವಾ ಪ್ರಕಾಶಕರಿಂದಾಗಲೀ ಠೇವಣಿಗಳನ್ನು ಅಗತ್ಯಪಡಿಸುವುದು, ಅಥವಾ ಮುದ್ರಕರು ಅಥವಾ ಪ್ರಕಾಶಕರು ಸಂದಾಯ ಮಾಡಿದ ಅಂಥ ಠೇವಣಿಗಳನ್ನು ಮುಟ್ಟುಗೋಲು ಹಾಕಿಕೊಳ್ಳಲಾಗಿದೆ ಎಂದು ಸರ್ಕಾರ ಘೋಷಿಸುವುದು. ಮತ್ತು ಸಂಬಂಧಪಟ್ಟ ಪ್ರಕರಣಗಳೆಂದರೆ ಪ್ರಸ್ತುತ ರೂಪದಲ್ಲಿನ ಪ್ರಕರಣ–3 ಮತ್ತು ಪ್ರಕರಣ 4, 6, 7, 8, 10 ಮತ್ತು 19. ಇವು, ಸರ್ಕಾರವಾಗಲಿ ಅಥವಾ ದಂಡಾಧಿಕಾರಿಯವರಾಗಲಿ ಠೇವಣಿಯನ್ನು ಅಗತ್ಯಪಡಿಸುವುದಕ್ಕೆ ಅಥವಾ ಠೇವಣಿಯನ್ನು ಮುಟ್ಟುಗೋಲು ಮಾಡಿಕೊಳ್ಳುವುದಕ್ಕೆ ಅಧಿಕಾರ ಹೊಂದಿರುವ ಪ್ರಕರಣಗಳಾಗಿವೆ. ಇಂತಹ ಎಲ್ಲಾ ಪ್ರಕರಣಗಳಲ್ಲಿ ಉಚ್ಚ ನ್ಯಾಯಾಲಯಕ್ಕೆ ಮೇಲ್ಮನವಿಗಳನ್ನು ಆಲಿಸುವ ಅಧಿಕಾರ ನೀಡಲಾಗಿದೆ. ಆದರೆ ಯಾವುದೇ ರೀತಿಯ ಅಧಿಕಾರವನ್ನು ಉಚ್ಚ ನ್ಯಾಯಾಲಯಕ್ಕೆ ನೀಡದಿರುವ ಒಂದು ವರ್ಗದ ಪ್ರಕರಣಗಳಿವೆ. ಅವು ಪ್ರಕರಣ 3ರ ಉಪ ಖಂಡ (1)ರ ಅಡಿಯಲ್ಲಿ ಬರುವಂಥ ಪ್ರಕರಣಗಳು. 4(3) ನೇ ಪ್ರಕರಣದ ಅಡಿಯಲ್ಲಿ ಯಾವುದೇ ಮುದ್ರಕರಿಂದ ಭದ್ರತೆಯಾಗಿ ಠೇವಣಿಯನ್ನು ಸಂಬಂಧಿಸಿದ ದಂಡಾಧಿಕಾರಿಗಳ ಲೆಕ್ಕದಲ್ಲಿ ಇಡುವಂತೆ ಸರ್ಕಾರವು ಅಗತ್ಯಪಡಿಸಬಹುದು. ಒಂದು ವೇಳೆ ದಂಡಾಧಿಕಾರಿಗಳು ನಿರ್ದಿಷ್ಟವಾದ ಠೇವಣಿ ಅಥವಾ ಭದ್ರತೆ ಇಡುವಂತೆ ಪತ್ರಿಕಾಲಯವನ್ನು ಅಗತ್ಯಪಡಿಸದಿದ್ದರೂ, ಈ ಅಧಿಕಾರವನ್ನು ಬಳಸಿಕೊಂಡು

ಸರ್ಕಾರವು ದಂಡಾಧಿಕಾರಿಗಳ ವ್ಯಾಪ್ತಿಯನ್ನೂ ಮೀರಿ ಭದ್ರತೆಯನ್ನು ಇಡುವಂತೆ ಒತ್ತಾಯಪಡಿಸಬಹುದಾಗಿರುತ್ತದೆ. ಇಂತಹ ಪ್ರಕರಣದಲ್ಲಿ, ಉಚ್ಚ ನ್ಯಾಯಾಲಯಕ್ಕೆ ಯಾವುದೇ ಪರಿಹಾರಯುಕ್ತ ಕ್ರಮವನ್ನು ತೆಗೆದುಕೊಳ್ಳುವ ಅಧಿಕಾರ ಇರುವುದಿಲ್ಲ. ಮಸೂದೆಯ ಕರಡನ್ನು ಸಿದ್ಧಪಡಿಸುವಲ್ಲಿ ಇದು ಮತ್ತೊಂದು ಮುಖ್ಯವಾದ ದೋಷವಾಗಿದೆ. ಈ ಕೊನೆಯ ದೋಷ ಉದ್ದೇಶಪೂರ್ವಕವೇ ಇರಬಹುದು! ನನಗೆ ಗೊತ್ತಿಲ್ಲ.

ಸ್ವಾಮಿ, ಕರಡು ಸಿದ್ಧಪಡಿಸುವಲ್ಲಿನ ದೋಷಗಳು ಅಥವಾ ಲೋಪಗಳ ಕಾರಣದಿಂದಾಗಿ ನಾನು ಈ ಕಾನೂನು ಕ್ರಮವನ್ನು ದೂರುತ್ತಿಲ್ಲ. ಇದು ಅತ್ಯಂತ ಅವಶ್ಯಕವಾದುದು. ಕಳೆದ ಬಾರಿ ನಾನು ಹೇಳಿದಂತೆ ಇದು ಬಹಳ ಮುಖ್ಯ ಅಪರಾಧಿಗಳನ್ನು ಅಂದರೆ ಪತ್ರಿಕೆಗಳು ಮಾಲೀಕ ಮತ್ತು ಸಂಪಾದಕರನ್ನು ಪರಿಗಣಿಸದೆ ಬಿಟ್ಟು ಬಿಡುತ್ತವೆ. ಇದು ಖಂಡಿತವಾಗಿಯೂ ಅನ್ಯಾಯವೆಂದು ತೋರುತ್ತದೆ. ರಾಜ್ಯದಲ್ಲಿನ ಎರಡು ಅಥವಾ ಮೂರು ಬೃಹತ್ ಕಂಪನಿಗಳನ್ನು ಹೊರತುಪಡಿಸಿದರೆ ಸಾಮಾನ್ಯವಾಗಿ ಮುದ್ರಕನು ಬಹಳ ಬಡವನಾಗಿರುತ್ತಾನೆ. ಉಳಿದಂತೆ ಸಾಮಾನ್ಯ ಜನರು ಬಹಳ ಕಡಿಮೆ ಬಂಡವಾಳದಿಂದ ಅಥವಾ ಸಾಲ ಪಡೆದ ಹಣದಿಂದ ಸಣ್ಣ ಕಂಪನಿಗಳನ್ನು ನಡೆಸುತ್ತಿರುತ್ತಾರೆ. ಜೀವನೋಪಾಯಕ್ಕಾಗಿ ಅವರು ಈ ಕೆಲಸವನ್ನು ಮಾಡುತ್ತಿರುತ್ತಾರೆ. ಇಂತಹ ಜನರನ್ನು ದಂಡನೆಗೆ ಈಗ ನೀವು ಒಳಪಡಿಸುತ್ತಿರುವಿರಿ. ಒಂದು ದಿನಪತ್ರಿಕೆಯಾಗಿರದೆ, ವಾರ ಅಥವ ಪಾಕ್ಷಿಕ ಅಥವಾ ಮಾಸ ಪತ್ರಿಕೆಯಾಗಿರಬಹುದು, 2000 ರೂಪಾಯಿಗಳ ಬಂಡವಾಳದಿಂದ ಪ್ರಾರಂಭವಾದ ಇಂತಹ ಪತ್ರಿಕಾಲಯವು ಮಾಸಪತ್ರಿಕೆಗಳನ್ನು ಮುದ್ರಿಸುತ್ತಿದ್ದು ಈ ಕಾನೂನು ಕ್ರಮದಲ್ಲಿ ಉದ್ದೇಶಿಸಲಾದ ಪ್ರವರ್ಗಗಳ ಅಡಿಯಲ್ಲಿ ಅವುಗಳನ್ನು ತರಬಹುದಾಗಿದೆ. ಮಾಸ ಪತ್ರಿಕೆಯ ಮಾಲೀಕ ಅಥವಾ ಸಂಪಾದಕನು ಮಾಡಿದ ತಪ್ಪಿಗಾಗಿ ಇಂತಹ ಮುದ್ರಕನು ಹೆಚ್ಚಿನ ದಂಡವನ್ನೂ ಪಾವತಿಸಬೇಕಾಗಿ ಬರಬಹುದು. ನಾನು ಹೇಳಿದಂತೆ ಸಾಮಾನ್ಯವಾಗಿ ಮುದ್ರಕರು ಬಡವರಾಗಿರುವುದಷ್ಟೇ ಅಲ್ಲ, ಹೆಚ್ಚಿನವರು ವಿದ್ಯಾವಂತರೂ ಆಗಿರುವುದಿಲ್ಲ. ಇವರು ಸೀಮಿತವಾದ ಶಿಕ್ಷಣವನ್ನು ಹೊಂದಿದ್ದು, ಇವರ ಆಸಕ್ತಿ ಶುದ್ಧವಾಗಿ ಹಣಕಾಸಿಗೆ ಸಂಬಂಧಿಸಿದ್ದಾಗಿರುವುದೇ ವಿನಃ ರಾಜಕೀಯವಾಗಿರುವುದಿಲ್ಲ. ಈ ಕೆಲಸವನ್ನು ಕೇವಲ ಒಂದು ವ್ಯವಹಾರಿಕ ಭಾಗವಾಗಿ ಮಾಡುತ್ತಾರೆ ಮತ್ತು ಅವರಿಗೆ ರಾತ್ರಿ ಮತ್ತು ಹಗಲು ಅಲ್ಲೇ ಇದ್ದು ಮುದ್ರಣದ ವಿಷಯದಲ್ಲಿ ಸಂಪಾದಕರ ಜೊತೆ ಸದಾ ಜಗಳವಾಡುತ್ತಿರುವುದು

ಸಾಧ್ಯವಿಲ್ಲ. ನೀವು ಮುದ್ರಕರಿಗೆ ದಂಡ ಏಕೆ ವಿಧಿಸುತ್ತೀರಿ? ಇಡೀ ವಿಷಯವೇ ಸಂಪೂರ್ಣವಾಗಿ ದೋಷಯುಕ್ತವಾಗಿದೆ.

ಸ್ವಾಮಿ, ಈ ಅಧಿನಿಯಮದ ಅಡಿಯಲ್ಲಿ ನೀಡಲಾದ ಭಯಂಕರ ಅಪರಾಧಗಳ ಪಟ್ಟಿಯನ್ನು ನೋಡಿ. ಭಾರತೀಯ ದಂಡ ಸಂಹಿತೆಯಲ್ಲಿ ಈ ಅಪರಾಧಗಳಿಗೆ ಯಾವುದೇ ಶಿಕ್ಷೆ ವಿಧಿಸಿಲ್ಲವೇ ಎಂದು ನಾನು ವಕೀಲರಿಂದ ತಿಳಿಯಬಯಸುತ್ತೇನೆ. ಈಗ ಜಾರಿಯಲ್ಲಿರುವ ದಂಡ ಸಂಹಿತೆಯು ಈ ಅಪರಾಧಗಳಿಗೆ ಶಿಕ್ಷೆ ವಿಧಿಸಿದ್ದರೆ ಹೊಸ ಕಾನೂನಿನ ಅವಶ್ಯಕತೆ ಏನು? ಪ್ರಚಲಿತ ಕಾನೂನಿನ ಅಡಿಯಲ್ಲೇ ಏಕೆ ಕ್ರಮ ಕೈಗೊಳ್ಳಬಾರದು? ಅಕಸ್ಮಾತ್ ಈ ಅಪರಾಧಗಳು ಹೊಸ ಬಗೆಯವಾದರೆ ದಂಡ ಸಂಹಿತೆಯ ಅಪರಾಧಗಳ ಪಟ್ಟಿಗೆ ಇವುಗಳನ್ನು ಏಕೆ ಸೇರಿಸಬಾರದು? ಮೂಲಭೂತವಾಗಿ ನೀವು ಭಾಷಣಕಾರ ಹಾಗೂ ಬರಹಗಾರನ ನಡುವೆ ವ್ಯತ್ಯಾಸವನ್ನು ಕಾಣಲು ಏಕೆ ಇಚ್ಛಿಸುತ್ತೀರಿ? ಆಡು ಮಾತು ಮುದ್ರಿತವಾದ ಬರಹಕ್ಕಿಂತ ಕಡಿಮೆ ಪರಿಣಾಮಕಾರಿಯೇ? ಬಹಳ ಸಲ ನಾನು ಆಡುವ ಮಾತು ಹೆಚ್ಚು ಪರಿಣಾಮ ಬೀರುತ್ತದೆ ಎಂದು ಭಾವಿಸುತ್ತೇನೆ. ಬಹುಶಃ ನಿರ್ದಿಷ್ಟ ರೀತಿಯ ಭಾಷಣಕಾರರನ್ನು ಸಹ ದಂಡನೆಗೆ ಒಳಪಡಿಸುವ ಸಲುವಾಗಿ ಈ ಕಾನೂನನ್ನು ಉದ್ದೇಶಿಸಲಾಗಿದೆಯೆಂದು ನೀವು ನನಗೆ ಉತ್ತರ ನೀಡುತ್ತೀರಿ. ಹಾಗಿದ್ದಲ್ಲಿ, ಭಾರತೀಯ ದಂಡ ಸಂಹಿತೆಯ ಅಡಿಯಲ್ಲಿ ಈಗಾಗಲೇ ಇರುವ ಅಪರಾಧಗಳ ಪಟ್ಟಿಗೆ ಈ ಹೊಸ ಪಟ್ಟಿಯನ್ನು ಸೇರಿಸಬಹುದೆಂದು ನಾನು ಸೂಚಿಸುತ್ತೇನೆ. ನೀವು ಏಕೆ ಹೀಗೆ ಮಾಡುತ್ತಿಲ್ಲ? ಏಕೆ ಈ ಹೊಸ ಕಾನೂನಿನ ರಚನೆ ಮಾಡುತ್ತಿದ್ದೀರಿ? ಈ ನಿಟ್ಟಿನಲ್ಲಿ ಈ ಕ್ರಮವು ನಿಸ್ಸಂಶಯವಾಗಿ ಸರಿಯಲ್ಲವೆಂದು ಹಾಗೂ ಬೆಂಬಲ ನೀಡುವುದಕ್ಕೆ ಯೋಗ್ಯವಲ್ಲವೆಂದು ನನಗೆ ಕಂಡುಬರುತ್ತಿದೆ.

ಸ್ವಾಮಿ, ನೀವು ಪಟ್ಟಿಮಾಡಿದ ಈ ಅಪರಾಧಗಳ ಪೈಕಿ ಅನೇಕ ಸಂಗತಿಗಳು ವಾಸ್ತವವಾಗಿ ಅಪರಾಧಗಳೇ ಅಲ್ಲವೆಂದು ನನಗನ್ನಿಸುತ್ತದೆ. ಪ್ರಧಾನ ಪ್ರಕರಣ, ಕೇಂದ್ರ ಪ್ರಕರಣ, ಅಂದರೆ ಪ್ರಕರಣ 4ರ ಕೆಲವು ಉಪಪ್ರಕರಣಗಳನ್ನು ನಿಮ್ಮ ಗಮನಸೆಳೆಯಲು ಅಪೇಕ್ಷಿಸುತ್ತೇನೆ. ಉದಾಹರಣೆಗೆ (ಇ) ಉಪ ಖಂಡದಲ್ಲಿ "ಯಾವುದೇ ವ್ಯಕ್ತಿಯನ್ನು ಭಯಗ್ರಸ್ಥನನ್ನಾಗಿಸುವುದು ಅಥವಾ ಧೃತಿಗೆಡಿಸುವುದು ಮತ್ತು ಆ ಮೂಲಕ ಯಾವುದೇ ಆಸ್ತಿಯನ್ನು ಅಥವಾ ಮೌಲ್ಯಯುತವಾದ ಠೇವಣಿಯನ್ನು ಯಾವುದೇ ವ್ಯಕ್ತಿಗೆ ಕೊಡುವಂತೆ ಅಥವಾ ಕಾನೂನುಬದ್ಧವಾಗಿ ಮಾಡಬೇಕಿಲ್ಲದ ಯಾವುದೇ ಕಾರ್ಯವನ್ನು ಮಾಡುವಂತೆ ಅವನನ್ನು

ಪ್ರಚೋದಿಸುವುದು" ಮುಂತಾದವುಗಳನ್ನು ಅಪರಾಧಗಳೆಂದು ಕರೆಯಲಾಗಿದೆ. ಮೈಸೂರಿನ ಪ್ರತಿಯೊಬ್ಬನೂ ಮೈಸೂರು ಸೋಪುಗಳನ್ನು ಮಾತ್ರ ಬಳಸಲೇಬೇಕೆಂಬ ಧ್ಯೇಯವಿರುವ ಮೈಸೂರಿನ ಉತ್ಸುಕ ಅಭಿಮಾನಿಯೊಬ್ಬನ ಪ್ರಕರಣವನ್ನು ಇಲ್ಲಿ ತೆಗೆದುಕೊಳ್ಳೋಣ. ಮೈಸೂರಿಗರೆಲ್ಲ ಮೈಸೂರು ಸೋಪನ್ನೇ ಬಳಸಬೇಕೆಂಬ ನಿಯಮವೇನೂ ಇಲ್ಲ. ಆದರೆ ಮೈಸೂರು ಉತ್ಪನ್ನವನ್ನು ಉತ್ತೇಜಿಸುವ ಉತ್ಸಾಹದಿಂದ ದೇಶ ಪ್ರೇಮಿಯು ಮೈಸೂರಿನಲ್ಲಿ ವಾಸಿಸುವ ಹಾಗೂ ಸೋಪುಗಳನ್ನು ಬಳಸುವ ಅಭ್ಯಾಸವುಳ್ಳ ಮೈಸೂರಿಗರು ಮೈಸೂರು ಸೋಪನ್ನು ಉಪಯೋಗಿಸದಿದ್ದರೆ ಅವರನ್ನು ಸಾಮಾಜಿಕವಾಗಿ ಬಹಿಷ್ಕರಿಸಬೇಕು ಮತ್ತು ಬಹಿರಂಗವಾಗಿ ಖಂಡಿಸಬೇಕು ಹಾಗೂ ಬೇರೆ ಸೋಪಲ್ಲದೆ ಮೈಸೂರು ಸೋಪನ್ನೇ ಬಳಸಬೇಕು ಎಂದು ಒತ್ತಡ ಹೇರಬೇಕು ಎಂದು ಬರೆದರೆ ಕೂಡಲೇ ಅದು ಒಂದು ಅಪರಾಧವಾಗುತ್ತದೆ. ಏಕೆಂದರೆ ಅಂತಹ ಲೇಖನವು ಸಾಮಾಜಿಕ ಬಹಿಷ್ಕಾರವನ್ನು ಪ್ರತಿಪಾದಿಸುವುದರಿಂದ ಕಿರುಕುಳ ನೀಡಿದಂತಾಗುತ್ತದೆ. ನೀವು ಕಾನೂನುಬದ್ಧವಾಗಿ ಮಾಡಬೇಕಿಲ್ಲದಿದ್ದರೂ ಮೈಸೂರು ಸೋಪನ್ನೇ ಬಳಸುವಂತೆ ಪ್ರಚೋದಿಸುವ ದೃಷ್ಟಿಯಿಂದ ಒಬ್ಬ ವ್ಯಕ್ತಿಯ ಸಾಮಾಜಿಕ ಬಹಿಷ್ಕಾರವನ್ನು ಪ್ರತಿಪಾದಿಸುತ್ತೀರಿ. ವಾಸ್ತವ ಸಂಗತಿಯೆಂದರೆ ಯಾರೇ ವ್ಯಕ್ತಿಯು ಮೈಸೂರು ಸೋಪನ್ನು ಬಳಸುವುದು ಕಾನೂನುಬದ್ಧವಲ್ಲ. ಈಗ ಮತ್ತೊಂದು ಪ್ರಕರಣವನ್ನು ತೆಗೆದುಕೊಳ್ಳೋಣ. ಒಬ್ಬ ಕಾಂಗ್ರೆಸ್ ವ್ಯಕ್ತಿಯು ಅಭ್ಯರ್ಥಿಯಾಗಿ ಚುನಾವಣೆಗೆ ನಿಲ್ಲುತ್ತಾನೆ. ಅಂತಹ ಅಭ್ಯರ್ಥಿಗೆ ತಮ್ಮ ಮತವನ್ನು ನೀಡಲು ಯಾರೂ ಬದ್ಧರಾಗಿರುವುದಿಲ್ಲ. ಆದರೆ ಈತನ ಬೆಂಬಲಿಗರು " ಈತನು ಒಬ್ಬ ಕಾಂಗ್ರೆಸ್ ಅಭ್ಯರ್ಥಿ; ಪಕ್ಕಾ ಕಾಂಗ್ರೆಸ್ಸಿಗ; ಇವರು ಇಂಥ ಆದರ್ಶವನ್ನು ಉಳ್ಳವರು; ಅವರಿಗೆ ಬೆಂಬಲ ನೀಡಿ; ಜನ ಅವರ ಉಮೇದುವಾರಿಕೆಯನ್ನು ಬೆಂಬಲಿಸದೆ ಇದ್ದರೆ ದೇಶದಲ್ಲಿ ಪ್ರಬಲ ಪಕ್ಷವಾಗಿರುವ ಕಾಂಗ್ರೆಸ್ ಪಕ್ಷಕ್ಕೆ ಇವರು ಅಯೋಗ್ಯರೆನಿಸುತ್ತಾರೆ. ಈ ಕಾಂಗ್ರೆಸ್ಸಿಗನಿಗೆ ಬೆಂಬಲ ನೀಡದ ಇಂಥ ಜನರನ್ನು ಈ ಪಕ್ಷ ಪ್ರೋತ್ಸಾಹಿಸುವುದಿಲ್ಲ" ಎಂದು ಹೇಳಿದರೆ ಈಗಾಗಲೇ ನಾನು ಹೇಳಿರುವ ಕಾರಣಕ್ಕಾಗಿ ಇದೊಂದು ಅಪರಾಧವಾಗುತ್ತದೆ. ಪ್ರಕರಣದ ಪದಬಂಧವು ಅತಿ ಸಡಿಲವಾಗಿದೆ.

ಸ್ವಾಮಿ, ರಾಜ್ಯದ್ರೋಹದ ಅಪರಾಧವು ನೈತಿಕತೆಯ ದೃಷ್ಟಿಕೋನದಿಂದ ಅನೈತಿಕತೆಗೆ ಸಮನಾಗಿ ಹೋಲಿಸಬಹುದಾದ ಅಪರಾಧವಲ್ಲ. ರಾಜ್ಯದ್ರೋಹವು ಯಾವಾಗಲೂ ಅನೈತಿಕವೆ ಎಂಬ ಅಂಶವು ದೀರ್ಘವಾಗಿ ಚರ್ಚಿಸಬಹುದಾದ

ವಿಷಯವಾಗಿದೆ. ಇದು ನಿರ್ಧಾರಿತವಾದ ಅಂಶವಲ್ಲ. ಕೆಲವು ಬಾರಿ ಆಡಳಿತಗಾರರ ಕೃತ್ಯಗಳಿಂದ, ರಾಜನೀತಿಜ್ಞರ ಕೃತ್ಯಗಳಿಂದ ರಾಜ್ಯದ್ರೋಹವು ಒಬ್ಬ ಪ್ರಾಮಾಣಿಕ ಪ್ರಜೆಗೆ ಕರ್ತವ್ಯವಾಗಿಬಿಡಬಹುದು; ಆತ್ಮಸಾಕ್ಷಿಗೆ ಸಂಬಂಧಿಸಿದ ಕರ್ತವ್ಯದ ವಿಷಯವಾಗಬಹುದು. ಈತ ತನ್ನ ರಾಜ್ಯವನ್ನು ಮತ್ತು ಜನತೆಯನ್ನು ಎಷ್ಟು ಪ್ರೀತಿಸುತ್ತಾನೆಂದರೆ, ಸಾಮಾಜಿಕ ನಿಯಮಗಳಲ್ಲಿ ತೀವ್ರ ಬದಲಾವಣೆಯನ್ನು ತರುವುದರ ಮೂಲಕ ಉತ್ತಮ ಭವಿಷ್ಯವನ್ನು ರೂಪಿಸಬಹುದು ಎಂದು ಪ್ರಾಮಾಣಿಕತೆಯಿಂದ ಪರಿಶುದ್ಧ ಪ್ರಜ್ಞೆಯಿಂದ ಮತ್ತು ಉತ್ತಮ ಅಂತಃ ಪ್ರೇರಣೆಯಿಂದ ಆಲೋಚಿಸುತ್ತಾನೆ. ಇಂತಹ ವ್ಯಕ್ತಿಯು ಸಾಮಾನ್ಯವಾಗಿ ರೂಢಿಯಲ್ಲಿರುವ ನಿಯಮವನ್ನೇ ಎತ್ತಿಹಿಡಿಯುವ ಪ್ರತಿಯೊಬ್ಬರಿಗೂ, ಪ್ರತಿ ಯಥಾಸ್ಥಿತಿವಾದಿಗೂ ಅಸಹನೀಯವಾಗುತ್ತಾನೆ. ಅಂತಹ ವ್ಯಕ್ತಿಯು ಇಂಥ ಯಥಾಸ್ಥಿತಿವಾದಿಗಳ ಶತ್ರುವಾಗುತ್ತಾನೆ. ಸರ್ಕಾರಕ್ಕೆ ಬೇಡದ ವ್ಯಕ್ತಿಯಾಗುತ್ತಾನೆ, ಅನರ್ಹವಾಗುತ್ತಾನೆ. ಈ ಕಾರಣಕ್ಕಾಗಿ............

**ಶ್ರೀಯುತ ಸಭಾಧ್ಯಕ್ಷರು:** ಆದರೆ ವೃತ್ತಪತ್ರಿಕೆಗಳ ಕಾನೂನಿಗೆ ಸಂಬಂಧಪಟ್ಟಂತೆ ಪ್ರಸ್ತುತ ಬ್ರಿಟಿಷ್ ಭಾರತದಲ್ಲಿ ಇಂಥ ಅಧಿನಿಯಮವು ಜಾರಿಯಲ್ಲಿಲ್ಲವೆ?

**ಶ್ರೀಯುತ ಡಿ. ವಿ. ಗುಂಡಪ್ಪ:** ಸ್ವಾಮಿ, ಈ ವಿಷಯಕ್ಕೆ ಸಂಬಂಧಿಸಿದಂತೆ ಬ್ರಿಟಿಷ್ ಭಾರತವನ್ನು ಅನುಕರಿಸುವ ಅಗತ್ಯವಿಲ್ಲವೆಂದು ನಾನು ಬೇಡಿಕೊಳ್ಳುತ್ತೇನೆ. ನಾವು ಜವಾಬ್ದಾರಿಯುತ ಸರ್ಕಾರ ಬೇಕೆಂದು ಪ್ರತಿಪಾದಿಸುವಾಗ ನಮ್ಮ ಪ್ರಾಚೀನ ತತ್ವಗಳಾದ ಸತ್ಯ ಮತ್ತು ಧರ್ಮಗಳನ್ನು ನಾವು ಗಮನದಲ್ಲಿಟ್ಟುಕೊಳ್ಳಬೇಕೆಂದು ಹೇಳಲಾಗಿದೆಯೇ ಹೊರತು ಪಾಶ್ಚಾತ್ಯ ಮಾನದಂಡಗಳ ಅನುಕರಣೆ ಮಾಡಬೇಕೆಂದು ಹೇಳಿಲ್ಲ.

**ಶ್ರೀಯುತ ಸಭಾಧ್ಯಕ್ಷರು:** ಇಲ್ಲ, ಇಲ್ಲ, ನನ್ನ ಪ್ರಶ್ನೆಗೆ ನೀವು ದಯವಿಟ್ಟು ನೇರವಾಗಿ ಉತ್ತರ ನೀಡುವಿರೇ? ಇದು ಬಹಳ ಸರಳವಾದದ್ದು, ಬ್ರಿಟಿಷ್ ಭಾರತದಲ್ಲಿ ಇಂತಹ ಅಧಿನಿಯಮ ಜಾರಿಯಲ್ಲಿಲ್ಲವೇ?

**ಶ್ರೀಯುತ ಡಿ. ವಿ. ಗುಂಡಪ್ಪ:** ಬ್ರಿಟಿಷ್ ಭಾರತದಲ್ಲಿ ಇನ್ನೂ ಕೆಟ್ಟ ಸಂಗತಿಗಳು ಘಟಿಸಿವೆ.

**ಶ್ರೀಯುತ ಸಭಾಧ್ಯಕ್ಷರು:** ದೀರ್ಘ ಕಾಲದಿಂದ ಬ್ರಿಟಿಷ್ ಭಾರತದಲ್ಲಿ ಜಾರಿಯಲ್ಲಿದ್ದ ಈ ಅಧಿನಿಯಮದ ಬಗ್ಗೆ ಪ್ರಸ್ತುತ ಪ್ರಜಾಪ್ರಭುತ್ವ ಮಾದರಿಯ

ಸರ್ಕಾರದ ಅಡಿಯಲ್ಲಿಯೂ ಇಂಥ ದೊಡ್ಡ ಪ್ರಮಾಣದ ನಿಂದನೆಯನ್ನು ನಾನು ಕೇಳಿರಲಿಲ್ಲ.

**ಶ್ರೀಯುತ ಡಿ. ವಿ. ಗುಂಡಪ್ಪ:** ಅಂಥ ಪ್ರಶ್ನೆಗಳಿಗೆ ಸರ್ಕಾರವು ನೀಡುವಂಥ ಉತ್ತರವೇ ನನ್ನ ಉತ್ತರವೂ ಆಗಿರುತ್ತದೆ. ಆದರೆ ನಮ್ಮ ಪರಿಸ್ಥಿತಿಗಳು ಬೇರೆಯಾಗಿರುತ್ತವೆ. ಇನ್ನೂ ಉತ್ತಮವಾಗಿ ಅವುಗಳನ್ನು ನಿರ್ವಹಿಸಲು ನಾವು ಸಮರ್ಥರಾಗಬೇಕು.

ವಾಸ್ತವವಾಗಿ ಅದು ವಿಷಯದ ಮೂಲಕ್ಕೆ ನನ್ನನ್ನು ಕೊಂಡೊಯ್ಯುತ್ತದೆ. ಬ್ರಿಟಿಷ್ ಭಾರತದಲ್ಲಿ ಸಾಮ್ರಾಜ್ಯಶಾಹಿತ್ವ ಹಾಗೂ ರಾಷ್ಟ್ರೀಯತೆಗಳ ನಡುವೆ ಸಂಘರ್ಷವಿತ್ತು. ಆದರೆ ಮೈಸೂರಿನಲ್ಲಿ ಅಂತಹ ಸಂಘರ್ಷವೇನೂ ಇಲ್ಲ. ಸಾಮ್ರಾಜ್ಯ ಶಾಹಿಯ ವಿರುದ್ಧ ಸೆಣಸಲು ನಮಗೆ ಕರೆ ಕೊಡಲಾಗಿಲ್ಲ.

**ಶ್ರೀಯುತ ಸಭಾಧ್ಯಕ್ಷರು:** ಅಂತಹುದೇನೂ ಇಲ್ಲಿ ಇಲ್ಲ.

**ಶ್ರೀಯುತ ಡಿ. ವಿ. ಗುಂಡಪ್ಪ:** ಆದುದರಿಂದ ಇಂತಹ ತೀಕ್ಷ್ಣವಾದ ಕ್ರಮದ ಅಗತ್ಯ ಇಲ್ಲಿಲ್ಲ.

**ಶ್ರೀಯುತ ಸಭಾಧ್ಯಕ್ಷರು:** ಆದರೆ ಪತ್ರಿಕಾ ಅಧಿನಿಯಮಕ್ಕೆ ಸಂಬಂಧಪಡುವಷ್ಟರ ಮಟ್ಟಿಗೆ ಬ್ರಿಟಿಷ್ ಭಾರತದಲ್ಲಿ ಪ್ರಜಾಪ್ರಭುತ್ವಕ್ಕೆ ವಿರುದ್ಧವಾಗಿ ಸಾಮ್ರಾಜ್ಯಶಾಹಿತ್ವವನ್ನು ಸಂರಕ್ಷಿಸುವ ಪ್ರಶ್ನೆಯೇ ಇಲ್ಲ.

**ಶ್ರೀಯುತ ಡಿ. ವಿ. ಗುಂಡಪ್ಪ:** ಪ್ರಸ್ತುತ ಇರುವ ಕಾಂಗ್ರೆಸ್ ಶಾಸಕಾಂಗಕ್ಕೆ ಮುಂಚಿನ ಬ್ರಿಟಿಷ್ ಭಾರತೀಯ ಶಾಸಕಾಂಗದಲ್ಲಿದ್ದ ಎಲ್ಲ ಕಾಯ್ದೆಗಳು ಸಾಮ್ರಾಜ್ಯ ಶಾಹಿತ್ವದಿಂದ ಒಂದಲ್ಲ ಒಂದು ರೀತಿಯಲ್ಲಿ ಸ್ಫೂರ್ತಿಯನ್ನು ಪಡೆದಿದ್ದುವೆಂದು ನಾನು ಸವಿನಯದಿಂದ ನಿಮ್ಮ ಗಮನಕ್ಕೆ ತರುತ್ತೇನೆ. ಪ್ರತಿ ಕಾಯಿದೆಯ ಮೂಲ ಉದ್ದೇಶ ಸಾಮ್ರಾಜ್ಯದ ಮೇಲುಗೈಯನ್ನು ಸಾಧಿಸುವುದೇ ಆಗಿತ್ತು.

**ಶ್ರೀಯುತ ಸಭಾಧ್ಯಕ್ಷರು:** ಇಲ್ಲ; ನಾವು ಸಂಬಂಧಿಸಿದ ಎಲ್ಲರ ಬಗ್ಗೆ ನ್ಯಾಯಯುತವಾಗಿ ನಡೆದುಕೊಳ್ಳಬೇಕು. ಬ್ರಿಟೀಷ್ ಭಾರತದಲ್ಲಿನ ಪ್ರಸಕ್ತ ಸರ್ಕಾರವು ಇಂಥ ಕಾಯಿದೆಯನ್ನು ಇಷ್ಟಪಡದೆ ಇದ್ದ ಪಕ್ಷದಲ್ಲಿ, ಅದು ಕಾಯಿದೆಯನ್ನು ನಿರಸನಗೊಳಿಸುವುದನ್ನು ಮಾಡಬಹುದಿತ್ತು ಎಂದು ನಾನು ಭಾವಿಸುತ್ತೇನೆ.

**ಶ್ರೀಯುತ ಡಿ. ವಿ. ಗುಂಡಪ್ಪ:** ಸ್ವಾಮಿ, ಸಾಮ್ರಾಜ್ಯಶಾಹಿತ್ವದ ಪರವಾಗಿ ಕೂಡ ಹೇಳುವುದಕ್ಕೆ ಹಲವಾರು ವಿಷಯಗಳಿವೆ. ವಾಸ್ತವವಾಗಿ ಪ್ರೊ. ಮಾರ್ಕ್

ಹಂಟರ್‌ರಂತಹ ಭಾರತದ ಅತ್ಯಂತ ಪ್ರಸಿದ್ಧ ವ್ಯಕ್ತಿ–ನಿವೃತ್ತ ಸರ್ಕಾರಿ ನೌಕರರು ಸಾಮ್ರಾಜ್ಯಶಾಹಿತ್ವದ ಕಾಯಿದೆಗಳಲ್ಲಿ ಒಳ್ಳೆಯದನ್ನು ಹಾಗೂ ಪ್ರಯೋಜನವನ್ನು ಕಂಡುಕೊಂಡಿದ್ದಾರೆ. ವಸ್ತುತಃ ಜಗತ್ತಿನ ಕಪ್ಪು ಬಣ್ಣದವರನ್ನು ರಕ್ಷಿಸುವುದು ಬಿಳಿಯರ ಜವಾಬ್ದಾರಿಯೆಂದು ಭಾವಿಸಲಾಗಿದ್ದು ಇದರಿಂದ ಸಾಮ್ರಾಜ್ಯ ಶಾಹಿತ್ವವನ್ನು ಕಪ್ಪು ಜನರಿಗೆ ದೈವಾನುಗ್ರಹ ನೀಡುವ ಒಂದು ವರ ಎಂದು ಭಾವಿಸಬಹುದು. ನಾನು ಬ್ರಿಟಿಷ್ ಭಾರತದ ಶಾಸಕಾಂಗದ ಉದ್ದೇಶಗಳನ್ನು ಕುರಿತು ಮಾತನಾಡುವುದಿಲ್ಲ. ಯಾವುದೇ ಹಿತಾಸಕ್ತಿಯನ್ನು ಅಪಾಯಕ್ಕೊಳಪಡಿಸದೆ, ದೇಶದ ಶಾಂತಿಯನ್ನು ಕದಡದೆ, ಸರ್ಕಾರಕ್ಕಿರುವ ಒಳ್ಳೆಯ ಹೆಸರನ್ನು ಹಾಳುಮಾಡದೆ, ಪ್ರಸ್ತುತ ಇರುವ ಸಾಮಾಜಿಕ ಸುವ್ಯವಸ್ಥೆಯನ್ನು ಹದಗೆಡಿಸದೆ ಯುಕ್ತವಾದ ರೀತಿಯಲ್ಲಿ ಪತ್ರಿಕಾಲಯವನ್ನು ಸಕ್ರಮಗೊಳಿಸಲು ಅಧಿಕಾರವನ್ನು ತೆಗೆದುಕೊಳ್ಳುವುದು ಮೈಸೂರಿನಲ್ಲಿರುವ ನಮಗೆ ಖಂಡಿತವಾಗಿಯೂ ಸಾಧ್ಯವಾಗುತ್ತದೆ ಎಂದು ಮಾತ್ರ ನಾನು ಹೇಳುತ್ತೇನೆ. ಆ ಪತ್ರಿಕೋದ್ಯಮಕ್ಕೆ ತನ್ನದೇ ಆದ ಒಂದು ಕಾನೂನು ಬೇಕು ಎಂದರೆ ದೇಶದ ಪತ್ರಿಕಾಲಯದ ಮೇಲೆ ವಿಧಾನಮಂಡಲಕ್ಕೆ ಯಾವುದೇ ರೀತಿಯ ನಿಯಂತ್ರಣ ಇರಬಾರದು ಎಂದು ಹೇಳುವವರ ಪೈಕಿ ನಾನೊಬ್ಬ ಅಲ್ಲ. ಅಂತಹ ಆದರ್ಶವನ್ನು ನಾನು ಎಂದಿಗೂ ಬೋಧಿಸುವುದಿಲ್ಲ. ಸರ್ಕಾರ ಕೆಲವು ದರ್ಜೆಯ ಅಪರಾಧಗಳು ಹಾಗೂ ಕೆಲವು ಕುಚೋದ್ಯ ವಿಷಯಗಳ ಪ್ರಚಾರವನ್ನು ಮಾಡುವವರ ಮೇಲೆ ಕ್ರಮ ಕೈಗೊಳ್ಳುವ ಬಗ್ಗೆ ಅಧಿಕಾರವನ್ನು ಹೊಂದುವುದು ಸಮಂಜಸವಾದುದು ಎಂದು ನಾನು ಯಾವ ಹಿಂಜರಿಕೆಯೂ ಇಲ್ಲದೇ ಒಪ್ಪಿಕೊಳ್ಳುತ್ತೇನೆ ಮತ್ತು ಅದರ ಬಗ್ಗೆ ಯಾವುದೇ ರೀತಿಯ ವಿವಾದ ಇಲ್ಲ. ಇಲ್ಲದೆ ಇವು ಯಾವ ರೀತಿಯ ಅಧಿಕಾರವೆಂದರೆ; ರಾಜ್ಯದಲ್ಲಿ ಹಿಂಸೆ ಹರಡುವುದನ್ನು ಹಾಗೂ ಗಲಭೆಯಿಂದಾಗುವ ಅವ್ಯವಸ್ಥೆಯನ್ನು ಪರಿಣಾಮಕಾರಿಯಾಗಿ ತಡೆಯಲು ಅಗತ್ಯವಾದ ಅಧಿಕಾರ ನೀಡಲು ಕಾನೂನುಬೇಕು. ಅದನ್ನು ನಾನು ಮನಃಪೂರ್ವಕವಾಗಿ ಒಪ್ಪುತ್ತೇನೆ. ನಾನು "ಪತ್ರಿಕೋದ್ಯಮದ ಸ್ವಾತಂತ್ರ್ಯ" ಕುರಿತು ಭಾವನಾತ್ಮಕವಾದ ಅವಿವರಣಾತ್ಮಕ ಹಾಗೂ ಸ್ವಚ್ಛಂದವನ್ನು ನೀಡಬೇಕೆಂದು ಕರೆ ನೀಡುತ್ತಿದ್ದೇನೆಂದು ತಪ್ಪಾಗಿ ಅರ್ಥೈಸಿಕೊಳ್ಳಬೇಡಿ. ಆದರೆ ನನ್ನ ದೂರು ಇರುವುದು ಪ್ರಸ್ತುತ ಕ್ರಮದ ಬಗ್ಗೆ. ಇದು ನಾನು ವಿವರಿಸಿದ್ದಕ್ಕಿಂಥ ಹೆಚ್ಚಿನ ಅಧಿಕಾರವನ್ನು ಸರ್ಕಾರಕ್ಕೆ ನೀಡುತ್ತಿದೆ. ಕಳೆದ ಬಾರಿ ನಾನು ಮಾತನಾಡುವಾಗ ರಚನಾತ್ಮಕ ಸೂಚನೆಗಳನ್ನು ನೀಡಬೇಕೆಂದು ಸವಾಲೊಡ್ಡಿದ್ದರಿಂದ ಈಗ ನನ್ನ ಸೂಚನೆ ಈ ರೀತಿಯಿದೆ. ಪತ್ರಿಕೋದ್ಯಮದ ಕಡೆಯಿಂದ ಯಾವುದಾದರೂ ಕುಚೋದ್ಯದ

ಪ್ರಚಾರವಿದ್ದರೆ ಅದನ್ನು ತಡೆಗಟ್ಟಲು ರಾಜ್ಯದ ಸಾಮಾನ್ಯ ಕಾನೂನುಗಳನ್ನು ಬಳಸಬಹುದು. ಆದರೆ ದೇಶದ ಸಾಮಾನ್ಯ ದಂಡರೂಪದ ಕಾನೂನುಗಳು ನೀವು ಗಮನಿಸಿರುವಂಥ ಅಪರಾಧಗಳಿಗೆ ಸಾಲುವುದಿಲ್ಲ ಎಂಬ ನಿರ್ಧಾರಕ್ಕೇನಾದರೂ ಬಂದಿದ್ದರೆ, ನೀವು ಅಥವಾ ದಂಡ ಸಂಹಿತೆಯ ಲೇಖಕರು ಉದ್ದೇಶಿಸಿರದಂಥ ಅಪರಾಧವನ್ನು ಪತ್ರಿಕೋದ್ಯಮ ಸೃಜಿಸುತ್ತದೆ ಎಂದು ನೀವು ಭಾವಿಸಿದ್ದರೆ, ಹೊಸ ಬಗೆಯ ಲೋಪದೋಷಗಳು ಉದ್ಭವಿಸುತ್ತವೆನ್ನುವುದಾದರೆ, ನಾನು ಹೇಳುವುದೇನೆಂದರೆ, ಸಂಪಾದಕ ಹಾಗೂ ಮಾಲೀಕರನ್ನು ದಯವಿಟ್ಟು ನಿಮ್ಮ ಗಣನೆಯಿಂದ ತೆಗೆದುಹಾಕಬೇಡಿ. ವಸ್ತುತಃ ಈ ಉದ್ಯಮದಲ್ಲಿ ಅವರು ಅತ್ಯಂತ ಬಲಿಷ್ಠರಾದ ಪಾಲುದಾರರು. ಉದ್ಯಮವು ಸ್ಥೂಲವಾಗಿ ನಾಲ್ಕು ಜನ ಪಾಲುದಾರರನ್ನು ಹೊಂದಿರುತ್ತದೆ. ಮೊದಲನೆಯದಾಗಿ ಮಾಲೀಕರು, ಇವರು ಬಂಡವಾಳವನ್ನು ಹೂಡುತ್ತಾರೆ. ಎರಡನೆಯದಾಗಿ ಸಂಪಾದಕರು. ಇವರು ಬುದ್ಧಿಶಕ್ತಿಯನ್ನು ಧಾರೆ ಎರೆಯುತ್ತಾರೆ. ಆನಂತರ ಮುದ್ರಕರು ಹಾಗೂ ಕೊನೆಯದಾಗಿ ಪ್ರಕಾಶಕರು ಬರುತ್ತಾರೆ. ಈ ಸೂಚನೆಗಳನ್ನು ನಾನು ಈಗ ಸರ್ಕಾರಕ್ಕೆ ನೀಡಬಯಸುತ್ತೇನೆ: ಜಿಲ್ಲಾ ದಂಡಾಧಿಕಾರಿಗಳ ಸಮ್ಮುಖದಲ್ಲಿ ಮುದ್ರಕರು ಮತ್ತು ಪ್ರಕಾಶಕರು ಮಾತ್ರರಲ್ಲದೆ ಮಾಲೀಕರು ಹಾಗೂ ಸಂಪಾದಕರು ಸಹ ಘೋಷಣೆಯನ್ನು ಮಾಡಬೇಕೆಂಬುದನ್ನು ಅಗತ್ಯಪಡಿಸಲು ನೀವು ಬಯಸಿದರೆ ಕಾನೂನಿನ ಮೂಲಕ ಅಧಿಕಾರವನ್ನು ಪಡೆಯಿರಿ. ಇದು ನನ್ನ ಮೊದಲ ನಿವೇದನೆಯಾಗಿರುತ್ತದೆ.

ಆ ಘೋಷಣೆಯು ಒಂದು ರೀತಿಯಲ್ಲಿ ಸಮಾಚಾರ ಪತ್ರಿಕೆಗಳ ಅವುಗಳ ಮಾಲೀಕರ ಮತ್ತು ಸಂಪಾದಕರ ನೋಂದಣಿ ವಹಿಯಾಗಿ ರೂಪುಗೊಳ್ಳುತ್ತದೆ. ಘೋಷಣೆಯನ್ನು ಸಲ್ಲಿಸಲು ಯಾವುದೇ ಶುಲ್ಕ ಇಲ್ಲದಿರುವುದರಿಂದ, ಎಂದರೆ ಯಾವುದೇ ರೀತಿಯ ಭದ್ರತಾ ಠೇವಣಿಯನ್ನು ಮುಂಚಿತವಾಗಿ ಪಾವತಿಸದಿರುವುದರಿಂದ ದಂಡಾಧಿಕಾರಿಗಳ ಮುಂದೆ ಹಾಜರಾಗಿ ನಿರ್ದಿಷ್ಟ ಮುದ್ರಣಗಾರನು ಅಥವಾ ಪ್ರಕಾಶಕನು ಅಥವಾ ಸಂಪಾದಕನು ಅಥವಾ ಮಾಲೀಕನು ಅಥವಾ ಎಲ್ಲರೂ ಸೇರಿ ಮಾಡಲಾಗಿರುವ ಘೋಷಣೆಯನ್ನು ರದ್ದುಗೊಳಿಸುವಂತೆ ಮನವಿ ಮಾಡಿಕೊಳ್ಳಲು ತನ್ನದೇ ಆದ ಏಜೆನ್ಸಿಯನ್ನು ನೇಮಿಸುವುದಕ್ಕೆ ಸರ್ಕಾರಕ್ಕೆ ಸ್ವಾತಂತ್ರ್ಯವಿರುತ್ತದೆ. ಸರ್ಕಾರವು ತನ್ನ ಸರ್ಕಾರಿ ಅಭಿಯೋಜಕರು ಅಥವಾ ಈ ಕೆಲಸಕ್ಕಾಗಿಯೇ ನೇಮಗೊಂಡಿರುವ ವಿಶೇಷ ವಕೀಲರು ಅಥವಾ ಪೊಲೀಸ್ ಅಧಿಕಾರಿಯು ಜಿಲ್ಲಾ ದಂಡಾಧಿಕಾರಿಗಳ ಮುಂದೆ ಹಾಜರಾಗಿ ಮಾಹಿತಿ

ಹಾಳೆಯನ್ನು ಮಂಡಿಸಿ ಯಾವುದೇ ವೃತ್ತ ಪತ್ರಿಕೆ ಅಥವಾ ಹಾಳೆಯ ಸಂಬಂಧದಲ್ಲಿ ಒಂದು ನಿರ್ದಿಷ್ಟ ಪಕ್ಷ ಅಥವಾ ಪಕ್ಷಗಳು ಮಾಡಿದ ಘೋಷಣೆಯನ್ನು ರದ್ದುಗೊಳಿಸುವಂತೆ ಕೋರಲು ವ್ಯವಸ್ಥೆಯನ್ನು ಜಾರಿಗೆ ತರಬಹುದು. ಸ್ವಾಮಿ, ಘೋಷಣೆ ಅಥವಾ ಘೋಷಣೆಗಳನ್ನು ಅಮಾನತ್ತುಗೊಳಿಸುವ ಅಧಿಕಾರ ಜಿಲ್ಲಾ ದಂಡಾಧಿಕಾರಿಗಳಿಗೆ ಇರಬೇಕು ಹಾಗೂ ಘೋಷಣೆಯ ಅಮಾನತ್ತು ಅವಧಿಯಲ್ಲಿ ಸಂಬಂಧಪಟ್ಟ ವಾರ್ತಾಪತ್ರಿಕೆಗಳನ್ನು ಪ್ರಕಟಿಸಬಾರದು ಮತ್ತು ಸಂಬಂಧಪಟ್ಟವರು ತಮ್ಮ ಪ್ರಕಟಣಾ ಚಟುವಟಿಕೆಗಳನ್ನು ನಡೆಸಬಾರದು. ಘೋಷಣೆಯನ್ನು ಅಮಾನತ್ತುಗೊಳಿಸಿದ ನಂತರ ಜಿಲ್ಲಾ ದಂಡಾಧಿಕಾರಿಗಳು ಸಂಬಂಧಪಟ್ಟ ಅಧಿಕಾರಿಗಳಿಗೆ ನೋಟೀಸನ್ನು ನೀಡಬಹುದು ಹಾಗೂ ಅವರನ್ನು ವಿಚಾರಣೆ ಮಾಡಿದ ನಂತರ ಅಮಾನತ್ತನ್ನು ಖಚಿತಪಡಿಸಬಹುದು. ಅಥವಾ ಘೋಷಣೆಯನ್ನು ಶಾಶ್ವತವಾಗಿ ರದ್ದುಗೊಳಿಸಬಹುದು; ಅಥವಾ ಅಮಾನತ್ತನ್ನು ಅಥವಾ ರದ್ದಿಯಾತಿಯನ್ನು ರದ್ದುಗೊಳಿಸಬಹುದು. ಇಷ್ಟು ಸಾಕೆಂದು ನನಗನ್ನಿಸುತ್ತಿದೆ.

**ಶ್ರೀಯುತ ಕೆ. ಆರ್ ಸುಬ್ಬಣ್ಣಾಚಾರ್:** ಇದು ಕ್ರಿಯಾಲೋಪವಾಗುತ್ತದೆ. ಈ ಬಗ್ಗೆ ಈ ಹಂತದಲ್ಲಿ ತಿದ್ದುಪಡಿಗಳನ್ನು ಮಂಡಿಸಲು ಶ್ರೀಯುತರಿಗೆ ಯಾವುದಾದರು ಹಕ್ಕು ಇದೆಯೇ?

**ಶ್ರೀಯುತ ಸಭಾಧ್ಯಕ್ಷರು:** ಅವರು ನೀಡುತ್ತಿರುವ ಸಲಹೆಗಳು ಈ ಮಸೂದೆಯಲ್ಲಿ ಆಕ್ಷೇಪಿಸಲ್ಪಟ್ಟ ಉಪಬಂಧಗಳಷ್ಟೇ ತೀವ್ರವಾದುದಾಗಿದೆ.

**ಶ್ರೀಯುತ ಬೇಲೂರು ಶ್ರೀನಿವಾಸ ಐಯ್ಯಂಗಾರ್:** ಅಷ್ಟು ನಿಕೃಷ್ಟವಾಗೇನಿಲ್ಲ.

**ರಾಜಚರಿತವಿಶಾರದ ರಾವ್ ಸಾಹೇಬ್ ಸಿ ಹಯವದನ್‌ರಾವ್:** ನಿಮ್ಮ ಸೂಚನೆಯ ಬಗ್ಗೆ ನಾವು ಸೂಕ್ತ ಸಮಯದಲ್ಲಿ ಗಮನಹರಿಸುತ್ತೇವೆ.

**ಶ್ರೀಯುತ ಡಿ. ವಿ. ಗುಂಡಪ್ಪ:** ಸೂಕ್ತ ಸಮಯದಲ್ಲಿ ನನ್ನನ್ನು ಟೀಕಿಸಲು ನನ್ನ ಸ್ನೇಹಿತರಿಗೆ ಸದಾವಕಾಶ ಒದಗಲಿದೆ. ನನ್ನ ಅನಿಯತತೆಯನ್ನು ಗುರುತಿಸುವಲ್ಲಿ ಹಾಗೂ ಸಭಾ ಮರ್ಯಾದೆಯನ್ನು ಕಾಪಾಡಲು ಸಭಾಧ್ಯಕ್ಷರು ಸಾಕಷ್ಟು ಕಾಳಜಿ ವಹಿಸುತ್ತಾರೆ ಎಂಬ ಬಗ್ಗೆ ನನಗೆ ವಿಶ್ವಾಸವಿದೆ. ನಾನು ಹೇಳುವುದೇನೆಂದರೆ– ಒಂದು ಪಕ್ಷ ಜಿಲ್ಲಾಧಿಕಾರಿಯವರು ರದ್ದುಪಡಿಸಿದ ಅಥವಾ ಅಮಾನತ್ತುಗೊಳಿಸಿದ ಘೋಷಣೆಯನ್ನು ಪ್ರಶ್ನಿಸುವುದಾದರೆ ಅದನ್ನು ಉಚ್ಚ ನ್ಯಾಯಾಲಯದ ಮುಂದೆ ಪ್ರಶ್ನಿಸುವಂತಿರಬೇಕು. ಉಚ್ಚ ನ್ಯಾಯಾಲಯದ ತೀರ್ಮಾನವೇ ಅಂತಿಮವಾಗಿರಬೇಕು.

ಮಾನ್ಯರೇ ನಾನು ಯಾವುದೇ ರೀತಿಯ ಹಣಕಾಸಿನ ದಂಡವನ್ನು ಉದ್ದೇಶಿಸಿಲ್ಲ. ನೀವು ಗಮನಿಸಿರುವಂತೆ ಪ್ರಸ್ತಾಪಿಸಲ್ಪಟ್ಟಿರುವ ಕಾನೂನು ಕ್ರಮದಂತೆಯೇ ಇದು ಕೂಡ ಪರಿಣಾಮಕಾರಿಯಾದದ್ದು. ಪತ್ರಿಕಾಲಯ ಹೊಂದಿರುವ ಪ್ರತಿಯೊಬ್ಬರ ಸಂಬಂಧದಲ್ಲಿ ಜಿಲ್ಲಾ ದಂಡಾಧಿಕಾರಿಗಳು ಇಟ್ಟುಕೊಳ್ಳಬೇಕೆಂದು ಉದ್ದೇಶಿಸಲಾದ ಪೂರ್ವಗ್ರಹಿಕೆಯೇ ಪ್ರಸ್ತುತ ಕಾನೂನು ಕ್ರಮದಲ್ಲಿನ ಮೊದಲ ದೋಷ ಎಂದು ನಾನು ಭಾವಿಸಿದ್ದೇನೆ. ಅಪರಾಧ ಮಾಡುವ ಮೊದಲೇ ಪತ್ರಿಕೋದ್ಯಮಿಗಳನ್ನು ಠೇವಣಿ ಇಡುವಂತೆ ಕೋರುವುದು ಜಿಲ್ಲಾದಂಡಾಧಿಕಾರಿಗಳಿಗೆ ಸಾಧ್ಯವೇ? ಪ್ರಸ್ತಾಪಿಸಲ್ಪಟ್ಟಿರುವ ಕಾನೂನಿನಲ್ಲಿ ಅದೇ ಮೊದಲ ದೋಷವಾಗಿದೆ. ಇದು ಇಡೀ ವಿಧೇಯಕದ ಮೊದಲ ವಿಷಬೀಜವಾಗಿದೆ. ವಾಸ್ತವಿಕವಾಗಿ ಹಳೆಯ ಅಧಿನಿಯಮದ ಬಗ್ಗೆ ನನ್ನ ಆಕ್ಷೇಪಣೆ ಇಷ್ಟೇ. ಅದು ಪೂರ್ವಭಾವಿ ಕಲ್ಪನೆಯ ಮೇಲೆ ಆಧರಿತವಾಗಿದೆ-ಎಂದರೆ, ವೃತ್ತ ಪತ್ರಿಕೆಯ ಭಾವಿ ಸಂಪಾದಕ ಅಥವಾ ಮಾಲೀಕ ಅಥವಾ ಪ್ರಕಾಶಕನ ವಿರುದ್ಧ ಪೂರ್ವಭಾವಿ ಕಲ್ಪನೆ ಮಾಡಲು ಅವಕಾಶ ಮಾಡಿಕೊಟ್ಟಿದೆ. ಹಿಂದಿನ ಅಧಿನಿಯಮದಡಿಯಲ್ಲಿ ಪ್ರತಿಯೊಬ್ಬ ಭಾವಿ ಸಂಪಾದಕನಾಗಲಿ ಅಥವಾ ಮಾಲೀಕನಾಗಲಿ ಅನುಮತಿ ಪಡೆಯಲು ನಿಮ್ಮನ್ನು ಕೋರಿಕೊಳ್ಳಬೇಕಾಗಿತ್ತು. ಅವನು ನಿಮ್ಮ ಅನುಮತಿ ಪಡೆಯದಿದ್ದರೆ ಅವನು ತಪ್ಪು ಮಾಡಬಹುದು ಮತ್ತು ಅವನು ಸಲ್ಲದುದನ್ನು ಮಾಡುವ ವ್ಯಕ್ತಿಯಾಗುತ್ತಾನೆಂಬುದು ನಿಮ್ಮ ಹಳೆಯ ಅಭಿಪ್ರಾಯವಾಗಿತ್ತು. ಹೊಸ ಮಸೂದೆಯಲ್ಲೂ ಸಹ ಒಬ್ಬ ಮುದ್ರಣಕಾರನು ಅವನ ಪತ್ರಿಕಾಲಯವನ್ನು ದುರುಪಯೋಗ ಪಡಿಸಿಕೊಳ್ಳಬಹುದು. ಆದ್ದರಿಂದ ಅವನು ತನ್ನ ವೃತ್ತಪತ್ರಿಕೆಯ ಅಥವಾ ಸುದ್ದಿ ಹಾಳೆಯ ಮೊದಲ ಪ್ರತಿಯನ್ನು ಹೊರತರುವ ಮುನ್ನವೇ ಅವನಿಂದ ಭದ್ರತೆಯನ್ನು ಪಡೆಯಬೇಕು ಎಂಬ ಕಲ್ಪನೆ ನಿಮಗೆ ಇದೆ. ಇದು ಸರಿಯಾದ ಕ್ರಮ ಎನ್ನುವುದು ನಿಮ್ಮ ಭಾವನೆಯಾಗಿದೆ. ಇದೇ ಈ ಕಾನೂನಿನ ಕ್ರಮದ ಮೂಲಕ ಮಾಡುತ್ತಿರುವ ಅಪರಾಧದ ಸಾರಾಂಶ. ಈ ಕ್ರಮವು ಮುಂದಿನ ಸಂವಿಧಾನಾತ್ಮಕ ಸುಧಾರಣೆಗಳಿಗೆ ವಿಷಾದನೀಯ ಹಾಗೂ ಕಟುವಾದ ಪೀಠಿಕೆಯನ್ನು ಹಾಕುತ್ತದೆ. ಒಂದು ವೇಳೆ ಸರ್ಕಾರವು ಇದು ಅಗತ್ಯವಾಗಿ ಬೇಕೇ ಬೇಕು ಎಂದು ಒತ್ತಾಯಿಸಿದರೆ ಮತ್ತು ಇದನ್ನೇ ಪಟ್ಟು ಹಿಡಿದರೆ ಮುಂದೆ ಯಾವ ರೀತಿಯ ಮುನ್ನಡೆಗಳು ಆಗಬಹುದೆಂದು ನಾವು ಸುಲಭವಾಗಿ ಊಹಿಸಬಹುದು. ನಿಜವಾಗಲೂ ಇದು ಹತಾಶೆಯ ವಿಷಯ.

ಸ್ವಾಮಿ, ಅದನ್ನು ಸಂವಿಧಾನಾತ್ಮಕ ಸುಧಾರಣಾ ಸಮಿತಿಯು, ಸಮಯ ಬಂದಾಗ, ಮಂಡಿಸುವ ಅದರ ವರದಿಯ ಬಗ್ಗೆ ಪೂರ್ವಾಗ್ರಹ ಪೀಡಿತವಾಗುವಂತಹ ವಾತಾವರಣವನ್ನು ಸೃಷ್ಟಿಸುತ್ತದೆ. ಪ್ರತಿಯೊಬ್ಬನನ್ನು ಇದು ಧೃತಿಗೆಡಿಸುತ್ತದೆ. ಇದನ್ನು ವಿರೋಧಿಸುವ ರೀತಿಯಲ್ಲಿ ಜನ ಸಾಮಾನ್ಯರ ಮನಸ್ಸನ್ನು ಸಿದ್ಧಗೊಳಿಸುತ್ತದೆ ಹಾಗೂ ಜನರು ಆ ಬಗ್ಗೆ ವಿರೋಧಿಸುವಂತೆ ಅವರ ಮನಸ್ಸನ್ನು ಸಿದ್ಧಗೊಳಿಸಿರುವುದರಿಂದ ವರದಿಯನ್ನು ಪೂರ್ವಾಗ್ರಹಪೀಡಿತ ವಾತಾವರಣದಲ್ಲಿ ಮಂಡಿಸಿದಂತಾಗುತ್ತದೆ. ಸ್ವಾಮಿ ಇದರ ಪರಿಣಾಮಗಳು ದುಃಖಕರವಾದದ್ದು ಹಾಗೂ ಅಂತ್ಯವಿಲ್ಲದ್ದಾಗುತ್ತದೆ. ಈ ಹಿನ್ನೆಲೆಯಲ್ಲಿ ತಾವು ಈ ಕ್ರಮವನ್ನು ಕೈಬಿಟ್ಟು ಈಗಿರುವ ಅಂದರೆ 1908ರ ಹಳೆಯ ಅಧಿನಿಯಮವನ್ನೇ ಇಟ್ಟುಕೊಳ್ಳಬೇಕೆಂದು ನಾನು ವಿನಯಪೂರ್ವಕವಾಗಿ ತಮ್ಮಲ್ಲಿ ವಿನಂತಿಸುತ್ತೇನೆ. ಈ ವಿಷಯವು ಹೊಸ ಸಂವಿಧಾನದ ಮೇರೆಗೆ ಶಾಸಕಾಂಗದ ಮುಂದೆ ಬರುವ ತನಕ ಶಾಸನ ಪುಸ್ತಕದಲ್ಲಿ ಮುಂದುವರೆಸಬಹುದೆಂದು ಹೊಂದಾಣಿಕೆ ಮಾಡಿಕೊಳ್ಳುತ್ತೇನೆ. ನಾವೆಲ್ಲರೂ ಹೊಸ ಸಂವಿಧಾನದ ನಿರೀಕ್ಷೆಯಲ್ಲಿದ್ದೇವೆ. ಆಗ ಹೊಸ ವಿಧಾನ ಪರಿಷತ್ತು ವಿಧಾನಸಭೆ ಅಸ್ತಿತ್ವಕ್ಕೆ ಬರುತ್ತದೆ. ಹೊಸ ವಿಧಾನಮಂಡಲವು ಈ ವಿಷಯವನ್ನು ನಿರ್ಧರಿಸಲಿ ಎಂದು ಬಿಟ್ಟುಬಿಡುವಂತೆ ತಮ್ಮಲ್ಲಿ ನಾನು ಗೌರವಪೂರ್ವಕವಾಗಿ ಕೋರುತ್ತೇನೆ.

(ಆಯ್ಕೆ ಸಮಿತಿಯ ವರದಿಯನ್ನು ಮತ್ತು ತಿದ್ದುಪಡಿಗಳನ್ನು ಆಧರಿಸಿ ಸಿದ್ಧಪಡಿಸಿದ ಅಧಿನಿಯಮವನ್ನು ಪ್ರಥಮ ಸದಸ್ಯರು ಮಂಡಿಸಿ ಸರ್ಕಾರದ ಕಾನೂನು ಇಲಾಖೆಯ ಕಾರ್ಯದರ್ಶಿಗಳು ಅದನ್ನು ಅನುಮೋದಿಸಿತ್ತಾರೆ. ಆಗ–)

**ಶ್ರೀಯುತ ಡಿ. ವಿ. ಗುಂಡಪ್ಪ:** ಸ್ವಾಮಿ, ನಿಮ್ಮ ಅನುಮತಿಯಿಂದ ಈ ಕ್ರಮದ ಬಗ್ಗೆ ನನ್ನ ವಿರೋಧವು ಸ್ವಲ್ಪವೂ ಕಡಿಮೆಯಾಗುವುದಿಲ್ಲ ಮತ್ತು ಬಲವಾಗಿಯೇ ಇರುತ್ತದೆ ಎಂದು ತಮಗೆ ತಿಳಿಸಲು ನಾನು ಇಷ್ಟಪಡುತ್ತೇನೆ. ಈ ದಿನವೂ ನಾನು ಅದೇ ಕಾರಣಗಳನ್ನು ಮತ್ತೆ ವಿವರವಾಗಿ ಹೇಳಲು ನಾನು ಇಷ್ಟಪಡುವುದಿಲ್ಲ. ಒಂದು ವಿಷಯದ ಬಗ್ಗೆ ನಾನು ಸಂಕ್ಷಿಪ್ತ ವಿವರಣೆ ನೀಡಬೇಕಾಗಿದೆ. ಈಗ 12 ತಿಂಗಳ ಹಿಂದೆ ಸದರಿ ವಿಧೇಯಕವು ಸದನದ ಮುಂದೆ ಇದ್ದಾಗ, ಆಗ ವಿಸ್ತರಿಸಲಾದ ಆಯ್ಕೆ ಸಮಿತಿಯಲ್ಲಿ ನನ್ನ ಇರುವಿಕೆಯೇ ಪವಾಡಗಳನ್ನು ಮಾಡುತ್ತದೆಂದು ನಿರೀಕ್ಷಿಸಲಾಗಿತ್ತು. ಆದರೆ ನನಗೆ ಆ ಗೌರವ ಬೇಡವೆಂದು ಹೇಳಿದುದು ನಿಮಗೆ ನೆನಪಿರಬೇಕು. ಆದರೆ ಕೆಲವು ಸದಸ್ಯರು, ಪ್ರಸ್ತಾವವನ್ನು ಮಂಡಿಸಿದ ಗೌರವಾನ್ವಿತರ ಹಾಗೂ ಸಭಾಧ್ಯಕ್ಷರು ಒತ್ತಾಯ ಮಾಡಿ ಆಹ್ವಾನಿಸಿದರು

ಹಾಗೂ ಮತ್ತೊಬ್ಬ ನನ್ನ ಒಳ್ಳೆಯ ಸ್ನೇಹಿತ ನನ್ನನ್ನು ಒಳಗೆ ಸೆಳೆದುಕೊಳ್ಳಬೇಕೆಂದು ಒತ್ತಾಯಿಸಿದರು. ಅವರೆಲ್ಲರ ಅಭಿಮಾನಪೂರ್ವ ಒತ್ತಾಯಕ್ಕೆ ಮಣಿಯಬೇಕಾಯಿತು. ಆದರೆ ಸಮಿತಿಗೆ ಸೇರುವುದರಿಂದ ಯಾವುದೇ ರೀತಿಯ ಉಪಯೋಗವಿಲ್ಲ ಎಂದು ನನ್ನ ಆ ಕ್ಷಣದ ಅನಿಸಿಕೆ ಹಾಗೂ ಅಳುಕನ್ನು ಮುಂದಿನ ಅನುಭವ ಸಾಬೀತುಪಡಿಸಿತು; ಅಲ್ಲದೆ ನಾನು ಸಾಧಿಸಬೇಕೆಂಬ ಉದ್ದೇಶವನ್ನು ಸಾಧಿಸಲಾರದೆ ಹೋದೆ.

ನಾನು ಸಮಿತಿಯಲ್ಲಿ ಏನನ್ನು ಮಾಡಲು ಪ್ರಯತ್ನಪಟ್ಟಿದ್ದೆ ಎಂಬುದನ್ನು ತಿಳಿಸಲಿಚ್ಛಿಸುತ್ತೇನೆ. ವೃತ್ತ ಪತ್ರಿಕೆಗಳಿಗೆ ಸಂಬಂಧಿಸಿದಂತೆ ಈಗಿರುವ ಕಾನೂನನ್ನು ಪರೀಕ್ಷಿಸಿ ಹಾಗೂ ವೃತ್ತ ಪತ್ರಿಕೆಗಳ ನಿಯಂತ್ರಣದ ಬಗ್ಗೆ ಸರಿಯಾದುದೆಂದು ನಾನು ಪರಿಗಣಿಸಿದ ನಿಲುವನ್ನು ಸೂಚಿಸಿ ಕಳೆದ ವರ್ಷ ಫೆಬ್ರವರಿ 20ರಂದು ನಾನು ಒಂದು ಟಿಪ್ಪಣಿಯನ್ನು ಸಲ್ಲಿಸಿದ್ದೆ. ನಾನು ಸಮಿತಿಗೆ ಸಲ್ಲಿಸಿರುವ ಸಲಹೆಗಳಲ್ಲಿ ಮುಖ್ಯವಾದ ಅಂಶವೆಂದರೆ ಎಲ್ಲಾ ಪ್ರಕರಣಗಳಲ್ಲಿಯೂ ರಾಜ್ಯದ ನ್ಯಾಯಿಕ ಏಜೆನ್ಸಿ ಮತ್ತು ನ್ಯಾಯಿಕ ಏಜೆನ್ಸಿ ಮಾತ್ರವೇ ನಿಯಂತ್ರಿಸಬೇಕು ಮತ್ತು ಆಡಳಿತ ಕಾರ್ಯಾಂಗವು ನೀಡಿದ ದೂರು ಅಥವಾ ಮನವಿಯ ಮೇರೆಗೆ ನ್ಯಾಯಾಂಗವೇ ಕ್ರಮ ಕೈಗೊಳ್ಳಬೇಕು. ಮತ್ತು ಪಕ್ಷಕಾರರನ್ನು ವಿಚಾರಣೆಮಾಡುವುದು, ಸಾಕ್ಷಿಗಳನ್ನು ವಿಚಾರಣೆ ಮಾಡುವುದು, ಮೇಲ್ಮನವಿ ಮತ್ತು ಪರಿಷ್ಕರಣೆ ಇವುಗಳ ಸಂಬಂಧದಲ್ಲಿ ನ್ಯಾಯಾಲಯದ ಸಾಮಾನ್ಯ ಕಾರ್ಯವಿಧಾವನ್ನೇ ಅಳವಡಿಸಿಕೊಳ್ಳಬೇಕು. ತ್ವರಿತವಾಗಿ ಇತ್ಯರ್ಥಗೊಳಿಸಲು ದಂಡ ಪ್ರಕ್ರಿಯಾ ಸಂಹಿತೆಯ ಕಲಂ 241, ಇತ್ಯಾದಿಗಳಲ್ಲಿ ಸಮನ್ಸ್ ಪ್ರಕರಣಗಳಿಗೆ ಗೊತ್ತುಪಡಿಸಿರುವ ಕಾರ್ಯವಿಧಾನದಂತೆಯೇ ವಿಚಾರಣೆಯ ಕಾರ್ಯವಿಧಾನವು ಇರಬೇಕು ಎಂದು ನಾನು ಸಲಹೆ ನೀಡಿದ್ದೆ. ಪ್ರತಿಯೊಂದು ವೃತ್ತ ಪತ್ರಿಕೆಯ ಮಾಲೀಕ, ಸಂಪಾದಕ, ಮುದ್ರಕ ಮತ್ತು ಪ್ರಕಾಶಕರು ಪ್ರಸ್ತುತ ಜಾರಿಯಲ್ಲಿರುವ 1967ರ ಅಧಿನಿಯಮ XXV ರಲ್ಲಿ ಕೈಗೊಳ್ಳುವ ಪ್ರಾರಂಭಿಕ ಘೋಷಣೆಯಲ್ಲಿ ಹೇಳಿರುವುದೇ ನ್ಯಾಯಾಲಯವು ಕ್ರಮ ಕೈಗೊಳ್ಳಲು ಕಾರಣ ಒದಗಿಸಬೇಕೆಂದು ನಾನು ಸಲಹೆ ನೀಡಿದ್ದೆ. ದಂಡಾಧಿಕಾರಿಗಳಿಂದ ಅಧಿಕೃತಗೊಂಡ ಘೋಷಣೆ ಇಲ್ಲದೆ, ಯಾವುದೇ ಪತ್ರಿಕೆಯನ್ನು ಪ್ರಕಟಿಸುವಂತಿಲ್ಲ ಎಂಬ ನಿಯಮದಿಂದ ಯಾವುದೇ ರೀತಿಯ ವಿನಾಯಿತಿ ಇರಬಾರದು. ಸರ್ಕಾರದಿಂದ ಅಧಿಕೃತವಾದ ಒಂದು ಪ್ರಾಧಿಕಾರವು ಪತ್ರಿಕೆಯ ವಿರುದ್ಧ ದಂಡಾಧಿಕಾರಿಗಳಿಗೆ ದೂರನ್ನು ನೀಡಿದರೆ, ಆ ಬಗ್ಗೆ ಸಂಪೂರ್ಣವಾಗಿ ನ್ಯಾಯಿಕ ವಿಚಾರಣೆ ನಡೆಸಿ ನಂತರ ಸಂಪಾದಕನ ಘೋಷಣೆಯನ್ನು ಅಮಾನತ್ತುಗೊಳಿಸುವ ಅಥವಾ ರದ್ದುಗೊಳಿಸುವ ಅಥವಾ

ನಿಲ್ಲಿಸುವ ತೀರ್ಮಾನ ಕೈಗೊಳ್ಳುವ ಅವಕಾಶ ಅವರಿಗಿರಬೇಕು. ಮತ್ತು ಆ ಮೂಲಕ ಅಪರಾಧವೆಸಗಿದ ಪ್ರಕಟಣೆಯನ್ನು ಅಮಾನತುಗೊಳಿಸುವಂತೆ ಅಥವಾ ನಿಲ್ಲಿಸುವಂತೆ ಮಾಡಬೇಕು. ತುರ್ತುಪರಿಸ್ಥಿತಿಗಳನ್ನು ಎದುರಿಸಲು, ಘೋಷಣೆಯನ್ನು ಮೊದಲು ಅಮಾನತುಗೊಳಿಸಿ ವಿಚಾರಣೆಯನ್ನು ನಂತರ ನಡೆಸಲು ಅವಕಾಶ ಕಲ್ಪಿಸಿರುತ್ತೇನೆ. ಇದು ನಾನು ನೀಡಿರುವ ಟಿಪ್ಪಣಿಯ ಒಂದು ಸ್ಥೂಲ ಚಿತ್ರಣ. ನಮ್ಮ ಮುಂದಿರುವ ವಿಧೇಯಕದಲ್ಲಿರುವ ಮುಖ್ಯ ಆಕ್ಷೇಪಣೀಯವಾದ ಲೋಪದೋಷವನ್ನು ಕಿತ್ತುಹಾಕುವ ಕೆಲಸವನ್ನು ಸಾಧಿಸಬೇಕಾಗಿದೆ. ಅವುಗಳೆಂದರೆ:–

1. ಒಳ್ಳೆಯ ನಡತೆಯ ಆಧಾರವಾಗಿ ಮುಂಗಡ ಭದ್ರತಾ ಠೇವಣಿಯ ಅವಶ್ಯಕತೆ;

2. ಸ್ವತಂತ್ರ ವೃತ್ತ ಪತ್ರಿಕೆಯ ವಿರುದ್ಧ ಸಹಜವಾಗಿಯೇ ದೂರನ್ನು ಹೊಂದಿರುವ ಹಾಗೂ ಆ ಕಾರಣಕ್ಕೆ ಅನಾಸಕ್ತವಲ್ಲದ ಪಕ್ಷವಾಗಿರುವ ಆಡಳಿತ ಕಾರ್ಯಕಾರಿ ಏಜೆನ್ಸಿಯಿಂದ ಶಿಕ್ಷೆ ವಿಧಿಸುವಿಕೆ; ಮತ್ತು

3. ಒಂದು ಪತ್ರಿಕೆಯ ಕಾರ್ಯನೀತಿ ಮತ್ತು ಅದರಲ್ಲಿನ ವಿಷಯಗಳಿಗೆ ಜವಾಬ್ದಾರನಾದ ಸಂಪಾದಕನ ಪಲಾಯನತನ.

ಕ್ಷಮಿಸಿ, ನನ್ನ ಟಿಪ್ಪಣಿಯನ್ನು ಸಮಿತಿ ವಿವರವಾಗಿ ಪರಿಶೀಲಿಸಲಿಲ್ಲ ಎಂದು ಬೇಸರದಿಂದ ಹೇಳಿಕೊಳ್ಳುತ್ತಿದ್ದೇನೆ. ವಿಧೇಯಕವನ್ನು ಸಮಿತಿಯು ತನ್ನ ಕಾರ್ಯಗಳಿಗೆ ಆಧಾರವಾಗಿಟ್ಟುಕೊಳ್ಳಬೇಕು ಮತ್ತು ಸದಸ್ಯರುಗಳು ಅದರ ಸಾಮಾನ್ಯ ಸ್ವರೂಪವನ್ನು ಹಾಳುಮಾಡದೆ ಅದರ ಪರಿಚ್ಛೇಧಗಳಿಗೆ ಮಾತ್ರ ತಿದ್ದುಪಡಿಗಳನ್ನು ಸೂಚಿಸಬಹುದೆಂಬುದು ಅಧ್ಯಕ್ಷರ ಅಭಿಪ್ರಾಯ. ಅಂದರೆ ನಾವು ವಿವರಗಳನ್ನು ಬದಲಿಸಬಹುದೇ ಹೊರತು ಅದರ ಸಾಮಾನ್ಯ ಸ್ವರೂಪವನಲ್ಲ. ಈ ನಿರ್ಧಾರದ ಸರಿತಪ್ಪುಗಳ ಬಗ್ಗೆ ಪ್ರಶ್ನಿಸಲು ನನಗೆ ಈಗ ಆಸಕ್ತಿ ಇಲ್ಲ. ನನ್ನ ಕಷ್ಟವನ್ನು ತೋರಿಸಲು ಇದನ್ನು ಉಲ್ಲೇಖಿಸುತ್ತಿದ್ದೇನೆ. ನನ್ನ ಸಲಹೆಗಳನ್ನು ಕಾರ್ಯರೂಪಕ್ಕೆ ತರಬೇಕಾದರೆ ಬಹುಶಃ ವಿಧೇಯಕವನ್ನು ಸಂಪೂರ್ಣವಾಗಿ ಹೊಸದಾಗಿ, ಭಿನ್ನವಾದ ದೃಷ್ಟಿಕೋನದಿಂದ ರಚಿಸಿ ಪ್ರಾರೂಪಿಸಬೇಕಾಗುತ್ತಿತ್ತು. ಕಳೆದ ಜನವರಿಯಲ್ಲಿ ಈ ವಿಧೇಯಕವನ್ನು ಮತ್ತೊಮ್ಮೆ ಮಂಡಿಸಿದ ಸಮಯದಲ್ಲೇ ಇದನ್ನು ನಾನು ಊಹಿಸಿದೆ. ಆದರೆ ಆಯ್ಕೆ ಸಮಿತಿಯ ನಡವಳಿಗಳ ಪುಟ 39, 41, 45 ಮತ್ತು 46 ರಲ್ಲಿ ವರದಿಯಾದಂತೆ ಅನೇಕ ಸದಸ್ಯರುಗಳಿಂದ ಹಾಗೂ ಪ್ರಸ್ತಾವವನ್ನು ಮಂಡಿಸಿದವರಿಂದ

ಬಂದ ಅಭಿಪ್ರಾಯಗಳು ಮತ್ತು ಆಶ್ವಾಸನೆಗಳು, ಮತ್ತು ವಿಸ್ತರಿಸಲ್ಪಟ್ಟ ಸಮಿತಿಯು ಪತ್ರಿಕಾ ಮಾಧ್ಯಮದ ನಿಯಂತ್ರಣದ ವಿಷಯವನ್ನು ಆಮೂಲಾಗ್ರವಾಗಿ ಮತ್ತು ಹೊಸದಾಗಿ ಮತ್ತೆ ಪರಿಶೀಲಿಸಲು ಮತ್ತೆ ವಿಧೇಯಕವನ್ನು ಸಂಪೂರ್ಣವಾಗಿ ತಿದ್ದುಪಡಿಮಾಡಲು, ಅವಶ್ಯ ಬಿದ್ದರೆ ಪುನಃ ರಚಿಸಲು ಸ್ವಾತಂತ್ರ್ಯ ಹೊಂದಿರುತ್ತದೆ ಎಂದು ನನಗೆ ಆಗ ಅನಿಸಿತ್ತು. ಒಂದು ಉದಾಹರಣೆ ಇದನ್ನೇ ವಿಧೇಯಕದ ಪ್ರಭಾರದಲ್ಲಿದ್ದ ಸದಸ್ಯರು ಸಹ ಹೇಳಿದ್ದು:-

"ಆದ್ದರಿಂದ ಈ ವಿಧೇಯಕವು ಯಾವ ತತ್ವಗಳ ಆಧಾರದ ಮೇಲೆ ರೂಪುಗೊಳ್ಳಬೇಕು ಮತ್ತು ಮಿತಿಯಿಲ್ಲದೆ ಯಾವ ಯಾವ ವಿವರಗಳನ್ನು ಬದಲಾಯಿಸಬೇಕು ಎಂದು ಈಗ ನಾವು ನಿರ್ದರಿಸಹೋಗುವುದು ನಿರರ್ಥಕವಾಗುತ್ತದೆ. ಈ ಕುರಿತು ಜವಾಬ್ದಾರಿಯುತವಾಗಿ ಮತ್ತು ವಿಧೇಯಕದಲ್ಲಿರುವ ತತ್ವಗಳನ್ನು ಮಾನ್ಯ ಮಾಡಲೇಬೇಕೆಂಬ ತಿಳಿವಳಿಕೆಯಿಂದ ಈ ವಿಷಯವನ್ನು ಪರಿಶೀಲಿಸಲು ಸಮಿತಿಯ ವಿವೇಚನೆಗೆ ಬಿಡಬಹುದು. ಈಗ ಆ ತತ್ವಗಳನ್ನು ಮಂಡಿಸುವುದು ನಮ್ಮ ಕೆಲಸವಲ್ಲ. ಆ ಪರಿಶೀಲನಾ ಸಮಿತಿಯು ತನ್ನ ಎರಡನೇ ವರದಿಯನ್ನು ಸಲ್ಲಿಸಿದ ಮೇಲೆ ವಿಧೇಯಕವನ್ನು ಮೊದಲು ಮಂಡಿಸಿದ ರೂಪದಲ್ಲಿಯೇ ಸದನವು ಅನುಮೋದಿಸಬೇಕೆ ಎಂಬುದನ್ನು ಆಗ ನಾವು ಪರಿಶೀಲಿಸಬೇಕು".

"ಮಿತಿಯಿಲ್ಲದೆ" ಮತ್ತು "ಸಮಿತಿಯ ವಿವೇಚನೆಗೆ" ಎಂಬ ಎರಡು ವಾಕ್ಯಾಂಶಗಳಿಗೆ ನಾನು ನೀಡಿದ ವ್ಯಾಖ್ಯಾನ ಬಹಳ ಉದಾರವಾದುದು ಎಂದು ನನಗೆ ತಿಳಿಸಲಾಯಿತು ಮತ್ತು ಈಗಾಗಲೇ ವಿಧೇಯಕದಲ್ಲಿ ಅಡಕವಾದ ಯೋಜಿಸಲಾದ ಆಲೋಚನಾ ಕ್ರಮಕ್ಕೆ ನಾವು ಬದ್ಧರಾಗಿರಬೇಕೆಂದು ಹೇಳಿದಾಗಲೇ ನಾನೆಂದುಕೊಂಡಂತೆ ಈ ಸಮಿತಿಯಲ್ಲಿ ನನಗೆ ಜಾಗ ಇಲ್ಲ ಎಂಬುದು ಮನದಟ್ಟಾಯಿತು. ಆದರೂ ಆಶಾವಾದಿಯಾದ ನಾನು ನನ್ನ ಅಭಿಪ್ರಾಯವನ್ನು ಸಮಿತಿಯ ಮುಂದೆ ಇಡಲು ಮತ್ತು ನಾನು ನೀಡಿದ ಸಲಹೆಗಳನ್ನು ಸಾಧ್ಯವಾದ ಮಟ್ಟಿಗೆ ಅಳವಡಿಸಿಕೊಳ್ಳುವಂತೆ ಮಾಡಲು ಮತ್ತೆ ಪ್ರಯತ್ನಿಸುವ ಇಚ್ಛೆ ಹೊಂದಿದ್ದೆ. ಆದರೆ ನನ್ನ ಅನಾರೋಗ್ಯ ನನ್ನನ್ನು ತಡೆಗಟ್ಟಿತು. ಹಿಂದಿನ ಸೆಪ್ಟೆಂಬರ್ 28 ರಂದು ನಾನು ರಾಜೀನಾಮೆ ಸಲ್ಲಿಸಬೇಕಾಯಿತು. ಹಾಗೆ ಮಾಡುವಾಗ, ಈ ವಿಷಯ ಕುರಿತಾದ ನನ್ನ ಅಭಿಪ್ರಾಯಗಳನ್ನು ತನ್ನ ವರದಿಯಲ್ಲಿ ದಾಖಲಿಸುವಂತೆ ಸಮಿತಿಯನ್ನು ಕೇಳಿಕೊಂಡಿದ್ದೆನು. ಅವುಗಳು ಈ ಕೆಳಗಿನಂತಿವೆ:

1. ಪತ್ರಿಕಾ ಮಾಧ್ಯಮಕ್ಕೆ ಸಂಬಂಧಿಸಿದಂತೆ ಈ ರೀತಿಯ ಶಾಸನವನ್ನು ತರಲು ಈ ಸಮಯವು ಸೂಕ್ತವಾಗಿಲ್ಲವೆಂಬ ಭಾವನೆ ನನ್ನಲ್ಲಿ ಉಂಟಾಗುತ್ತಿದೆ. ರಾಜಕೀಯ ವಾತಾವರಣವೂ ಕೂಡ ಅಂಧಕಾರಮಯವಾಗಿದೆ ಮತ್ತು ಕ್ಲಿಷ್ಟವಾಗಿದೆ. ಹಾಗೂ ಜನರ ಮನಸ್ಸು ವಿವಿಧ ಭಾವನೆಗಳಿಂದ ತುಂಬಿಹೋಗಿದೆ.

2. ಅಲ್ಲದೆ, ನೂತನ ಮತ್ತು ಸುಧಾರಿತ ವಿಧಾನಮಂಡಲವು ರಚನೆಯಾಗಲಿರುವಾಗ ಹಳೆಯ ಮತ್ತು ಅವಧಿ ಮುಗಿಯಲಿರುವ ವಿಧಾನಮಂಡಲವು ಇಂತಹ ಪ್ರಮುಖ ವಿಷಯದಲ್ಲಿ ಹಸ್ತಕ್ಷೇಪ ಮಾಡುವುದು ನ್ಯಾಯವಲ್ಲವೆಂದು ನನಗನ್ನಿಸುತ್ತಿದೆ. ಆದ್ದರಿಂದ ನಿರೀಕ್ಷಣೆಯಲ್ಲಿರುವ ವಿಧಾನಮಂಡಲದ ಹೊಸ ಸದನಗಳು ರಚನೆಗೊಳ್ಳುವ ತನಕ ವಿಷಯವನ್ನು ಹೇಗಿದೆಯೋ ಹಾಗೆಯೇ ಬಿಡುವಂತೆ ಕೇಳಿಕೊಳ್ಳುತ್ತೇನೆ.

ಈ ಬಗ್ಗೆ ನಾನು ಹೇಳಬಯಸುವುದೇನೆಂದರೆ, ವೃತ್ತ ಪತ್ರಿಕೆಗಳೊಡನೆ ಪರಿಣಾಮಕಾರಿಯಾಗಿ ವ್ಯವಹರಿಸಲು ಸರ್ಕಾರಕ್ಕೆ ಈಗಿರುವ ಅಧಿಕಾರದಲ್ಲಿ ಯಾವುದೇ ರೀತಿಯ ನ್ಯೂನ್ಯತೆಯಿಲ್ಲ. 1939ರ ತುರ್ತು ಅಧಿನಿಯಮ, XXV; ಭಾರತೀಯ ದಂಡ ಸಂಹಿತೆ, ದಂಡ ಪ್ರಕ್ರಿಯಾ ಸಂಹಿತೆ ಮತ್ತು ಪೊಲೀಸ್ ಅಧಿನಿಯಮ ಇವುಗಳೆಲ್ಲವೂ 1908 ರ ವೃತ್ತ ಪತ್ರಿಕೆಗಳ ನಿಯಂತ್ರಣ ಕಾನೂನಿಗೆ ಸಾಕಷ್ಟು ಬಲ ನೀಡಿದ್ದಲ್ಲದೆ, ಸರ್ಕಾರಕ್ಕೆ ವೃತ್ತ ಪತ್ರಿಕೆಗಳ ಕಾರ್ಯನ್ನು ನಿಯಂತ್ರಿಸುವುದಕ್ಕೆ ಸಾಕಷ್ಟು ಅಧಿಕಾರವನ್ನು ನೀಡಿದೆ. ಹಾಗೂ ಈ ಅಧಿಕಾರದ ಯುಕ್ತತೆ ಮತ್ತು ಸಾಮರ್ಥ್ಯವನ್ನು ಸಾಬೀತುಪಡಿಸುವ ಅನೇಕ ಜ್ವಲಂತ ಉದಾಹರಣೆಗಳು ಇವೆ. ಮತ್ತೊಂದಡೆ ರಾಜ್ಯದಲ್ಲಿ ವೃತ್ತಪತ್ರಿಕೆಗಳು ಸಂಯಮ ಹಾಗೂ ಸ್ನೇಹಭಾವವನ್ನು ಪ್ರದರ್ಶಿಸುತ್ತಿವೆ. ಆದ್ದರಿಂದ ಪತ್ರಿಕಾ ಮಾಧ್ಯಮದ ಬಗ್ಗೆ ಶಾಸನ ತರಲು ಈ ತರಾತುರಿ ಏಕೆ ಹಾಗೂ ಅಂಥ ಅಗತ್ಯತೆ ಏನಿದೆ? ಅಕಸ್ಮಾತ್ತಾಗಿ ಇದ್ದರೂ, 1908ರ ಅಧಿನಿಯಮದ ವಿರುದ್ಧ 30 ವರ್ಷಗಳ ಕಾಲ ನಡಸಿದ ಚಳುವಳಿಯಿಂದ ಸರ್ಕಾರವು ಸಾಕಷ್ಟು ಒತ್ತಡಕ್ಕೆ ಒಳಗಾಗಿದೆ, ಮತ್ತು 10 ವರ್ಷ ಹಳೆಯದ್ಧಾದ ತನ್ನ ಭರವಸೆಗಳನ್ನು ನೆನಪಿಸಿಕೊಳ್ಳುತ್ತಿದೆ ಎಂತೆನ್ನುವುದಾದರೂ, ಈ ಪ್ರಸ್ತುತ ವಿಧೇಯಕವು ಯಾವುದೇ ರೀತಿಯ ಸೂಕ್ತ ಕ್ರಮವಾಗಿವುದಿಲ್ಲವೆಂದು ಹೇಳುತ್ತೇನೆ. ಹಿಂದೆ ಇದ್ದ ಪರವಾನಗಿ ಪದ್ಧತಿಯನ್ನು ರದ್ದುಗೊಳಿಸಿದಂತೆ

ತೋರಬಹುದು. ಆದರೆ ಅದಕ್ಕೆ ಬದಲಾಗಿ ಮಾಡಲು ಹೊರಟಿರುವುದು ಈ ಹಿಂದೆ ಇದ್ದದ್ದುದರ ನಿಕೃಷ್ಟವಾದ ರೂಪವನ್ನೇ! ಭದ್ರತಾ ಶೇವಣಿಯು ಸಚಿವಾಲಯವು ಸಾಧಿಸಬಯಸುವ ನಿಯಂತ್ರಣದ ರಹದಾರಿಯ ಮತ್ತೊಂದು ಅವತಾರವಷ್ಟೇ.

ಬೇರೆಲ್ಲಿಯೋ ಇಂಥ ಶಾಸನವಿದೆ ಎಂಬ ವಾದದಿಂದ ನಾನು ವಿಚಲಿತನಾಗುವುದಿಲ್ಲ. ಇದಕ್ಕೆ ನನ್ನ ಸ್ಪಷ್ಟ ಉತ್ತರವೇನೆಂದರೆ ಮೊದಲಯದಾಗಿ ಬೇರೆ ಕಡೆ ಇರುವ ಪರಿಸ್ಥಿತಿ ಇಲ್ಲಿ ಇಲ್ಲ. ಎರಡನೆಯದಾಗಿ ಆ ಪರಿಸ್ಥಿತಿಗೆ ಈ ರೀತಿಯ ಕಾನೂನು ಸರಿಯಾದ ಹಾಗೂ ತಕ್ಕ ಪರಿಹಾರವಲ್ಲ. ಎರಡು ವಿಧದಲ್ಲೂ, ಇದು ನಮಗೆ ಒಂದು ಕೆಟ್ಟ ನಿದರ್ಶನ.

ಪತ್ರಿಕಾ ನಿಯಂತ್ರಣದ ವಿಷಯದಲ್ಲಿ ಸದನವು ಒಂದು ಮೂಲಭೂತ ಸತ್ಯವನ್ನು ಮನದಟ್ಟು ಮಾಡಿಕೊಳ್ಳಬೇಕೆಂದು ನನ್ನ ಪ್ರಾರ್ಥನೆ. ಪತ್ರಿಕಾ ಸ್ವಾತಂತ್ರ್ಯ ಪತ್ರಿಕೋದ್ಯಮಿಯೊಬ್ಬನಿಗೇ ಸೇರಿದ ಹಕ್ಕಲ್ಲ. ಅದು ಪ್ರತಿಯೊಬ್ಬ ಸಾಮಾನ್ಯ ಪ್ರಜೆಯ ಮೂಲಭೂತ ಸ್ವಾತಂತ್ರ್ಯದ ಭಾಗ. ನನ್ನ ಆಸಕ್ತಿ ಪತ್ರಿಕೋದ್ಯಮಿಯ ಹಕ್ಕು ಅಥವಾ ಸುರಕ್ಷತೆ ಅಥವಾ ಹಿತಾಸಕ್ತಿ ಕುರಿತಾದುದಲ್ಲ; ಅದು ಸಮಾಜದ ಒಳಿತಿನ ವಿಷಯಗಳ ಬಗ್ಗೆ ಸಾಮಾನ್ಯ ಪ್ರಜೆಗಿರುವ ಹಕ್ಕು ಎಂಬುದು ನನ್ನ ಕಳಕಳಿ. ವರದಿಗಾರ ಮತ್ತು ಪ್ರಕಾಶಕರು ಸಾರ್ವಜನಿಕ ಕ್ಷೇಮಕ್ಕೆ ಸಂಬಂಧಪಟ್ಟಂತೆ ಕಂಡ ಮತ್ತು ಅನುಭವಿಸಿದ ಸಂಗತಿಗಳನ್ನು ತಿಳಿಯುವ ಹಕ್ಕು ಸಾಮಾನ್ಯ ಪ್ರಜೆಗೆ ಇರುತ್ತದೆ. ಪತ್ರಿಕೋದ್ಯಮಿ ಯಾವ ಹಕ್ಕನ್ನು ತನ್ನದು ಎಂದು ಹೇಳಿಕೊಳ್ಳುತ್ತಾನೋ ಅಥವಾ ಚಲಾಯಿಸುತ್ತಾನೋ, ಹಾಗೆ ಆತನು ಆ ರೀತಿ ತನ್ನ ಹಕ್ಕೆಂದು ಸಾಧಿಸುವುದು ಅಥವಾ ಚಲಾಯಿಸುವುದು ಸಾರ್ವಜನಿಕರ ಪರವಾಗಿ ಮತ್ತು ಸಾರ್ವಜನಿಕರ ಸೇವಕನಾಗಿ ಮಾತ್ರ. ಆದ್ದರಿಂದ ಸದರಿ ಮಸೂದೆಯು ಪತ್ರಿಕೋದ್ಯಮಿಯ ಮೂಲಭೂತ ಹಕ್ಕುಗಳಿಗೆ ತೊಂದರೆ ಉಂಟುಮಾಡುವುದಷ್ಟೇ ಅಲ್ಲ. ಅವನ ಮಾಲೀಕನಿಗೆ, ಎಂದರೆ ರಾಜ್ಯದ ಜನತೆಗೂ ತೊಂದರೆದಾಯಕವೇ. ನನ್ನ ಭಯದ ಮೂಲದ ಬಗ್ಗೆ ಅನುಮಾನವಿರುವವರು, ಶಿಕ್ಷಾರ್ಹ ಅಪರಾಧಗಳನ್ನು ಮತ್ತು ಅದರ ತಡೆಗಟ್ಟುವಿಕೆಯನ್ನು ವ್ಯಾಖ್ಯಾನಿಸಿರುವ ಕಲಂ 4ನ್ನು ಓದಿ ವಿವರವಾಗಿ ಪರಿಶೀಲಿಸಬೇಕು. ಇಲ್ಲಿನ ಪರಿಭಾಷೆಯ ಶೈಲಿ ಯಾವುದಕ್ಕಾದರೂ ಸುಲಭವಾಗಿ ಅನ್ವಯವಾಗುವಂತಹದೂ ಅಸ್ಪಷ್ಟವೂ ಹಾಗೂ ಎಲ್ಲವನ್ನು ಒಳಗೊಂಡಿರುವಂಥದೂ ಆಗಿದ್ದು, ಸರ್ಕಾರವು ಒಪ್ಪಿಕೊಳ್ಳದಂತಹ ಯಾವುದೇ ಪತ್ರಿಕೆ, ಬದಲಾವಣೆ ಅಥವಾ ಸುಧಾರಣೆಗಳ ಬಗ್ಗೆ ಜನರ ಮನಸ್ಸಿಗೆ ನಾಟುವಂತೆ ತಿಳಿಸಿ ಜನಾಭಿಪ್ರಾಯಗಳನ್ನು ಸಂಘಟಿಸುವ ಪ್ರತಿಯೊಂದು

ವಾರ್ತಾಪತ್ರಿಕೆಯನ್ನು ಸಂಕಷ್ಟಕ್ಕೆ ಸಿಲುಕಿಸುವುದು ಅತ್ಯಂತ ಸುಲಭವಾಗಿದೆ. ಇಂತಹ ಶಾಸನಗಳು ಉಂಟುಮಾಡಬಹುದಾದ ಮಾನಸಿಕ ಪರಿಣಾಮವೆಂದರೆ ವಾರ್ತಾಪತ್ರಿಕೆಗೆ ಸಂಬಂಧಪಟ್ಟ ಯಾರೊಬ್ಬರ ಸ್ವಾತಂತ್ರ್ಯಕ್ಕೆ ಯಾವುದೇ ರೀತಿಯಲ್ಲಿ ಸಹಾಯಕವಾಗುವುದಿಲ್ಲ. ನಿಷ್ಪಕ್ಷಪಾತತನ ಮತ್ತು ಖಂಡಿತವಾದಿತ್ವವಿರುವವನಿಗೆ ಗಂಡಾಂತರ ತಪ್ಪಿದ್ದಲ್ಲ. ಈ ಮಸೂದೆಯ ಭಯಂಕರ ಸಾಮರ್ಥ್ಯದ ಬಗೆಗಾಗಲೀ ಸರ್ಕಾರಕ್ಕೆ ಪೂಸಿಹೊಡೆಯುವ ಬೆನ್ನೆಲುಬಿಲ್ಲದ ಪತ್ರಿಕಾ ಮಾಧ್ಯಮದಿಂದ ಸಮಾಜಕ್ಕೆ ಉಂಟಾಗುವ ತೊಂದರೆಗಳ ಬಗೆಗಾಗಲೀ ನಾನು ಹೆಚ್ಚು ಬೆಳೆಸಿ ಹೇಳಲಾರೆ. ಈಗಿರುವುದಕ್ಕೆ ಒಪ್ಪಿ ವಿಧಾನಮಂಡಳದ ಮರುರಚನೆಯಾದ ತರುವಾಯ ಪತ್ರಿಕಾ ನಿಯಂತ್ರಣದ ಇಡೀ ಪ್ರಶ್ನೆಯನ್ನು ವಿಧಾನಮಂಡಲದ ಮುಂದೆ ಮಂಡಿಸಲಿ ಎಂದು ಸರ್ಕಾರವನ್ನು ಪ್ರಾಮಾಣಿಕವಾಗಿ ಕೇಳಿಕೊಳ್ಳುತ್ತೇನೆ.

ವಿಸ್ತಾರಗೊಂಡ ಪರಿಶೀಲನಾ ಸಮಿತಿಯು ಸೂಚಿಸಿರುವ ತಿದ್ದುಪಡಿಗಳ ಬಗ್ಗೆ ನನ್ನ ಅಭಿಪ್ರಾಯ ಏನೂ ಇಲ್ಲ. ಅದರಲ್ಲಿ ಚರ್ಚಿಸಲಾಗಿರುವ ವಿಷಯಗಳು ಪ್ರಮುಖವಾದುವಲ್ಲ ಅಥವಾ ನಿರ್ಣಾಯಕ ಮಹತ್ವವುಳ್ಳದಲ್ಲ. ದಂಡ ಅಥವಾ ಭದ್ರತೆಯ ಮೊತ್ತವನ್ನು ಅಥವಾ ಬಂಧನದ ಅವಧಿಯನ್ನು ತಗ್ಗಿಸುವ ವಿಷಯಗಳು ನನ್ನ ಮಟ್ಟಿಗೆ ಮಹತ್ವದ್ದು ಅಲ್ಲವೇ ಅಲ್ಲ.

ಡಿ. ಹೆಚ್. ಚಂದ್ರಶೇಖರಯ್ಯನವರು ಶ್ರಮವಹಿಸಿ ರಚಿಸಿರುವ ತಿದ್ದುಪಡಿಗಳ ಬಗ್ಗೆ ಒಂದು ಮಾತು ಹೇಳುತ್ತೇನೆ. ತಮ್ಮ ಮಿತಿಯಲ್ಲಿ ಉತ್ತಮವಾಗಿದ್ದರೂ ನಾನು ಅವನ್ನು ಬೆಂಬಲಿಸಲಾರೆ ಎಂಬ ಬಗ್ಗೆ ನನಗೆ ಖೇದವಿದೆ. ಏಕೆಂದರೆ, ಅದರ ಪರವಾಗಿ ನಾನು ಮತ ನೀಡಿದರೆ ಅದರಲ್ಲಿ ಮಾಡಿರುವ ಅಲ್ಪ ಸ್ವಲ್ಪ ಸುಧಾರಣೆಗಳಿಂದಲೇ ಮಸೂದೆಯ ಬಗ್ಗೆ ನನ್ನ ಸಮ್ಮತಿಯಿದೆ ಎಂದು ಸೂಚಿತವಾಗುತ್ತದೆ. ಆದರೆ ವಿಷಯ ಅದಲ್ಲ, ವೃತ್ತಪತ್ರಿಕೆಗಳೊಂದಿಗೆ ಹೇಗೆ ವ್ಯವಹರಿಸಬೇಕೆಂಬುದರ ನನ್ನ ಪರಿಕಲ್ಪನೆ ಪ್ರಸ್ತುತ ಮಸೂದೆ ಆಧರಿತ ಪರಿಕಲ್ಪನೆಗಿಂತ ಆಮೂಲಾಗ್ರವಾಗಿ ಬೇರೆಯೇ ಆಗಿದೆ. ಪತ್ರಿಕಾ ನಿಯಂತ್ರಣ ಮಸೂದೆಯ ಬಗ್ಗೆ ನನ್ನ ಆಕ್ಷೇಪವಿಲ್ಲ. ಈ ಕುರಿತು ಪದೇ ಪದೇ ಹೇಳಿದ್ದೇನೆ. ಆದರೆ ನಮ್ಮ ಮುಂದೆ ಇರುವ ನಿಯಂತ್ರಣದ ರೀತಿ ಮತ್ತು ವಿಧಾನದ ಬಗ್ಗೆ ಆಕ್ಷೇಪಿಸುತ್ತೇನೆ. ಶ್ರೀಯುತ ಡಿ. ಹೆಚ್. ಚಂದ್ರಶೇಖರಯ್ಯನವರು ನನ್ನ ವಿರೋಧವನ್ನು ಅರ್ಥಮಾಡಿಕೊಂಡು ಕ್ಷಮಿಸುತ್ತಾರೆ ಎಂದು ನಾನು ನಂಬುತ್ತೇನೆ. ಮಾನವ ಸ್ವಾತಂತ್ರ್ಯಕ್ಕೆ ಸಂಬಂಧಿಸಿದ ವಿಷಯಗಳು ಚರಿತ್ರೆಯಲ್ಲಿ ಇನ್ನೂ ಜೀವಂತವಾಗಿವೆ. ಇಂದಿನ ಮಸೂದೆ, ಅದರ

ಕೊನೆಯ ಅಧ್ಯಾಯವಲ್ಲ. ಆದ್ದರಿಂದ ನಾನು ಪೂರ್ತಿಯಾಗಿ ನಿರಾಶನಾಗಿಲ್ಲ. ಆ ಸಮಾಧಾನಭಾವದಿಂದ ನಾನು ಇದಕ್ಕೆ ಬದ್ಧನಾಗಿ ತೃಪ್ತಿಪಟ್ಟುಕೊಳ್ಳುತ್ತೇನೆ.

**ಶ್ರೀಯುತ ಡಿ. ಹೆಚ್. ಚಂದ್ರಶೇಖರಯ್ಯ:** ಮಸೂದೆಯನ್ನು ಹಿಂತೆಗೆದುಕೊಳ್ಳುವಂತೆ ಸದಸ್ಯರು ಔಪಚಾರಿಕ ನಿಲುವಳಿ ಮಂಡಿಸಿದ್ದಾರೆಯೇ?

**ಶ್ರೀಯುತ ಡಿ. ವಿ. ಗುಂಡಪ್ಪ:** ಅದರ ವಿರುದ್ಧ ಮತ ಚಲಾಯಿಸುತ್ತೇನೆ, ಅಷ್ಟೇ.

**ಶ್ರೀಯುತ ಕೆ. ಆರ್. ಸುಬ್ಬಣ್ಣಾಚಾರ್:** ಮಸೂದೆಯನ್ನು ಪರಿಶೀಲನೆಗೆ ಎತ್ತಿಕೊಳ್ಳಬೇಕೇ ಎಂಬುದು ಪ್ರಶ್ನೆ. ಪರಿಶೀಲನಾ ಸಮಿತಿಯ ವರದಿಯನ್ನು ಪರಿಶೀಲನೆಗೆ ಎತ್ತಿಕೊಳ್ಳಬೇಕೆಂಬ ನಿಲುವಳಿಯನ್ನು ಇವರು ವಿರೋಧಿಸುತ್ತಿದ್ದಾರೆ.

**ರಾಜಚರಿತ ವಿಶಾರದ ರಾವ್ ಸಾಹೇಬ್ ಸಿ ಹಯವದನ್ ರಾವ್:-** ಶ್ರೀಯುತ ಗುಂಡಪ್ಪನವರು ಹಾಗೆ ಹೇಳಲಿಲ್ಲ. ಅವರು ಅದರ ವಿರುದ್ಧ ಮತವನ್ನು ಚಲಾಯಿಸುತ್ತೇನೆ ಎಂದು ಹೇಳಿದರು. ಅವರು ಯಾವ ನಿಲುವಳಿ ಸೂಚನೆಯನ್ನೂ ಮಂಡಿಸಲಿಲ್ಲ.

**ಶ್ರೀಯುತ ಕೆ. ಆರ್. ಸುಬ್ಬಣ್ಣಾಚಾರ್:** ಮಸೂದೆಯ ಮೇಲಿನ ಪರಿಶೀಲನಾ ಸಮಿತಿಯ ವರದಿಯನ್ನು ಪರಿಶೀಲನೆಗೆ ಎತ್ತಿಕೊಳ್ಳಬೇಕೇ ಎಂಬುದು ಈಗ ಸದನದ ಮುಂದಿರುವ ಪ್ರಶ್ನೆ.

**ಅಧ್ಯಕ್ಷರು:** ವಿಧೇಯಕದ ಬಗ್ಗೆ ಅವರ ಅನಿಸಿಕೆಯನ್ನು ಹೇಳಿದರು. ನೀವು ಮಸೂದೆಯ ಮೇಲಿನ ಚರ್ಚೆಯನ್ನು ಮುಂದುವರೆಸಿ.

**ಶ್ರೀಯುತ ಡಿ. ಹೆಚ್. ಚಂದ್ರಶೇಖರಯ್ಯ:** ಅನೇಕ ತಿದ್ದುಪಡಿಗಳನ್ನು ನಾನು ಸೂಚಿಸಿದ್ದೇನೆ. ಮೊದಲು ಅವುಗಳನ್ನು ಪರಿಶೀಲಿಸಬೇಕು.

**ಶ್ರೀಯುತ ಡಿ. ವಿ. ಗುಂಡಪ್ಪ:** ನಾನು ಮನವಿ ಮಾಡಿಕೊಂಡಿದ್ದೇನೆ ಹಾಗೂ ಅದನ್ನು ಸರ್ಕಾರದ ತೀರ್ಮಾನಕ್ಕೆ ಬಿಟ್ಟಿದ್ದೇನೆ. ನನ್ನ ಮನವಿಯನ್ನು ಸಹಾನುಭೂತಿಯಿಂದ ಪರಿಗಣಿಸುವ ಉದ್ದಿಶ್ಯವು ಸರ್ಕಾರಕ್ಕೆ ಇದ್ದರೆ, ಒಂದು ಠರಾವನ್ನು ಮಂಡಿಸಲು ನನ್ನ ಅಭ್ಯಂತರವಿಲ್ಲ.

**ಶ್ರೀಯುತ ಬೇಲೂರು ಶ್ರೀನಿವಾಸ ಅಯ್ಯಂಗಾರ್:** ಏಕೆ ಷರತ್ತನ್ನು ಹಾಕುತ್ತೀರಿ. ಅದು ದಬ್ಬಾಳಿಕೆಯಾಗುತ್ತದೆ.

**ಶ್ರೀಯುತ ಡಿ. ಹೆಚ್. ಚಂದ್ರಶೇಖರಯ್ಯ:** ನಾನು ಸೂಚಿಸಿದ ತಿದ್ದುಪಡಿಗಳ ಬಗ್ಗೆ ಸರ್ಕಾರದ ಅಭಿಪ್ರಾಯವೇನೆಂದು ನಾನು ತಿಳಿದುಕೊಳ್ಳಬಹುದೇ?

**ಶ್ರೀಯುತ ಎನ್ ಮಾಧವ್ ರಾವ್:** ತಿದ್ದುಪಡಿಗಳನ್ನು ಚರ್ಚಿಸಲು ಸದನಕ್ಕೆ ಅವಕಾಶ ಮಾಡಿಕೊಡಲು ನಾವು ಮಸೂದೆಯನ್ನು ಮಂಡಿಸಬೇಕು.

**ಶ್ರೀಯುತ ಕೆ. ಆರ್. ಸುಬ್ಬಣ್ಣಾಚಾರ್:** ತಿದ್ದುಪಡಿಗಳನ್ನು ಮೊದಲು ಚರ್ಚಿಸಿ ನಂತರ ಮಸೂದೆಯನ್ನು ಪರ್ಯಾಲೋಚಿಸಬೇಕೆಂದು ನನ್ನ ಕೋರಿಕೆ.

**ಶ್ರೀಯುತ ಸಿ. ಹಯವದನ ರಾವ್:** ವಿಧಾನಪರಿಷತ್ತಿಗೆ ಸಂಬಂಧಪಟ್ಟ ವ್ಯವಹಾರಗಳು ಮತ್ತು ಸ್ಥಾಯೀ ಆದೇಶಗಳ ನಿಯಮಗಳ 55ನೇ ನಿಯಮದಡಿಯಲ್ಲಿ ಮಸೂದೆಯು ಸದನದ ಮುಂದಿರುವಾಗ ಅದನ್ನು ಪರ್ಯಾಲೋಚನೆಗೆ ಎತ್ತಿಕೊಳ್ಳಬೇಕು. ಕೆಲವು ಸದಸ್ಯರುಗಳು ಎಷ್ಟು ಸಲ ಬೇಕಾದರೂ ಮಸೂದೆಯನ್ನು ಪುನಃ ಮಂಡಿಸಬಹುದು ಎಂದು ಹೇಳಬಹುದು. ಆದರೆ ಮಸೂದೆ ಪರಿಶೀಲನಾ ಸಮಿತಿಗೆ ಮತ್ತೆ ಹೋಗಲಿ ಎಂದು ಕೇಳಲು ಮಾತ್ರ ನಮಗೆ ಹಕ್ಕು ಮತ್ತು ಅಧಿಕಾರ ಇದೆ.

**ಅಧ್ಯಕ್ಷರು:** ಪರಿಶೀಲನಾ ಸಮಿತಿಯ ವರದಿಯು ಪರ್ಯಾಲೋಚನೆಗಾಗಿ ಸದನದ ಮುಂದೆ ಇದೆ. ನಿಮ್ಮ ಇಷ್ಟದಂತೆ ವಿಮರ್ಶೆ ಮಾಡಬಹುದು ಮತ್ತು ಏನು ಹೇಳಬೇಕೆಂದಿದೆಯೋ ಅದನ್ನು ಹೇಳಬಹುದು. ಆಮೇಲೆ ನಾವು ತಿದ್ದುಪಡಿಗಳನ್ನು ಒಂದೊಂದಾಗಿ ಕೈಗೆತ್ತಿಕೊಳ್ಳೋಣ.

**ಶ್ರೀಯುತ ಕೆ. ಆರ್ ಸುಬ್ಬಣ್ಣಾಚಾರ್**: ಸ್ವಾಮಿ, ನಮ್ಮ ವಿಶ್ವವಿದ್ಯಾನಿಲಯದ ಗೌರವಾನ್ವಿತ ಸದಸ್ಯರೂ ನನ್ನ ವಿದ್ವಾಂಸ ಮಿತ್ರರೂ ಆದ ಶ್ರೀಯುತ ಡಿ.ವಿ. ಗುಂಡಪ್ಪನವರು ಪರಿಶೀಲನಾ ಸಮಿತಿಯ ವರದಿಯನ್ನು ಸದನವು ಪರ್ಯಾಲೋಚಿಸಬಾರದು ಎಂದು ಸೂಚಿಸಿದ್ದಾರೆ. ಹಾಗೂ ಅದಕ್ಕೆ ಕಾರಣಗಳನ್ನು ಸಹ ತಿಳಿಸಿದ್ದಾರೆ. ಆ ಕಾರಣಗಳಲ್ಲಿ ಅವರು ಕೊಟ್ಟಿರುವ ಒಂದು ಮುಖ್ಯ ಕಾರಣವೇನೆಂದರೆ, ವಾಸ್ತವಿಕವಾಗಿ ಸೇವಾವಧಿ ಕೊನೆಗೊಂಡಿರುವ ಪರಿಷತ್ತು ಇಷ್ಟು ಪ್ರಮುಖ ವಿಚಾರವನ್ನು ಚರ್ಚಿಸುವುದು ಸರಿಯಲ್ಲ ಎಂದು. ಆದರೆ ಈ ಪರಿಷತ್ತಿನ ಸೇವಾವಧಿ ಪೂರ್ಣಗೊಂಡಿದೆ ಎಂಬ ಪ್ರಸ್ತಾಪವನ್ನು ಯಾರೂ ಒಪ್ಪುವುದಿಲ್ಲ ಎಂದು ನಾನು ಹೇಳಬೇಕಾದ ಅಗತ್ಯವಿಲ್ಲ. 1937ರಲ್ಲಿ ನಾವು ಚುನಾಯಿತರಾಗಿದ್ದೇವೆ ಮತ್ತು 1940ರ ಜೂನ್ ತಿಂಗಳ ತನಕ ಈ ಸದನದ

ಅವಧಿ ಇದೆ. ಆದ್ದರಿಂದ ನಾವು ಈಗಲೂ ಸೇವಾವಧಿಯಲ್ಲಿಯೇ ಇದ್ದೇವೆ. ಹಾಗೂ ಈ ವಿಷಯವೊಂದೇ ಅಲ್ಲ, ಸರ್ಕಾರ ಅಥವಾ ಸದನದ ಯಾರೇ ಮಾನ್ಯ ಸದಸ್ಯರು ನಮ್ಮ ಮುಂದೆ ಮಂಡಿಸುವ ಯಾವುದೇ ವಿಚಾರ ಕುರಿತು ಚರ್ಚಿಸಲು ನಮಗೆ ಹಕ್ಕು ಇದೆ. ಆದ್ದರಿಂದ ಪರಿಷತ್ತಿನ ಸೇವಾವಧಿ ಮುಗಿದಿದೆ; ಹಾಗಾಗಿ ಅದು ಇಂತಹ ಮುಖ್ಯ ವಿಷಯಗಳನ್ನು ಚರ್ಚಿಸುವುದು ಸರಿಯಲ್ಲ ಎಂಬ ಸಲಹೆಯನ್ನು, ಪರಿಷತ್ತಿಗೆ ಚುನಾಯಿತರಾಗಿರುವ ಯಾವೊಬ್ಬ ಸದಸ್ಯರೂ ನೀಡುವಂತಿಲ್ಲ.

ರಾಜ್ಯದಲ್ಲಿ ಈಗಿರುವ ವಾತಾವರಣ, ರಾಜಕೀಯ ಪರಿಸ್ಥಿತಿ ಮತ್ತು ರಾಜ್ಯದ ಜನತೆಯ ಮನೋಭಾವದ ದೃಷ್ಟಿಯಿಂದ ಇಂತಹ ಮಸೂದೆಯನ್ನು ಮಂಡಿಲು ಇದು ಸೂಕ್ತ ಸಮಯವಲ್ಲ ಎಂಬ ಕೆಲವು ಆಕ್ಷೇಪಣೆಗಳನ್ನು ಮಾನ್ಯ ಸದಸ್ಯರು ಮಾಡಿದ್ದಾರೆ. ಈಗಾಗಲೇ ಇರುವ ಶಾಸನವು ಮೈಸೂರಿನಲ್ಲಿರುವ ವೃತ್ತ ಪತ್ರಿಕೆಗಳನ್ನು ನಿಯಂತ್ರಿಸಲು ಉದ್ದೇಶಿಸಿದೆ ಹಾಗೂ ಅದು ಅತ್ಯಂತ ಅಪಾಯಕಾರಿ ಎಂದು ಪ್ರಜಾಪ್ರತಿನಿಧಿಸಭೆಯಲ್ಲಿ ಹಾಗೂ ಈ ಸದನದಲ್ಲಿ ಹಲವಾರು ವರ್ಷಗಳಿಂದಲೂ ದೂರು ಬರುತ್ತಿರುವ ಅಂಶವನ್ನು ಇಲ್ಲಿ ಸ್ಮರಿಸಬಹುದಾಗಿದೆ. ಅದನ್ನು ಪರಿಷ್ಕರಿಸಲು ಈಗ ಕಾಲ ಕೂಡಿಬಂದಿದೆ. ಈಗಿರುವ ಶಾಸನದ ಪರಿಷ್ಕರಣೆಗಾಗಿ ದಂಗೆ ಎದ್ದಿರುವ ಜನ ಅದರ ತಿದ್ದುಪಡಿಗೆ ಸಿದ್ಧರಾಗಿದ್ದಾರೆ ಎಂಬುದು ದಂಗೆಯ ಇಂಗಿತಾರ್ಥ. ವೃತ್ತ ಪತ್ರಿಕೆಗಳ ಸಂಪಾದಕರಾಗಲೀ, ಮಾಲಿಕರಾಗಲೀ ಮತ್ತು ಪ್ರಕಾಶಕರಾಗಲೀ ಯಾವುದೇ ಶಾಸನದಿಂದ ನಿಯಂತ್ರಿತರಾಗಬಾರದು ಹಾಗೂ ವೃತ್ತ ಪತ್ರಿಕೆ ನಡೆಸಲು ಯಾವುದೇ ಕಾನೂನಿನ ಅಗತ್ಯವಿಲ್ಲ ಎನ್ನುವ ಗುಂಪಿಗೆ ಗುಂಡಪ್ಪನವರು ಸೇರುತ್ತಾರೋ, ಅಥವಾ ಅವರ ಚಟುವಟಿಕೆಗಳ ನಿಯಂತ್ರಣಕ್ಕೆ ಒಂದು ಕಾನೂನಿನ ಅಗತ್ಯವಿದೆ ಎನ್ನುವವರ ಗುಂಪಿಗೆ ಸೇರುತ್ತಾರೋ ಎಂಬುದು ನನಗೆ ಗೊತ್ತಿಲ್ಲ. ಒಂದು ಕಾನೂನು ಅವಶ್ಯಕವೆಂದು ಒಪ್ಪಿಕೊಂಡರೆ ಮತ್ತು ಈಗಿರುವ ಕಾನೂನು ಕಠಿಣವಾಗಿದೆಯೆಂದು ಒಪ್ಪಿಕೊಂಡರೆ ಪ್ರಸ್ತಾವಿತ ಕಾನೂನು ಈಗಿರುವ ಕಾನೂನಿನ ಸುಧಾರಿತ ರೂಪವೋ ಅಥವಾ ಈಗಿರುವ ಕಾನೂನಿನ ಪುನರ್ ವಿಮರ್ಶೆಯೋ ಎಂಬ ಪ್ರಶ್ನೆ ಉದ್ಭವಿಸುತ್ತದೆ. 1908ರ ವೃತ್ತ ಪತ್ರಿಕೆಗಳ ಅಧಿನಿಯಮದ ಕೆಲವು ಪ್ರಕರಣಗಳನ್ನು ನಿರಸನಗೊಳಿಸಬೇಕೆಂದು ಈಗ ಚರ್ಚೆಯಲ್ಲಿರುವ ವಿಧೇಯಕವು ಪ್ರಸ್ತಾಪಿಸಿರುವುದನ್ನು ನೋಡಿದಾಗ, ಪ್ರಸ್ತಾವಿತ ವಿಧೇಯಕವು ಸರ್ವವಿಧದಲ್ಲೂ ಈಗಿರುವ ಕಾನೂನಿನ ಸುಧಾರಿತ ರೂಪವೆಂದು ಯಾರಿಗೇ ಆದರೂ

ಮನದಟ್ಟಾಗುತ್ತದೆ. ಸಾರ್ವಜನಿಕ ಸುದ್ದಿ ಅಥವಾ ಆ ಕುರಿತ ಅಭಿಪ್ರಾಯ ವ್ಯಕ್ತಪಡಿಸುವ ಒಂದು ವೃತ್ತ ಪತ್ರಿಕೆ ಅಥವಾ ಯಾವುದೇ ನಿಯತಕಾಲಿಕೆ ಅಥವಾ ಇನ್ನಾವುದೇ ಮುದ್ರಿತ ಕೃತಿಯ ಸಂಪಾದನೆ, ಮುದ್ರಣ ಅಥವಾ ಪ್ರಕಾಶನವನ್ನು ಸರ್ಕಾರದ ಲಿಖಿತ ಅನುಮತಿಯಿಲ್ಲದೆ ಕೈಗೊಳ್ಳತಕ್ಕದ್ದಲ್ಲವೆಂದು ಈಗಿರುವ ಅಧಿನಿಯಮದ 2ನೇ ಪ್ರಕರಣದಲ್ಲಿ ಉಪಬಂಧಿಸಲಾಗಿದೆ. ಸರ್ಕಾರದ ಪೂರ್ವಾನುಮತಿಗೆ ಉಪಬಂಧ ಕಲ್ಪಿಸುವ ಮಹತ್ವದ ಪ್ರಕರಣವನ್ನು ಈಗಿರುವ ಶಾಸನದಿಂದ ತೆಗೆದು ಹಾಕಲಾಗಿದೆ. ಎರಡನೆಯದಾಗಿ ಪರಿಶೀಲನಾ ಸಮಿತಿಯು ಯಾರೊ ಕೆಲ ಸಂಪಾದಕರ ಹೇಳಿಕೆಗಳನ್ನು ಮಾತ್ರ ಪರಿಶೀಲಿಸಿ ಸುಮ್ಮನಾಗದೇ ಮೈಸೂರಿನ ಪತ್ರಿಕೋದ್ಯಮಿಗಳ ಸಂಘದ ಅಭಿಪ್ರಾಯವನ್ನು ಕೋರಿತು. ಆದರೆ ನಾವು ಪರಿಶೀಲಿಸಿದ ಸಂಪಾದಕರ ಅಭಿಪ್ರಾಯಗಳಾಗಲೀ, ಹಲವಾರು ಹೇಳಿಕೆಗಳಾಗಲೀ ನಮ್ಮ ಸಮಸ್ಯೆಯ ಪರಿಹಾರಕ್ಕೆ ಗಣನೀಯ ರೀತಿಯಲ್ಲಿ ಸಹಾಯಕವಾಗಲಿಲ್ಲ ಎಂದು ನಾನು ಸಮಿತಿಯ ಪರವಾಗಿ ಖಿನ್ನತೆಯಿಂದ ಹೇಳಬೇಕಾಗುತ್ತದೆ.

**ಶ್ರೀಮಾನ್ ಬೇಲೂರು ಶ್ರೀನಿವಾಸ ಅಯ್ಯಂಗಾರ್:**- ನಾನು ಈ ಹೇಳಿಕೆಯನ್ನು ಒಪ್ಪುವುದಿಲ್ಲ. ಪ್ರಕಾಶಕರನ್ನು ವಿಚಾರಿಸಲಾಯಿತು ಮತ್ತು ಸಮಿತಿಯ ಅಧ್ಯಕ್ಷರು ಅವರನ್ನು ವಿವರವಾಗಿ ಪ್ರಶ್ನಿಸಿದರು ಮತ್ತು ಅದು ನಮಗೆ ಸಾಕಷ್ಟು ಸಹಾಯಕವಾಯಿತು.

**ಶ್ರೀಮಾನ್ ಕೆ. ಆರ್. ಸುಬ್ಬಣ್ಣಾಚಾರ್:**- ಸದಸ್ಯರು ತಮಗೆ ಮಾತನಾಡುವ ಸರದಿ ಬಂದಾಗ ನಿರಾಕರಿಸಬಹುದು. ಅವರಿಗೆ ವಯಸ್ಸಾಗಿದೆ ಅವರು ಈಗಿರುವುದಕ್ಕಿಂತ ಹೆಚ್ಚು ತಾಳ್ಮೆಯಿಂದಿರಬೇಕು.

**ಶ್ರೀಮಾನ್ ಬೇಲೂರು ಶ್ರೀನಿವಾಸ ಅಯ್ಯಂಗಾರ್:**- ಆದರೆ ತಪ್ಪು ಹೇಳಿಕೆ ನೀಡಿದಾಗ ಹಾಗಿರುವುದು ಸಾಧ್ಯವಾಗದು.

**ಶ್ರೀಮಾನ್ ಕೆ. ಆರ್. ಸುಬ್ಬಣ್ಣಾಚಾರ್:**- ಪರಿಶೀಲನಾ ಸಮಿತಿಯ ವ್ಯವಹರಣೆಗಳ ಬಗ್ಗೆ ಸವಿಸ್ತಾರ ಚರ್ಚೆ ನಡೆಯುವುದಿಲ್ಲವೆಂಬುದು ನನ್ನ ತಪ್ಪು ಭಾವನೆಯಾಗಿರಬಹುದು. ಪರಿಷತ್ತಿಗೆ ಸಲ್ಲಿಸದಿರುವ ವ್ಯವಹರಣೆಗಳನ್ನು ನಾನು ಉಲ್ಲೇಖಿಸುತ್ತೇನೆ. ಆದರೆ ಶ್ರೀಯುತ ಡಿ. ವಿ. ಗುಂಡಪ್ಪನವರು ಅವುಗಳಲ್ಲಿ ಕೆಲವನ್ನು ಉಲ್ಲೇಖಿಸಿದ್ದರಿಂದ ಸಮಿತಿಯ ಸದಸ್ಯನಾಗಿ ಅವುಗಳಲ್ಲಿ ಇನ್ನು ಕೆಲವುಗಳ ಬಗ್ಗೆ ಉಲ್ಲೇಖಿಸುವುದು ನನ್ನ ಕರ್ತವ್ಯವೆಂದು ಭಾವಿಸುತ್ತೇನೆ. ಸಮಿತಿಯ ಅಧ್ಯಕ್ಷರು

ಮತ್ತು ನಮ್ಮಲ್ಲಿ ಕೆಲವರು, ಸಂಪಾದಕರು ಈ ಕುರಿತು ಯಾವುದೇ ಪರ್ಯಾಯಮಾರ್ಗ ಸೂಚಿಸಬಲ್ಲರೇ ಎಂದು ಸ್ಪಷ್ಟವಾಗಿ ಪ್ರಶ್ನಿಸಿದೆವು. ತಮಗೆ ಯಾವುದೇ ಕಾನೂನು ಬೇಕಾಗಿಲ್ಲವೆಂದೇ ಅವರು ಉತ್ತರಿಸಿದರು. ಸಮಿತಿಯ ಸಮಸ್ಯೆಯನ್ನು ಪರಿಹರಿಸುವಲ್ಲಿ ವಿಚಾರಣೆಗೊಳಪಟ್ಟ ಯಾರೊಬ್ಬರಿಂದಲೂ ಸಮಿತಿಗೆ ಯಾವುದೇ ರೀತಿಯ ಸಹಾಯ ಸಿಗಲಿಲ್ಲವೆಂದು ನಾನು ಹೇಳಿದೆ. ಸಂಪಾದಕರು ಪ್ರಕಾಶಕರು ಹಾಗೂ ಮಾಲೀಕರನ್ನು ನಾವು ವಿಚಾರಿಸಿದಾಗ ಪ್ರಸ್ತಾವಿತ ಕ್ರಮವನ್ನು ಹೇಗೆ ಸುಧಾರಿಸಬಹುದೆಂಬ ಬಗ್ಗೆ ಕಾರ್ಯಸಾಧ್ಯ ಸಲಹೆಗಳನ್ನು ನೀಡಿದ್ದರೆ ಅಥವಾ ಈಗಿರುವ ಕಾನೂನಿಗೆ ಯಾವುದೇ ಪರ್ಯಾಯ ಸೂಚನೆಗಳನ್ನು ನೀಡಿದ್ದರೆ ನಾವು ಅವರ ಸೂಚನೆಗಳನ್ನು ಧಾರಾಳವಾಗಿ ಪರಿಗಣಿಸಬಹುದಾಗಿತ್ತು ಮತ್ತು ಸಾಧ್ಯವಿದ್ದರೆ ಅಂಗೀಕರಿಸಬಹುದಿತ್ತು. ಆದರೆ ದುರಾದೃಷ್ಟವಶಾತ್ ಆ ದಿಶೆಯಲ್ಲಿ ಯಾವುದೇ ಸಹಾಯ ಅವರಿಂದ ದೊರಕಲಿಲ್ಲ. ಆದ್ದರಿಂದ ನಮ್ಮ ಮುಂದಿದ್ದ ಒಂದೇ ಪರ್ಯಾಯ ಮಾರ್ಗವೆಂದರೆ ಈಗಾಗಲೇ ಇರುವ ಕಾನೂನನ್ನು ಅಭ್ಯಸಿಸುವುದು ಮತ್ತು ಪ್ರಸ್ತಾವಿತ ವಿಧೇಯಕವನ್ನು ಅಭ್ಯಸಿಸುವುದು. ಹಾಗೂ ಎರಡರ ನಡುವಣ ಸುವರ್ಣ ಮಾಧ್ಯಮವೊಂದನ್ನು ಕಂಡುಹಿಡಿಯುವುದು. ಪರಿಶೀಲನಾ ಸಮಿತಿ ಹಲವಾರು ಬದಲಾವಣೆ ಮಾಡಿರುವುದು ಸ್ಪಷ್ಟವಾಗಿ ಗೋಚರಿಸುತ್ತದೆ ಮತ್ತು ವಾಸ್ತವವೆಂದರೆ ದಂಡ ಹಾಗೂ ಮುಟ್ಟುಗೋಲು ಮೊತ್ತಕ್ಕೆ ಸಂಬಂಧಿಸಿದಂತೆ ಅವುಗಳನ್ನು ನಾವು ಸಾಕಷ್ಟು ತಗ್ಗಿಸಿದ್ದೇವೆ. ಮತ್ತು ಉಚ್ಚ ನ್ಯಾಯಾಲಯದ ಅಧಿಕಾರದ ಸಂಬಂಧದಲ್ಲಿಯೂ ನಾವು ಕೆಲವು ಬದಲಾವಣೆಗಳನ್ನು ಮಾಡಿದ್ದೇವೆ. ಒಟ್ಟಾರೆ ನಮಗೆ ವಹಿಸಿದ ವಿಧೇಯಕದ ಪರಿಷ್ಕಾರಕ್ಕೆ ನಾವು ಶಕ್ತಿ ಮೀರಿ ಪ್ರಯತಿಸಿದ್ದೇವೆ. ವಿಧೇಯಕದ ಪುನರ್ ರಚನೆಯಾಗಬೇಕೆಂದು ಶ್ರೀಯುತ ಗುಂಡಪ್ಪನವರು ಸೂಚಿಸಿದ್ದು ನಿಜ. ಆ ಕೆಲಸ ಪರಿಶೀಲನಾ ಸಮಿತಿಯ ವ್ಯಾಪ್ತಿಯನ್ನು ಮೀರಿದ್ದೆಂದು ಹಾಗೂ ಅದರಿಂದ ವಿಧೆಯಕದ ಸ್ವರೂಪಕವೇ ಸಂಪೂರ್ಣವಾಗಿ ಬದಲಾಗುವುದೆಂದು ನಮ್ಮೆಲ್ಲರ ಅನಿಸಿಕೆ. ಹಾಗೆ ಮಾಡಬಹುದಾಗಿದ್ದರೆ, ವೃತ್ತ ಪತ್ರಿಕೆಗಳ ಮೇಲೆ ಯಾವುದೇ ನಿಯಂತ್ರಣ ಹೇರದಂಥ ನೂತನ ವಿಧೇಯಕವನ್ನು ಜಾರಿಗೊಳಿಸಬಹುದಿತ್ತು. ಆದರೆ ನಮಗೆ ವಿಧೇಯಕವನ್ನು ವಹಿಸಿದ ಉದ್ದೇಶವೆಂದರೆ ವೃತ್ತಪತ್ರಿಕೆಗಳ ಮೇಲೆ ನಿಯಂತ್ರಣ ಸಾಧಿಸುವುದು. ನಾವು ಶ್ರೀಯುತ ಗುಂಡಪ್ಪನವರು ಮಾಡಿದ ಸಲಹೆಗಳನ್ನು ಅಳವಡಿಸಿಕೊಂಡಿದ್ದಲ್ಲಿ ವಿಧೇಯಕದ ಸ್ವರೂಪವೇ ಬದಲಾಗಿ ವೃತ್ತ ಪತ್ರಿಕೆಗಳ ನಿಯಂತ್ರಣ ಸಾಧ್ಯವಾಗುತ್ತಿರಲಿಲ್ಲ. ಆದ್ದರಿಂದ ನಾವು ಅವರ ಸೂಚನೆಯನ್ನು

ಕಾರ್ಯರೂಪಕ್ಕೆ ತಂದಿದ್ದರೆ ವಿಧಾನ ಪರಿಷತ್ತಿನಲ್ಲಿ ನಮ್ಮ ಕರ್ತವ್ಯಗಳನ್ನು ಮಾಡಿದಂತಾಗುವುದಿಲ್ಲವೆಂದು ನಮಗೆ ತೋರಿತು. ನಾವು ಶ್ರೀಯುತ ಗುಂಡಪ್ಪನವರ ಸಲಹೆಗಳ ಬಗ್ಗೆ ಚರ್ಚಿಸಿದ್ದೇವೆ. ಆದರೆ ಅವುಗಳನ್ನು ಒಪ್ಪಲು ಸಾಧ್ಯವಾಗುವುದಿಲ್ಲವೆಂದು ತಿಳಿಸಲು ವಿಷಾದಿಸುತ್ತೇನೆ. ನಾವು ಈಗಾಗಲೇ ತಿಳಿಸಿದಂತೆ ವಿಧೇಯಕವು 1908ರ ಕಾನೂನಿನ ಸುಧಾರಿತ ರೂಪ. ಪರಿಶೀಲನಾ ಸಮಿತಿ ಬಹಳ ಶ್ರಮ ವಹಿಸಿದ್ದು ನಾವು ಅದರ ವರದಿಯನ್ನು ಪರಿಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ.

**ಖಾನ್ ಬಹದ್ದೂರ್ ಮಹಮದ್ ಅಬ್ಬಾಸ್ ಖಾನ್:** ಮಾನ್ಯರೇ, ವಿಧೇಯಕವು, ಮೂರನೆಯ ಬಾರಿ ಪರಿಗಣನೆಗಾಗಿ ಈ ಸದನದ ಮುಂದೆ ಬಂದಿದೆ. ಹಿಂದಿನ ಸಂದರ್ಭದಲ್ಲಿಯೂ ಕೂಡಾ, ಶ್ರೀಯುತ ಡಿ.ವಿ. ಗುಂಡಪ್ಪನವರು ಅಂತಹ ಯಾವುದೇ ಕ್ರಮವನ್ನು ಮಂಡಿಸುವ ಅವಶ್ಯಕತೆಯಿಲ್ಲವೆಂದು ಹೇಳಿದರು ಮತ್ತು ಅಗತ್ಯ ತಿದ್ದುಪಡಿಗಳನ್ನು ಮಂಡಿಸಲು ಮತ್ತು ಕಠಿಣವಿರುವ ವಿಧೇಯಕ ಸರಳಗೊಳಿಸಲು ತಮಗೆ ಅವಕಾಶ ನೀಡಬೇಕೆಂದು ಹೇಳಿದ್ದು ನನಗೆ ನೆನಪಿದೆ. ವಿಧೇಯಕದ ತಿದ್ದುಪಡಿಗೆ ಸಂಬಂಧಿಸಿದಂತೆ ಅವರ ಸಲಹೆಗಳ ಹಿನ್ನೆಲೆಯಲ್ಲಿ ಪರಿಶೀಲನಾ ಸಮಿತಿ ಸದಸ್ಯರನ್ನಾಗಿ ಅವರನ್ನು ತೆಗೆದುಕೊಳ್ಳಲಾಗಿತ್ತು. ಆದರೆ ಪರಿಶೀಲನಾ ಸಮಿತಿಯಲ್ಲಿ ಸಲಹೆಗಳನ್ನು ಸಂವೈಧಾನಿಕ ರೀತಿಯಲ್ಲಿ ನೀಡಲು ಅವರು ವಿಫಲರಾದರು. ಪರಿಶೀಲನಾ ಸಮಿತಿಯ ಮುಂದೆ ಅವರು ಒಟ್ಟಾರೆ ನೂತನ ವಿಧೇಯಕವನ್ನು ಮಂಡಿಸಿ ಮತ್ತು ಅದು ತನ್ನದೇ ಆದ ರೀತಿಯಲ್ಲಿ ಹೊಸ ಮಾದರಿಯದಾಗಿದೆ. ಆದ್ದರಿಂದ ಪರಿಶೀಲನೆಗಾಗಿ ಸಮಿತಿಯ ಮುಂದೆ ಇಟ್ಟಿರುವ ವಿಧೇಯಕಕ್ಕೆ ಅಗತ್ಯ ತಿದ್ದುಪಡಿಗಳನ್ನು ಮಂಡಿಸುವಂತೆ ಅವರನ್ನು ಕೇಳಲಾಯಿತು. ಆದರೆ ಅವರು ಹಾಗೆ ಮಾಡಲಿಲ್ಲ. ಆದ್ದರಿಂದ ವಿಧೇಯಕವನ್ನು ಖಂಡ ಖಂಡವಾಗಿ ತಿದ್ದುಪಡಿ ಮಾಡಬೇಕಾಗಿರುವುದರ ಕಾರಣಗಳನ್ನು ಕೇಳಲು ಅವರಿಂದ ನಮಗೆ ಅವಕಾಶವಾಗಲಿಲ್ಲ. ನನಗೆ ನೆನಪಿರುವ ಮಟ್ಟಿಗೆ, ನಂತರ ಅವರು ಪರಿಶೀಲನಾ ಸಮಿತಿಯ ಸಭೆಗಳಿಗೆ ಹಾಜರಾಗಲಿಲ್ಲ. ಇದೀಗ ಮಾತನಾಡಿದ ಶ್ರೀಯುತ ಸುಬ್ಬಣ್ಣಾಚಾರ್‌ರು ನೀಡಿದ ಕಾರಣಗಳೆಂದರೆ 1908ರ ಮಾಧ್ಯಮ ಅಧಿನಿಯಮವು ಬಹಳ ಅಪಾಯಕಾರಿಯಾಗಿದ್ದು, ಅದರ ಬಗ್ಗೆ ಬಹಳ ಗಂಭೀರ ಆಕ್ಷೇಪಣೆಗಳು ಬಂದಿದ್ದು ಅಧಿನಿಯಮವನ್ನು ನಿರಸನಗೊಳಿಸಲು ಅಥವಾ ಸೂಕ್ತ ತಿದ್ದುಪಡಿ ಮಾಡಲು 20 ವರ್ಷಗಳಿಗಿಂತ ಹೆಚ್ಚು ಕಾಲದಿಂದ ಸರ್ಕಾರವನ್ನು

ಒತ್ತಾಯಪಡಿಸಲಾಗುತ್ತಿದೆ. ಪತ್ರಿಕಾಲಯಗಳನ್ನು ಮತ್ತು ವೃತ್ತಪತ್ರಿಕೆಗಳ ಪ್ರಕಾಶನವನ್ನು ನಿಯಂತ್ರಿಸಬೇಕೆಂಬ ಬಗ್ಗೆ ಪ್ರತಿಯೊಬ್ಬರ ಒಪ್ಪಿಗೆ ಇದೆ. ಅದಕ್ಕೆ ಒಪ್ಪಿದ ನಂತರ, ಚಲಾಯಿಸಲೇಬೇಕಾದ ನಿಯಂತ್ರಣದ ಸ್ವರೂಪ ಹೇಗಿರಬೇಕೆಂದು ಯೋಚಿಸಬೇಕಾಗುತ್ತದೆ. ಹಲವಾರು ಉಪ ಸಮಿತಿಗಳಾಗಿವೆ ಮತ್ತು ಹಲವಾರು ಪ್ರಸ್ತಾವಗಳೂ ಬಂದಿವೆ. ಆದರೆ 20 ವರ್ಷಗಳಿಂದಲೂ ಈ ಪ್ರಶ್ನೆ ಬಾಕಿಯಿದೆ. ಆದರೆ ಈ ಸದನದ ಮುಂದೆ ಅಂತಿಮ ರೂಪದಲ್ಲಿ ಪರ್ಯಾಲೋಚನೆಗೆ ಬಂದಾಗ ಪರಿಶೀಲನಾ ಸಮಿತಿ ಇದನ್ನು ಎರಡು ಬಾರಿ ಪರೀಕ್ಷಿಸಿದ್ದು, ಸದನದ ಮುಂದೆ ಅದನ್ನು ಈಗ ಮಂಡಿಸಲಾಗಿರುವ ಸ್ವರೂಪ ಯೋಗ್ಯವಾಗಿದೆ ಎಂದು ತೋರುತ್ತದೆ. ಮುದ್ರಣಾಲಯಗಳು ಮತ್ತು ವೃತ್ತಪತ್ರಿಕೆಗಳ ಪ್ರಕಾಶನದ ಮೇಲೆ ಒಂದು ವಿಧದ ನಿಯಂತ್ರಣವಿರಬೇಕು. ಈ ದೃಷ್ಟಿಯಿಂದ ಈ ವಿಧೇಯಕ ಅಪೇಕ್ಷಣೀಯ ಮತ್ತು ಅವಶ್ಯಕ ಎಂದು ಪರಿಗಣಿಸಲಾಗಿದೆ ಮತ್ತು ಈ ಮೂಲಕ 1908ರ ಅಧಿನಿಯಮವನ್ನು ನಿರಸನಗೊಳಿಸಲಾಗುತ್ತಿದೆ.

ಈ ಸಂದರ್ಭದಲ್ಲಿ ಪರಿಶೀಲನಾ ಸಮಿತಿಯ ವರದಿ ಮತ್ತು ಅವರಿಂದ ತಿದ್ದುಪಡಿಯಾದ ವಿಧೇಯಕವನ್ನು ಪರಿಗಣನೆಗೆ ತೆಗೆದುಕೊಳ್ಳಬೇಕೆಂಬ ನಿಲುವಳಿ ಯೋಗ್ಯವಾಗಿದೆ ಮತ್ತು ಅದನ್ನು ಪರಿಗಣಿಸಬೇಕು. ನಾನು ಅದನ್ನು ಬೆಂಬಲಿಸುತ್ತೇನೆ.

**ಶ್ರೀಯುತ ಬೇಲೂರು ಶ್ರೀನಿವಾಸ್ ಅಯ್ಯಂಗಾರ್**:- ಸ್ವಾಮಿ, ಪರಿಶೀಲನಾ ಸಮಿತಿಯ ವರದಿಯನ್ನು ಮತ್ತೊಮ್ಮೆ ಪರಾಮರ್ಶಿಸಿದ ನಿದರ್ಶನಗಳು ಕಡಿಮೆ. ಈ ಸಂದರ್ಭದಲ್ಲಿ ಸರ್ಕಾರ ಅದಕ್ಕೆ ಒಪ್ಪಿದೆ. ಈ ಸಂಬಂಧದಲ್ಲಿ ನಾನು ಒಂದು ನಿರ್ದಿಷ್ಟ ಸಂದರ್ಭದ ಬಗ್ಗೆ ತಿಳಿಯಬಯಸುತ್ತೇನೆ. ಈ ಸದನದ 1939ರ ಜನವರಿ ಅಧಿವೇಶನದ ನಡಾವಳಿಗಳ 46ನೇ ಪುಟವನ್ನು ನೀವು ನೋಡಿದರೆ, ಪರಿಶೀಲನಾ ಸಮಿತಿಗೆ ನಾಲ್ಕು ಸದಸ್ಯರುಗಳಾದ ಶ್ರೀಯುತ ಡಿ.ವಿ. ಗುಂಡಪ್ಪ, ಹೆಚ್. ಬಿ. ಗುಂಡಪ್ಪ, ಡಿ. ಹೆಚ್. ಚಂದ್ರಶೇಖರಯ್ಯ ಹಾಗೂ ನನ್ನನ್ನು ಸೇರಿಸಿ ವಿಧೇಯಕದ ಪುನಃ ಪರ್ಯಾಲೋಚನೆಗಾಗಿ ಆ ಸಮಿತಿಗೆ ಸಲ್ಲಿಸಿದ್ದನ್ನು ನೋಡಬಹುದು. ಶ್ರೀಯುತ ಗುಂಡಪ್ಪನವರು ಸಮಿತಿಗೆ ರಾಜಿನಾಮೆ ನೀಡಿದರೆಂಬುದನ್ನು ನಾನು ಮತ್ತು ಚಂದ್ರಶೇಖರಯ್ಯ ಅಸಮ್ಮತಿಯನ್ನು ದಾಖಲಿಸಿದುದನ್ನು ಪರಿಶೀಲನಾ ಸಮಿತಿಯ ವರದಿಯಿಂದ ತಿಳಿಯಬಹುದು ಮತ್ತು ಶ್ರೀಯುತ ಎಚ್.ಬಿ. ಗುಂಡಪ್ಪನವರು ಏನು ಮಾಡಿದರೆಂಬುದು ನನಗೆ ಗೊತ್ತಿಲ್ಲ.

**ಶ್ರೀಯುತ ಹೆಚ್. ಬಿ. ಗುಂಡಪ್ಪ:** ಇದಕ್ಕೆ ನನ್ನ ಸಮ್ಮತಿಯಿದೆ ಎಂದು ಭಾವಿಸಿ.

**ಶ್ರೀಯುತ ಬೇಲೂರು ಶ್ರೀನಿವಾಸ್ ಅಯ್ಯಂಗಾರ್:** ನಮ್ಮೊಂದಿಗೆಯೋ ಅಥವಾ ನಮ್ಮ ವಿರುದ್ಧವ್ರೋ?

**ಶ್ರೀಯುತ ಹೆಚ್. ಬಿ. ಗುಂಡಪ್ಪ:** ನಿಮ್ಮೊಂದಿಗೆ

**ಶ್ರೀಯುತ ಬೇಲೂರು ಶ್ರೀನಿವಾಸ್ ಅಯ್ಯಂಗಾರ್:** ಧನ್ಯವಾದಗಳು. ಪರಿಸ್ಥಿತಿ ಹೀಗಿದೆ. 1939ರ ಜನವರಿಯಲ್ಲಿ, ಪರಿಶೀಲನಾ ಸಮಿತಿಯ ವರದಿಯನ್ನು ಕೂಲಂಕಷವಾಗಿ ಪರೀಕ್ಷಿಸಿದಾಗ, ಅಧ್ಯಕ್ಷರು ಸದಸ್ಯರಿಗೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಲು ಒಪ್ಪಿಗೆ ಸೂಚಿಸಿದರು ಮತ್ತು ಅಧ್ಯಕ್ಷರ ತೀರ್ಮಾನ ಉತ್ತೇಜಕ ಹಾಗೂ ಉಪಯುಕ್ತವಾಗಿತ್ತು. ಅಧ್ಯಕ್ಷರ ಇಂಗಿತವನ್ನು ಯಶಸ್ವಿಯಾಗಿ ಕಾರ್ಯರೂಪಕ್ಕೆ ತರಬೇಕೆಂದು ಹೇಳುವುದು ನನ್ನ ಉದ್ದೇಶ. ನಾನೂ ಅದಕ್ಕಾಗಿ ಪ್ರಯತ್ನಿಸುತ್ತೇನೆ. ಯಶಸ್ಸು ಅದೃಷ್ಟಕ್ಕೆ ಬಿಟ್ಟ ವಿಷಯ. ಅವರು ಹೇಳಿದರು " ನಮಗೆ ಸಾಧ್ಯವಿದ್ದಷ್ಟು ಹೆಚ್ಚು ಜನರ ಸಹಕಾರ ದೊರೆತರೆ ನಾವು ಅಂಗೀಕಾರಾರ್ಹ ಕಾನೂನು ಮಾಡಬಲ್ಲೆವು."

ಶ್ರೀಯುತ ಡಿ.ವಿ. ಗುಂಡಪ್ಪನವರನ್ನು ಸಮಿತಿಗೆ ತೆಗೆದುಕೊಳ್ಳಲಾಯಿತು. ತಮ್ಮ ಗೈರು ಹಾಜರಿ ಬಗ್ಗೆ ಅವರು ವಿವರಣೆ ನೀಡಿದರು. ಆದರೆ ಅವರ ವಿವರಣೆ ನನಗೆ ಸಮಾಧಾನಕರವೆನಿಸಿಲ್ಲ. ನನ್ನ ನಿವೇದನೆ ಏನೆಂದರೆ, ಅವರನ್ನು ಸಮಿತಿಗೆ ತೆಗೆದುಕೊಳ್ಳಲಾಯಿತು ಮತ್ತು ಅದನ್ನು ಬೆಂಬಲಿಸಿದವರಲ್ಲಿ ನಾನೂ ಒಬ್ಬ. ಶ್ರೀಯುತ ಗುಂಡಪ್ಪನವರು ಅದೇ ಅಧಿವೇಶನದಲ್ಲಿ ಈ ಮುಂದಿನಂತೆ ನುಡಿದರು (ನಡೆವಳಿ ಪುಟ ಸಂಖ್ಯೆ 45):

" ———— ಪತ್ರಿಕಾ ಮಾಧ್ಯಮದ ನಿಯಂತ್ರಣಕ್ಕಾಗಿ ಕಾನೂನು ರಚಿಸಲು ವಿಧಾನಮಂಡಲಕ್ಕೆ ಹಕ್ಕು ಇದೆ ಎಂಬ ಸಾಮಾನ್ಯ ತತ್ವವನ್ನು ನಾನು ಒಪ್ಪುತ್ತೇನೆ. ಆ ತತ್ವ ಕುರಿತ ಚರ್ಚೆಗೆ ನಾನು ಹೋಗುವುದಿಲ್ಲ."

ಅವರು ನಮ್ಮೊಂದಿಗೆ ಪರಿಶೀಲನಾ ಸಮಿತಿಯಲ್ಲಿದ್ದರು, ನಮಗೆ ಸಹಾಯ ಮಾಡಲಿಲ್ಲ. ಪರಿಶೀಲನಾ ಸಮಿತಿಯ ಅಧ್ಯಕ್ಷರು ಕಾನೂನಿನ ವಿವಿಧ ಉಪಬಂಧಗಳ ಬಗ್ಗೆ ಚರ್ಚಿಸುವ ಮೂಲಕ ನಮಗೆ ಸಹಾಯ ಮಾಡುವಲ್ಲಿ ತೋರಿದ ಶ್ರದ್ಧೆ ಮತ್ತು ಸಹನೆಯನ್ನು ಕೃತಜ್ಞತೆಯಿಂದ ಸ್ಮರಿಸುತ್ತೇನೆ. ಅಧ್ಯಕ್ಷರಿಗೆ ಬೇಸರ ಉಂಟು ಮಾಡಿದವರಲ್ಲಿ ನಾನೂ ಒಬ್ಬ. ಆದರೆ ಅವರು ನಮ್ಮೆಲ್ಲರಿಗೂ ಅದರಲ್ಲೂ ವಿಶೇಷವಾಗಿ

ನನಗೆ ಬಹಳ ಸೌಜನ್ಯ ತೋರಿದರು. ನಾವು ಪ್ರಕಾಶಕರ ನಿವೇದನೆ ಪರಿಶೀಲಿಸಿದೆವು ಮತ್ತು ಶ್ರೀಯುತ ಗುಂಡಪ್ಪನವರ ನಿವೇದನೆಯನ್ನು ಕೂಡ ಪರಿಶೀಲಿಸಿದೆವು. ಶ್ರೀಯುತ ಗುಂಡಪ್ಪನವರ ಇಂದಿನ ಭಾಷಣ ಬಹಳ ಚೆನ್ನಾಗಿತ್ತು. ಆದರೆ ಪರಿಶೀಲನಾ ಸಮಿತಿಯು ಅವರ ಟಿಪ್ಪಣಿಯ ಬಗ್ಗೆ ತೋರಿದ ನಿಲುವಿನ ಬಗ್ಗೆ ಅವರು ಆಡಿದ ನುಡಿಗಳು ಸರಿಯಲ್ಲವೆಂದು ವಿಷಾದದಿಂದ ಹೇಳುತ್ತಿದ್ದೇನೆ. ಏನೇ ಆದರೂ ಅವರು ಪ್ರಶ್ನೆಗೆ ಸಂಬಂಧಿಸಿದಂತೆ ಎಲ್ಲಾ ಸಂಗತಿಗಳನ್ನು ವಿಶ್ಲೇಷಿಸಿದ್ದಾರೆ. ಆ ಬಗ್ಗೆ ನಮ್ಮ ವಿರೋಧವೂ ಇಲ್ಲ. ವೃತ್ತ ಪತ್ರಿಕೆಗಳ ನಿಯಂತ್ರಣಕ್ಕೆ ಒಂದು ಕಾನೂನು ಬೇಕು. ಸರ್ಕಾರಕ್ಕೆ ಬಹಳ ಕಳಕಳಿ ಇದೆ. ಪರಿಶೀಲನಾ ಸಮಿತಿಯ ವರದಿಯಲ್ಲಿನ ಉಪಬಂಧಗಳನ್ನು ವಿವರವಾಗಿ ಪರಿಶೀಲಿಸಲಾಯಿತು. ಈ ಸಭೆಯಲ್ಲಿ ಮೂಡಿ ಬಂದ ಆಕ್ಷೇಪಣೆಗಳಿಂದಾಗಿ ಅದನ್ನು ಮತ್ತೊಂದು ಪರಿಶೀಲನಾ ಸಮಿತಿಗೆ ವಹಿಸಲಾಯಿತು. ಮತ್ತು ಈ ಬಗ್ಗೆ ನಾನು ಚಿಕ್ಕದರಲ್ಲಿ ಅಭಿವ್ಯಕ್ತಪಡಿಸುವುದಾದರೆ 'ತಕರಾರುದಾರರನ್ನು' ಎರಡನೆಯ ಪರಿಶೀಲನಾ ಸಮಿತಿಯಲ್ಲಿ ಹಾಕಲಾಯಿತು. ತಕರಾರುದಾರರು ಅಲ್ಲಿಗೆ ಹೋದರು ಮತ್ತು ಅವರ ಮುಂದೆ ಆಕ್ಷೇಪಣೆ ಹೊತ್ತ ವರದಿ ಬಂದಿತು. ಅಂತಹ ಸಂದರ್ಭದಲ್ಲಿ ಶ್ರೀಯುತ ಗುಂಡಪ್ಪನವರ ಮನೋಭಾವನೆ ಏನು? ಅವರು ಅದರ ಮರುಪ್ರಾರೂಪಣೆಯಾಗಬೇಕೆಂದರು. ಶ್ರೀಯುತ ಗುಂಡಪ್ಪನವರಂತೆ ಪ್ರತಿಯೊಬ್ಬರು ವಿನಮ್ರ, ಒಳ್ಳೆಯ, ಕಳಕಳಿಯ, ಪದಬಳಕೆಯಲ್ಲಿ ಜಾಗರೂಕ ಸ್ವಭಾವದವರಾಗಿರಬೇಕೆಂದು ನಿರೀಕ್ಷಿಸಲಾಗದು. ನಾವು ಅವರಿಂದ ಸಹಾಯ ಬಯಸಿದೆವು. ಅವರು ಸಹಾಯ ಮಾಡಬಹುದಿತ್ತು. ಆದರೆ ಅವರು ಮಾಡಲಿಲ್ಲ. ನಾನು ಈಗ, ಶ್ರೀಯುತ ಚಂದ್ರಶೇಖರಯ್ಯರವರು ಮಾಡಿದ ತಿದ್ದುಪಡಿಗಳನ್ನು ಮತ್ತು ಅವರು ನೀಡಿದ ಹಲವಾರು ಸಲಹೆಗಳನ್ನು ಪರಿಗಣಿಸಬೇಕೆಂದು ಕೋರುತ್ತೇನೆ. ಮತ್ತೊಂದು ವಿಚಾರ, ಕೆಲವು ಕಲಮುಗಳಿಗೆ ಸಂಬಂಧಿಸಿದಂತೆ ಚಂದ್ರಶೇಖರಯ್ಯನವರು ಮತ್ತು ನಾನು ಸಮಿತಿಯೊಂದಿಗೆ ಸಹಮತ ಹೊಂದಿಲ್ಲ. ಅವು ಎಲ್ಲಾ ಮಹತ್ವದ ಕಲಂಗಳು. ಶ್ರೀಯುತ ಗುಂಡಪ್ಪನವರೂ ಹಾಗೇ ಮಾಡಬಹುದಾಗಿತ್ತು.

ರಾಜಕೀಯ ಸ್ಥಿತಿ ಸಮರ್ಪಕವಾಗಿಲ್ಲವೆಂಬ ಶ್ರೀಯುತ ಗುಂಡಪ್ಪನವರ ಮಾತನ್ನು ನಾನೂ ಒಪ್ಪುತ್ತೇನೆ. ಅವರಿಗೆ ಮಾಧ್ಯಮ ಮತ್ತು ವೃತ್ತಪತ್ರಿಕೆಗಳನ್ನು ನಿಯಂತ್ರಿಸಲು ಕಾನೂನು ಅವಶ್ಯಕವೆಂಬ ಬಗ್ಗೆ ನನ್ನೊಂದಿಗೆ ಸಹಮತವಿದೆ. ಮುಂಚಿನ ಪರಿಶೀಲನಾ ಸಮಿತಿಯ ವರದಿ ಚೆನ್ನಾಗಿಲ್ಲವೆಂದು ಅವರ ಅನಿಸಿಕೆ.

ಪ್ರಸ್ತುತ ಸಮಿತಿಯ ಶಿಫಾರಸ್ಸುಗಳು ಸಾಕಾಗುವುದಿಲ್ಲವೆಂದೂ ಮತ್ತು ತಿದ್ದುಪಡಿಗಳನ್ನು ಪರಿಶೀಲಿಸಬೇಕೆಂದು ಹೇಳಿದ್ದಾರೆ. ನನ್ನ ನಿವೇದನೆ ಏನೆಂದರೆ ಶ್ರೀಯುತ ಗುಂಡಪ್ಪನವರಿಗೆ ಒಪ್ಪಿಗೆಯಾಗುವ ಶೇ 80 ರಷ್ಟು ತಿದ್ದುಪಡಿಗಳಿಂದಾಯ್ದು ಕಾನೂನು ಮಾಡಲು ಸಾಧ್ಯ. ಈಗ ರಾಜಿ ಹೊಂದಾಣಿಕೆಯ ದಿನಗಳು ಮತ್ತು ಅವರು ಅದಕ್ಕಾಗಿ ಸಿದ್ಧರಿದ್ದಾರೆ. ಅನೇಕ ಸಂದರ್ಭಗಳಲ್ಲಿ ಅವರು ರಾಜಿ ಹೊಂದಾಣಿಕೆಯ ಪರವಾಗಿ ನಿಂತಿದ್ದಾರೆ. ಪರಿಶೀಲನಾ ಸಮಿತಿಯ ವರದಿ ಮತ್ತು ತಿದ್ದುಪಡಿ ಸದನದ ಮುಂದಿರುವಾಗ ಕಾನೂನು ರಚನೆಯ ಅಭಿಪ್ರಾಯ ಸದನದ ಬಹುಪಾಲು ಸದಸ್ಯರಿಗೆ ಒಪ್ಪಿಗೆಯಾಗುತ್ತದೆ. ಆದರೆ ಬಹುತೇಕ ಸರ್ಕಾರೇತರರ ಸಹಕಾರ ಸಿಗುವುದಿಲ್ಲ. ಆದರೆ ಯಾರ ಹಿತಕ್ಕೂ ಧಕ್ಕೆಯಾಗದಂತೆ ನಾವು ಈ ಕಾನೂನನ್ನು ರಚಿಸಬೇಕು.

ಇಂದು ಒಂದು ಮಹತ್ವದ ದಿನ. ಈ ಶಾಸನ ರಚನೆ ಕಳೆದ ಅನೇಕ ವರ್ಷಗಳಿಂದ ಬಾಕಿಯಿದೆ. ನಾವೆಲ್ಲ ಒಳ್ಳೆಯ ಮನಸ್ಸಿನಿಂದ ತಿದ್ದುಪಡಿಗಳನ್ನು ತಂದು ಒಂದು ಒಳ್ಳೆಯ ಅಧಿನಿಯಮ ರೂಪಿಸೋಣ. ಇದು ಶ್ರೀಯುತ ಗುಂಡಪ್ಪನವರಿಗೆ ಮತ್ತು ಶ್ರೀಯುತ ಶ್ರೀನಿವಾಸ್ ಅಯ್ಯಂಗಾರ್, ಹಯವದನರಾವ್ ಮತ್ತು ಮಹಮದ್ ಅಬ್ಬಾಸ್ ಖಾನ್ ಸೇರಿದಂತೆ ಸದನದ ಎಲ್ಲ ಸದಸ್ಯರಿಗೂ ನನ್ನ ಸವಿನಯ ಪ್ರಾರ್ಥನೆ.

**ಶ್ರೀಮಾನ್ ಬಿ.ಎಸ್. ಪುಟ್ಟಸ್ವಾಮಿಯವರು:** ಸ್ವಾಮಿ, ನನ್ನ ಸ್ನೇಹಿತರಾದ ಶ್ರೀಮಾನ್ ಬೇಲೂರು ಶ್ರೀನಿವಾಸಯ್ಯಂಗಾರ್ರವರು ಮಾತನಾಡಿದ ಮೇಲೆ ನಾನೇನೂ ಹೆಚ್ಚಾಗಿ ಹೇಳಬೇಕಾಗಿಲ್ಲ. ಶ್ರೀಮಾನ್ ಡಿ.ಎಚ್. ಚಂದ್ರಶೇಖರಯ್ಯನವರು ಈ ಮಸೂದಾ ಕಾನೂನಿಗೆ ಕೆಲವು ತಿದ್ದುಪಡಿಗಳನ್ನು ಕಳುಹಿಸಿದ್ದಾರೆ. ಅವುಗಳ ಸಂಬಂಧವಾಗಿ ಇದನ್ನು ತೆಗೆದುಕೊಳ್ಳಬೇಕೆಂದು ಅನೇಕ ಮಂದಿ ಸದಸ್ಯರ ಅಭಿಪ್ರಾಯವಿರುವ ಹಾಗೆ ಕಾಣುತ್ತದೆ. ದಯವಿಟ್ಟು ತಾವು ಆ ತಿದ್ದುಪಡಿಗಳನ್ನು ಪರಿಶೀಲನಾ ಸಮಿತಿಗೆ ಪುನಃ ಕಳುಹಿಸಬೇಕು. ಇವತ್ತು ಅಥವಾ ನಾಳೆ ಆ ಸಮಿತಿಯು ಸಭೆ ಸೇರಿ ಎಲ್ಲ ತಿದ್ದುಪಡಿಗಳನ್ನು ಪರಿಶೀಲನೆ ಮಾಡಿ ನಾಳೆಯೇ ವರದಿಯನ್ನು ಕಳುಹಿಸುವಂತೆ ಏರ್ಪಡಿಸಿ ಈ ಮಸೂದಾ ಕಾನೂನನ್ನು ತೆಗೆದುಕೊಳ್ಳಬೇಕೆಂದು ನಾನು ಪ್ರಾರ್ಥನೆ ಮಾಡಿಕೊಳ್ಳುತ್ತೇನೆ.

**ಶ್ರೀಯುತ ಹೆಚ್. ಬಿ. ಗುಂಡಪ್ಪ:** ನಾನು ಪುಟ್ಟಸ್ವಾಮಿಯವರ ಸೂಚನೆಯನ್ನು ಅನುಮೋದಿಸುತ್ತೇನೆ.

**ಶ್ರೀಮಾನ್ ಎಂ.ಸಿ. ಲಿಂಗೇಗೌಡರು:** ಸ್ವಾಮಿ ವೃತ್ತ ಪತ್ರಿಕೆಗಳ ಮಸೂದಾ ಕಾನೂನನ್ನು ಈ ಸಭೆಯ ಮುಂದೆ ತಂದು ಇಲ್ಲಿಗೆ ಎರಡು ವರ್ಷವಾಯಿತು. ಇದು ಪ್ರಜಾಪ್ರತಿನಿಧಿ ಸಭೆಯ ಮುಂದೆ ಚರ್ಚೆಯಾಗಿ, ಈ ಸಭೆಯಲ್ಲಿ ಚರ್ಚೆಯಾಗಿ ಸೆಲೆಕ್ಟ್ ಕಮಿಟಿಯವರ ಮುಂದೆ ಹೋಗಿ ಅವರಿಂದ ಪರಿಶೀಲನೆ ಮಾಡಲ್ಪಟ್ಟು ಹಿಂದೆ ಒಂದು ಸಲ ಈ ಸಭೆಗೆ ಬಂತು. ಈ ಕಾನೂನಿನ ಉದ್ದೇಶಗಳು ಹಿಂದಿನ ಕಾನೂನಿಗಿಂತಲೂ ಉತ್ತಮವಾಗಿವೆಯೆಂದೂ, ಇದನ್ನು ಅವಶ್ಯವಾಗಿ ಜಾರಿಗೆ ತರಬೇಕೆಂದೂ ಅನೇಕ ಸದಸ್ಯರು ಆಗಲೂ ತಿಳಿಸಿರುತ್ತಾರೆ. ಆದರೂ ಸಹ ಯಾರೋ ಕೆಲವು ಮಂದಿ ಸದಸ್ಯರು ಸಲಹೆ ಮಾಡಿದ್ದರ ಮೇಲೆ ಈ ಮಸೂದಾ ಕಾನೂನನ್ನು ಪುನಃ ಸೆಲೆಕ್ಟ್ ಕಮಿಟಿಗೆ ವಾಪಸ್ಸು ಕಳುಹಿಸಿ ಅಲ್ಲಿ ಪುನಃ ಚರ್ಚೆಗೆ ಇಟ್ಟಿರಿ. ಈಗ ಅವರ ವರದಿಯೂ ನಮ್ಮ ಮುಂದಿದೆ. ಇದರ ಮೇಲೆ ನಾವು ಈ ಮಸೂದಾ ಕಾನೂನನ್ನು ಚರ್ಚೆ ಮಾಡಿ ಅನುಮೋದಿಸಬಹುದಾಗಿದೆ. ಇಂಥದರಲ್ಲಿ ಈಗ ತಿರುಗಿ ಶ್ರೀಮಾನ್ ಬೇಲೂರು ಶ್ರೀನಿವಾಸಯ್ಯಂಗಾರ್ಯರು ಹೇಳಿದ ಹಾಗೆ ಇನ್ನೊಂದು ತಕರಾರು ಬಂದು ಇದನ್ನು ಪುನಃ ಸೆಲೆಕ್ಟ್ ಕಮಿಟಿಗೆ ಕಳುಹಿಸಬೇಕೆಂದು ಸೂಚನೆ ಬಂದಿದೆ. ಈ ರೀತಿಯಲ್ಲಿ ಪದೇ ಪದೇ ಮಸೂದೆಯೊಂದನ್ನು ಸೆಲೆಕ್ಟ್ ಕಮಿಟಿಗೆ ವಾಪಸು ಕಳುಹಿಸುವುದು ನಾಲೆಲ್ಲಿಯೂ ಕಾಣೆ. ಇದು ಸರಿಯಲ್ಲ.

ಈ ಮಸೂದಾ ಕಾನೂನನ್ನು ವಿರೋಧಿಸುತ್ತ ಶ್ರೀಮಾನ್ ಡಿ.ವಿ. ಗುಂಡಪ್ಪನವರು ಒಂದು ಮಾತು ಹೇಳಿದರು. ಅದೇನೋ ಈಗಿನ ವಾತಾವರಣ ಚೆನ್ನಾಗಿಲ್ಲ, ದೇಶದಲ್ಲೆಲ್ಲಾ ಪರಿಸ್ಥಿತಿ ಕೆಟ್ಟು ಹೋಗಿದೆ, ಎಂದು. ಅದೇನು ಚೆನ್ನಾಗಿಲ್ಲವೋ ನನಗೆ ತಿಳಿಯಲಿಲ್ಲ. ಇಷ್ಟು ದಿನವೂ ಮಳೆಗಾಲವಾಗಿತ್ತು. ಈಗ ಚಳಿಗಾಲವಾಗಿದೆ; ಇದು ಹೊರತು ಬೇರೆ ಯಾವ ಬದಲಾವಣೆಯೂ ಆಗಿರುವಂತೆ ನನಗೆ ತೋರುವುದಿಲ್ಲ. ಇಂಥ ಕಾರಣಗಳ ದೆಸೆಯಿಂದ ಈ ಮಸೂದಾ ಕಾನೂನನ್ನು ಮುಂದುವರಿಸಬೇಕಾಗಿಲ್ಲ. ಅಲ್ಲದೆ ಇದನ್ನು ಪುನಃ ಸೆಲೆಕ್ಟ್ ಕಮಿಟಿಗೆ ಕಳುಹಿಸಬೇಕಾದ ಅಗತ್ಯವೂ ಕಾಣುವುದಿಲ್ಲ. ಈ ದಿನವೇ ಇದನ್ನು ಚರ್ಚೆ ಮಾಡಿ ಮುಗಿಸಿಬಿಡೋಣ.

**ಶ್ರೀಯುತ ಕೆ. ಆರ್. ಸುಬ್ಬಣ್ಣಾಚಾರ್:** ನಾವು ತಿದ್ದುಪಡಿಗಳನ್ನು ಚರ್ಚಿಸೋಣ.

**ಶ್ರೀ. ಎನ್ ಮಾಧವ ರಾವ್:** ಸ್ವಾಮಿ, ಪರಿಶೀಲನಾ ಸಮಿತಿಯ ಸದಸ್ಯರಾಗಿ ಶ್ರೀಯುತ ಡಿ. ವಿ. ಗುಂಡಪ್ಪನವರು ತಮಗೊದಗಿದ ಸಂದಿಗ್ಧ ಸ್ಥಿತಿಯ ಬಗ್ಗೆ ತೋರಿದ ಅಭಿವ್ಯಕ್ತಿಗೆ ಪರಿಶೀಲನಾ ಸಮಿತಿಯ ನಮ್ಮ ಸಹೋದ್ಯೋಗಿಗಳು ಸ್ವಲ್ಪ

ಮಟ್ಟಿಗೆ ಉತ್ತರಿಸಿದ್ದಾರೆ. ನಾನು ವೈಯಕ್ತಿಕವಾಗಿ ಅವರ ಸಂದಿಗ್ಧತೆಯನ್ನು ಅರ್ಥಮಾಡಿಕೊಳ್ಳಬಲ್ಲೆ. ಶ್ರೀಯುತ ಕೆ. ಆರ್. ಸುಬ್ಬಣ್ಣಾಚಾರ್ ಹೇಳಿದಂತೆ, ಗುಂಡಪ್ಪನವರ ಪ್ರಕಾರ ವೃತ್ತ ಪತ್ರಿಕೆಗಳಿಗೆ ಸಂಬಂಧಿಸಿದಂತೆ ನಿಯಂತ್ರಣ ಅನಿವಾರ್ಯ ತೊಂದರೆಯಷ್ಟೇ ಅಲ್ಲ. ಅನಾವಶ್ಯಕ ತೊಂದರೆ ಎಂದು ಅವರ ಆಲೋಚನೆ. ವಿಷಯದ ಬಗೆಗಿನ ಅವರ ನಿಲುವನ್ನು ನೋಡಿದರೆ ಹೊಸದೊಂದು ವಿಧೇಯಕವನ್ನು ಮಾಡಿ ಅದನ್ನು ಪರಿಶೀಲನಾ ಸಮಿತಿಯ ಮುಂದೆ ತರಬೇಕೆಂಬುದು ಅವರ ವಿಚಾರವಾಗಿದ್ದೀತು ಎಂಬುದು ವೇದ್ಯವಾಯಿತು. ಅದರ ಪ್ರಕಾರದ ತತ್ವಗಳು ಪ್ರಸ್ತುತ ವಿಧೇಯಕಕ್ಕಿಂತ ವಿಭಿನ್ನವಾಗಿವೆ. ವಿಧೇಯಕವನ್ನು ವಿಸ್ತೃತ ಪರಿಶೀಲನಾ ಸಮಿತಿಯ ಮುಂದೆ ಮತ್ತೆ ಸಲ್ಲಿಸಿದಾಗ ನಾನು ವ್ಯಕ್ತಪಡಿಸಿದ ಅಭಿಪ್ರಾಯಗಳನ್ನು ಉಲ್ಲೇಖಿಸುವ ಸೌಜನ್ಯವನ್ನು ಅವರು ತೋರಿದರು. ಈ ಬಗ್ಗೆ ನಾನು ವಿವರಣೆ ನೀಡಲೇಬೇಕಾಗಿದೆ. ಈ ವಿಧೇಯಕ ಎರಡನೆಯ ಹಂತದ ಪರಿಶೀಲನೆಗೆ ಹೊರಟ ಆಯ್ಕೆ ಸಮಿತಿಯು ಈ ಬಗೆಗೆ ಇರುವ ಸ್ಥಾಯೀ ನಿಯಮಗಳನ್ನು ತಿಳಿದಿಲ್ಲವೆನ್ನುವಂತಹ ಯಾವುದೇ ಮಾತುಗಳನ್ನು ನನ್ನ ಟಿಪ್ಪಣಿಯ ಸಂದರ್ಭದಲ್ಲಿ ಆಡಿಲ್ಲ. ಬೇರೆ ಯಾವುದೇ ಆಯ್ಕೆ ಸಮಿತಿಗೆ ಇಲ್ಲದಂತಹ ಅಧಿಕಾರ ವ್ಯಾಪ್ತಿಯು ಈ ಆಯ್ಕೆ ಸಮಿತಿಗೆ ಇದೆ ಎನ್ನುವಂತಹ ಮಾತುಗಳನ್ನೂ ಹೇಳಿಲ್ಲ. ವಿಧೇಯಕವು ಈಗಾಗಲೇ ಒಂದು ಆಯ್ಕೆ ಸಮಿತಿಯ ಸಂಪೂರ್ಣ ಪರಿಶೀಲನೆಗೆ ಒಳಪಟ್ಟು ನಮ್ಮ ಮುಂದೆ ಬಂದಿದ್ದಿತು. ಮತ್ತು ಆಗ ನಾನು ಸರ್ಕಾರದ ಪರವಾಗಿ ಹೇಳಿದ ಮಾತೆಂದರೆ ಆಯ್ಕೆ ಸಮಿತಿಯು ಮೊದಲನೆಯ ಆಯ್ಕೆ ಸಮಿತಿ ಹೊಂದಿದಷ್ಟೇ ಸ್ವಾತಂತ್ರ್ಯವನ್ನು ಈ ವಿಧೇಯಕದ ಬಗೆಗೆ ತಾಳಬಹುದು ಎಂದು.

**ಶ್ರೀಯುತ ಡಿ. ವಿ. ಗುಂಡಪ್ಪ:** ನಾನು ವೈಯಕ್ತಿಕವಾಗಿ ತುಸು ವಿವರಣೆ ನೀಡಬಯಸುತ್ತೇನೆ. ಆ ಹೇಳಿಕೆಯ ಯಥಾರ್ಥತೆಯನ್ನು ನಾನು ಪ್ರಶ್ನಿಸುವುದಿಲ್ಲ. ಆಗ ನಾನು ಅದನ್ನು ಸಮ್ಮತಿಸಿದ್ದೆ ಮತ್ತು ಈಗಲೂ ಸಮ್ಮತಿಸುತ್ತೇನೆ. ವಾಸ್ತವವಾಗಿ ಅದನ್ನು ಸ್ಪಷ್ಟವಾಗಿ ಹೇಳಿದ್ದೇನೆ.

**ಶ್ರೀಯುತ ಎನ್ ಮಾಧವರಾವ್:** ನಿಜ. ಆದರೆ ಶ್ರೀಯುತ ಗುಂಡಪ್ಪನವರ ಅಭಿಪ್ರಾಯಗಳಿಂದ ಅನ್ನಿಸುವುದೇನೆಂದರೆ, ಪರಿಶೀಲನಾ ಸಮಿತಿಯು ಮಸೂದೆಯ ತತ್ವಗಳಿಗೆ ಬದ್ಧವಾಗದೇ ಹೊಸ ತತ್ವದ ಆಧಾರದಲ್ಲಿ ಮಸೂದೆಯನ್ನು ರೂಪಿಸಲು ಅನುವು ಮಾಡಿಕೊಡುವ ರೀತಿಯ ಆಶ್ವಾಸನೆ ನೀಡಿದೆನು ಎಂದು. ಆದರೆ ವಾಸ್ತವವಾಗಿ ನಾನು ಯಾವುದೇ ಪರಿಶೀಲನಾ ಸಮಿತಿ ಹೊಂದಿದ್ದಂತೆಯೇ

ಇದೂ ಪೂರ್ಣ ಸ್ವಾತಂತ್ರ್ಯವನ್ನು ಹೊಂದಬಹುದಿತ್ತು ಎಂದು ವಿವರಿಸುವ ಕಳಕಳಿಯನ್ನು ಮಾತ್ರ ತೋರಿದೆ.

**ಶ್ರೀಯುತ ಡಿ. ವಿ. ಗುಂಡಪ್ಪ:** ನಾನು ಮತ್ತೆ ಅಡ್ಡಿಪಡಿಸುತ್ತಿದ್ದೇನೆ. ಮಾನ್ಯ ಸದಸ್ಯರು ಆಗ ಪ್ರಕಟಿಸಿದ ಅಭಿಪ್ರಾಯದ ಸ್ಪಷ್ಟ ವ್ಯಾಪ್ತಿಯೇ ನನಗೆ ಅರ್ಥವಾಗಲಿಲ್ಲ. ಸದನದ ಒಳಗಡೆ ಅಡ್ಡಿ ಉಂಟಾಗಿತ್ತಷ್ಟೇ ಅಲ್ಲ, ಶ್ರೀಯುತ ಮಲ್ಲಪ್ಪನವರು, ತತ್ವಗಳನ್ನು ಮತ್ತೊಮ್ಮೆ ಹೊಸದಾಗಿ ಪರೀಕ್ಷಿಸಬೇಕೆಂದರು. ಸದನದಲ್ಲಿ ಮತ್ತೊಂದೆಡೆ ನೀವು ಅದನ್ನೆಲ್ಲ ಮಾಡಬಹುದು ಎಂಬ ರೀತಿಯ ಪ್ರತಿಕ್ರಿಯೆ ಇತ್ತು. ಇದೆಲ್ಲ ಸಭ್ಯ ಹಾಗೂ ಸ್ನೇಹಪೂರ್ಣ ಭಾವನೆ.

**ಶ್ರೀಯುತ ಬಿ. ಎಸ್. ಪುಟ್ಟಸ್ವಾಮಿ:** ಆಯ್ಕೆ ಸಮಿತಿಯ ಪರಿಶೀಲನೆಗೆ ಒಳಪಟ್ಟು ಹೊರಹೊಮ್ಮುವ ಮಸೂದೆಯ ತಾತ್ವಿಕ ಆಧಾರವು ಅದು ಮೂಲದಲ್ಲಿ ಯಾವ ತತ್ವಕ್ಕೆ ಬದ್ಧವಾಗಿದೆಯೋ ಅದಕ್ಕಿಂತ ಸಂಪೂರ್ಣವಾಗಿ ಭಿನ್ನವಾಗಿರಲಾರದು ಎಂದು ನಾವು ಸದನದ ಗಮನಕ್ಕೆ ತಂದಿದ್ದೆವು.

**ಶ್ರೀಯುತ ಎನ್. ಮಾದವ್ ರಾವ್:** ನಾನು ಗುಂಡಪ್ಪನವರಿಗೆ ನನ್ನ ನಿಲುವನ್ನು ವಿವರಿಸಲು ಬಯಸಿದ್ದೆ ಮತ್ತು ಗುಂಡಪ್ಪನವರ ವಿಚಾರವೂ ಅದೇ ಆಗಿರುವುದಾದರೆ ನಾನು ಇನ್ನೇನೂ ಹೇಳುವುದಿಲ್ಲ.

**ಶ್ರೀಯುತ ಡಿ. ವಿ. ಗುಂಡಪ್ಪ:** ನಾನೂ ಇದರ ವಿರುದ್ಧವಾಗಿ ಹೇಳಬೇಕಾದುದು ಏನೂ ಇಲ್ಲ.

ಬೇಕು ಜೀವನ ಯೋಗಕೊಂದು ಬಹುಸೂಕ್ಷ್ಮನಯ।
ಬೇಕೊಂದು ಜಾಗರೂಕತೆ, ಬುದ್ಧಿ ಸಮತೆ॥
ತಾಕ ನೊಂದನು ಯೋಗಿ, ನೂಕ ನೊಂದನು ಜಗದಿ।
ಏಕಾಕಿ ಸಹವಾಸಿ – ಮಂಕುತಿಮ್ಮ

– ಡಿ.ವಿ.ಜಿ.



ಡಿವಿಜಿ



ಮೊದಲನೆಯ ಸಾಲು : ಡಿವಿಜಿಯವರ ಮಗ ಬಿ.ಜಿ.ಎಲ್. ಸ್ವಾಮಿ. ಎರಡನೆಯ ಸಾಲು : ಡಿವಿಜಿಯವರ ತಾಯಿ ಮತ್ತು ಶೇಷಗಿರಿರಾಯರ ಮಗಳು ಸುನಂದ, ಡಿವಿಜಿಯವರ ಮಗಳು ಇಂದಿರಮ್ಮ, ತಂದೆ. ಮೂರನೆಯ ಸಾಲು : ಡಿವಿಜಿಯವರ ತಂಗಿಯ ಮಗನಾಗಭೂಷಣ, ಡಿವಿಜಿಯವರ ಮಗಳು ಮೀನಾಕ್ಷಿ





ಎಡದಿಂದ ಬಲಕ್ಕೆ : ಡಿ.ವಿ. ರಾಮರಾಯರ ಮಗ ಚಂದ್ರಮೌಳಿ, ಶಾರದಮ್ಮ, ಲಲಿತಮ್ಮ, ವಸಂತ, ಸ್ವಾಮಿ ಡಿವಿಜಿಯವರೊಂದಿಗೆ.



ಡಿ.ವಿ. ರಾಮರಾಯರ ಕುಟುಂಬ, ಮೊಮ್ಮಗ ಶಿಬಿಯೊಂದಿಗೆ



ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯ ಆಡಳಿತ ಮಂಡಳಿ : ಎಡದಿಂದ ಬಲಕ್ಕೆ :
ಎಂ.ಪಿ. ಸೋಮಶೇಖರರಾವ್, ಡಿವಿಜಿ, ಕೆ. ಸಂಪದ್ಗಿರಿರಾವ್, ಇ.ಎಸ್. ವೆಂಕಟರಾಮಯ್ಯ

5750 - 16



ವಿ.ಎಸ್. ಶ್ರೀನಿವಾಸ ಶಾಸ್ತ್ರಿಗಳು, ಬ್ರಜೇಂದ್ರನಾಥ ಶೀಲರೊಂದಿಗೆ ಡಿವಿಜಿ.



ಮೈಸೂರು ಪತ್ರಿಕೋದ್ಯೋಗಿಗಳ ಸಂಘದ (13-9-1932ರಲ್ಲಿ) ಅಧ್ಯಕ್ಷರಾದ ಡಿ.ವಿ. ಗುಂಡಪ್ಪನವರು
(ಎಡದಿಂದ ಬಲಕ್ಕೆ ಕುಳಿತಿರುವವರಲ್ಲಿ ಮೂರನೆಯವರು)



ಡಿವಿಜಿಯವರು ವಂದನಾರ್ಪಣೆ ಮಾಡುತ್ತಿರುವುದು.



ಮೈಸೂರು ಮಹಾರಾಜ ಜಯಚಾಮರಾಜ ಒಡೆಯರಿಂದ
ಮೈಸೂರು ವಿಶ್ವವಿದ್ಯಾನಿಲಯದ ಗೌರವ ಡಾಕ್ಟರೇಟ್ ಸ್ವೀಕರಿಸುತ್ತಿರುವುದು.



ಸಿ.ಪಿ. ರಾಮಸ್ವಾಮಿ ಅಯ್ಯರ್ ಅವರೊಂದಿಗೆ ಡಿವಿಜಿ.



ಗೋಖಲೆ ಸಂಸ್ಥೆಯಲ್ಲಿ ಒಂದು ಸಭೆ

D. V. GUNDAPPA

Nagasandra Road
BASAVANGUDI P.O.
BANGALORE CITY (South India)

July 14, 1936.

My dear & esteemed Sir,

I much regret I was not able to join the party at 5 o'c. last Sunday as I had proposed to do. The function at the Parishat lasted beyond 5 o'c. I pray you would forgive me. I realise what a loss I have suffered.

I beg to submit with this a copy of the Itinerant Lectures Scheme which the Parishat has adopted. I shall be most grateful if you could spare a few minutes for a perusal of it. The Government have given it their general approval and asked me to work out the details for putting the scheme in operation in one or two Districts in

ಡಿವಿಜಿಯವರ ಇಂಗ್ಲಿಷ್ ಹಸ್ತಾಕ್ಷರ : ಮೋಕ್ಷಗುಂಡಂ ವಿಶ್ವೇಶ್ವರಯ್ಯನವರಿಗೆ ಬರೆದಿರುವ ಒಂದು ಪತ್ರ.

in the first instance. I have to consult the Presidents of the District Boards and the Director of Public Instruction (as to details) and the Parishat will have to work in collaboration with these public authorities.

I need scarcely say how deeply thankful we shall be for your kind advice as to how the scheme may be improved and worked, and for your blessings for the effort.

With the deepest respect and admiration,

I remain,
Most sincerely yours,
D. V. Gundappa

I am taking the liberty of enclosing for your very kind acceptance and perusal a copy of the latest Report of the Parishat and other connected literature.

Sir M. Visvesvaraya, KCIE, LLD, DSc, M. Inst. CE, etc.
Uplands, High Ground,
Bangalore.

# ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

## ಪ್ರಕಟಗೊಂಡ ಪುಸ್ತಕಗಳು

| ಕ್ರ.ಸಂ. | ಪುಸ್ತಕದ ಹೆಸರು | ಲೇಖಕರ ಹೆಸರು | ದರ |
|---|---|---|---|
| 1. | ಕೆ. ಹನುಮಂತಯ್ಯ | ಪ್ರೊ॥ ಎಸ್.ಬಿ. ಪಂಗಣ್ಣಾಯ್ಯ ಹಾಗೂ ಇತರರು | 20–00 |
| 2. | ಎಸ್. ನಿಜಲಿಂಗಪ್ಪ | ಡಾ॥ ಸಂದೀಪ್ ಶಾಸ್ತ್ರಿ | 15–00 |
| 3. | ಶಾಂತವೇರಿ ಗೋಪಾಲಗೌಡ | ಪ್ರೊ॥ ಎಸ್.ಬಿ. ಪಂಗಣ್ಣಾಯ್ಯ | 15–00 |
| 4. | ವೈಕುಂಠ ಬಾಳಿಗಾ | ಡಾ॥ ಪಿ. ಜೀವನ್ ಕುಮಾರ್ | 20–00 |
| 5. | ವೀರೇಂದ್ರ ಪಾಟೀಲ್ | ಡಾ॥ ಎಸ್.ಹೆಚ್. ಕವಂಟೆ ಹಾಗೂ ಇತರರು | 20–00 |
| 6. | ಕಡಿದಾಳ್ ಮಂಜಪ್ಪ | ಡಾ॥ ಎಸ್.ಹೆಚ್. ಕವಂಟೆ ಹಾಗೂ ಇತರರು | 15–00 |
| 7. | ಜಿ.ವಿ. ಹಳ್ಳಿಕೇರಿ | ಡಾ. ಆರ್.ಎಂ.ಎಲ್. ಪಾಟೀಲ್ | 15–00 |
| 8. | ಕೆ.ಎಸ್. ನಾಗರತ್ನಮ್ಮ | ಪ್ರೊ॥ ಎಸ್.ಬಿ. ಪಂಗಣ್ಣಾಯ್ಯ ಹಾಗೂ ಇತರರು | 15–00 |
| 9. | ಡಿ. ದೇವರಾಜ ಅರಸು | ಜೆ.ಎಸ್. ಸದಾನಂದ | 15–00 |
| 10. | ಕೆ.ಟಿ. ಭಾಷ್ಯಂ | ಡಾ. ವಿಘ್ನೇಶ್ ಎನ್. ಭಟ್ | 15–00 |
| 11. | ಕೆ. ಪುಟ್ಟಸ್ವಾಮಿ | ಜಿ. ದಕ್ಷಿಣಾ ಮೂರ್ತಿ | 15–00 |
| 12. | ಟಿ. ಸಿದ್ಧಲಿಂಗಯ್ಯ | ಜಿ. ದಕ್ಷಿಣಾ ಮೂರ್ತಿ | 20–00 |
| 13. | ಜಗಳೂರು ಇಮಾಂ | ಜೆ.ಎಸ್. ಸದಾನಂದ | 15–00 |

| | | | |
|---|---|---|---|
| 14. | ಕೆ.ಸಿ. ರೆಡ್ಡಿ | ಡಾ. ಸಂಧ್ಯಾರೆಡ್ಡಿ | 20–00 |
| 15. | ಜಿ.ವಿ. ಕಕ್ಕಿಲ್ಲಾಯ | ಎಂ.ಕೆ. ಭಂಡಿ | 20–00 |
| 16. | ಹೆಚ್.ಎಂ. ಚೆನ್ನಬಸಪ್ಪ | ಪ್ರೊ|| ಜಿ.ಎಸ್. ಚಂದ್ರಯ್ಯ | 20–00 |
| 17. | ಬಿ. ರಾಚಯ್ಯ | ನಂಜಯ್ಯ ಹೊಂಗನೂರ್ | 20–00 |
| 18. | ಎಂ. ನಾಗಪ್ಪ | ಡಾ. ಎಂ.ಎಸ್. ಪಾಟೀಲ್ | 15–00 |
| 19. | ಜೆ.ಬಿ. ಮಲ್ಲಾರಾಧ್ಯ | ಡಾ. ಹೆಚ್.ಎಂ.ಪಂಚಾಕ್ಷರಯ್ಯ | 15–00 |
| 20. | ಗಂಗಾಧರ್ ನಮೋಶಿ | ಡಾ. ಕವಂಟೆ ಹಾಗೂ ಇತರರು | 15–00 |
| 21. | ಬಿ.ಡಿ. ಜತ್ತಿ | ಕೃಷ್ಣ ಕೊಲ್ಹಾರ ಕುಲಕರ್ಣಿ | 15–00 |
| 22. | ಆರ್. ಗುಂಡೂರಾವ್ | ಈಶ್ವರ ದೈತೋಟ | 20–00 |
| 23. | ಕೆ.ಎಚ್. ಪಾಟೀಲ್ | ಎಂ.ಕೆ. ಭಂಡಿ | 15–00 |
| 24. | ಅಜೀಜ್ ಸೇಠ್ | ಹೆಚ್.ಕೆ. ಬಾಲಸೂರಿ | 15–00 |
| 25. | ಸಿ.ಎಂ. ಆರ್ಮುಗಂ | ಹೆಚ್.ಕೆ. ಬಾಲಸೂರಿ | 15–00 |
| 26. | ಜೆ.ಹೆಚ್. ಪಟೇಲ್ | ಶೇಷಚಂದ್ರಿಕ | 30–00 |
| 27. | ಜಿ.ಎಲ್. ಸುಬ್ಬಮ್ಮ | ಡಾ. ಡಿ.ಎಸ್. ಜಯಪ್ಪಗೌಡ | 15–00 |
| 28. | ಟಿ.ಆರ್. ಶಾಮಣ್ಣ | ಎಲ್.ಎನ್. ಮುಕುಂದರಾಜ್ | 20–00 |
| 29. | ಎಸ್.ಡಿ. ಗಾಂವಕರ್ | ಮೋಹನ್ ವೆರ್ಣೇಕರ್ | 20–00 |
| 30. | ಎಂ.ಪಿ.ಎಲ್. ಶಾಸ್ತ್ರಿ | ಪಾರೋಗದ್ದೆ ಉಷಾ ರಮೇಶ್ ನಾಯಕ್ | 20–00 |
| 31. | ಎಸ್. ಶಿವಪ್ಪ | ಕೂಡ್ಲಿಗೆರೆ ಮಲ್ಲಿಕಾರ್ಜುನ | 30–00 |
| 32. | ಕಾಗೋಡು ಚಳವಳಿ | ಕೂಡ್ಲಿಗೆರೆ ಮಲ್ಲಿಕಾರ್ಜುನ | 15–00 |
| 33. | ಕೆ.ಪಿ. ಶಂಕರಗೌಡ | ಜಗದೀಶ ಕೊಪ್ಪ | 20–00 |
| 34. | ಟಿ.ಎನ್. ನರಸಿಂಹಮೂರ್ತಿ | ಕೆ.ಜೆ. ಸುರೇಶ್ | 25–00 |
| 35. | ಎಸ್.ಆರ್. ಕಂಠಿ | ಮನು ಬಳಿಗಾರ್ | 30–00 |

| | | | |
|---|---|---|---|
| 36. | ಎಸ್.ಸಿ. ಮಲ್ಲಯ್ಯ | ಡಾ. ಟಿ.ಸಿ. ಪೂರ್ಣಿಮ | 20–00 |
| 37. | ಅಬ್ದುಲ್ ನಜೀರ್‌ಸಾಬ್ | ಮನು ಬಳಿಗಾರ್ | 30–00 |
| 38. | ಪಿ.ಎಂ. ನಾಡಗೌಡ | ಗಂಗಾಧರಯ್ಯ ಹಿರೇಮಠ | 30–00 |
| 39. | ಕೆ. ಪಟ್ಟಾಭಿರಾಮನ್ | ಸಂಜಯ್ ದೊರೆ | 20–00 |
| 40. | ಎಂ.ಎಸ್.ಕೃಷ್ಣನ್ | ಹೆಚ್.ಕೆ. ಬಾಲಸೂರಿ | 20–00 |
| 41. | ಎಂ.ವಿ. ಕೃಷ್ಣಪ್ಪ | ಜಿ.ಜಿ. ನಾಗರಾಜ್ | 15–00 |
| 42. | ಕೆ.ಎಚ್. ರಂಗನಾಥ್ | ಎಲ್.ಎನ್. ಮುಕುಂದರಾಜ್ | 20–00 |
| 43. | ರಾಮಕೃಷ್ಣ ಹೆಗಡೆ | ರೂಪ್ರ ಶ್ರೀನಿವಾಸ್ | 20–00 |
| 44. | ಸಿ. ಬೈರೇಗೌಡ | ಪ್ರಹ್ಲಾದರಾವ್ | 20–00 |
| 45. | ಎಸ್.ಎಂ. ಯಾಹ್ಯಾ | ಬಿ.ಎಂ. ಹನೀಫ್ | 20–00 |
| 46. | ಬಾಪುಗೌಡ ದರ್ಶನಾಪುರ | ಗಂಗಾಧರಯ್ಯ ಹಿರೇಮಠ | 20–00 |
| 47. | ಡಾ॥ ಎಚ್. ನರಸಿಂಹಯ್ಯ | ಪ್ರೊ॥ ಗಂಗಾಧರ ಮೂರ್ತಿ | 20–00 |
| 48. | ಕರ್ನಾಟಕ ಏಕೀಕರಣ ಮತ್ತು ನಾಮಕರಣ | ಡಾ. ಸಿ.ಆರ್. ಗೋವಿಂದರಾಜ್ | 15–00 |
| 49. | ಕರ್ನಾಟಕ ರೈತ ಚಳುವಳಿ– ಸತ್ಯಾಗ್ರಹಗಳು ಸಂಪುಟ–1 | ಡಾ. ಎಂ.ಜಿ. ನಾಗರಾಜ್ | 15–00 |
| 50. | ಕರ್ನಾಟಕ ರೈತ ಚಳುವಳಿ– ಸತ್ಯಾಗ್ರಹಗಳು ಸಂಪುಟ–2 | ಡಾ. ಎಂ.ಜಿ. ನಾಗರಾಜ್ | 25–00 |
| 51. | ಕರ್ನಾಟಕ ರೈತ ಚಳುವಳಿ– ಸತ್ಯಾಗ್ರಹಗಳು ಸಂಪುಟ–3 | ಡಾ. ಎಂ.ಜಿ. ನಾಗರಾಜ್ | 25–00 |
| 52. | ಬಿ.ಎಂ. ಹೊರಕೇರಿ | ಡಾ. ಎಂ.ಎಸ್. ಪಾಟೀಲ | 20–00 |
| 53. | ಕೆ. ಕೆಂಚಪ್ಪ | ಚಂದ್ರಶೇಖರ ತಾಳ್ಯ | 20–00 |

| | | |
|---|---|---|
| 54. ಕೇಶವರಾವ ನಿಟ್ಟೂರಕರ್ | ಡಾ. ಜಿ.ಬಿ. ವಿಸಾಜಿ | 20–00 |
| 55. ಸರದಾರ ಶರಣಗೌಡ ಇನಾಂದಾರ | ಡಾ. ಬಿ.ವ್ಹಿ. ಮಲ್ಲಾಪುರ | 20–00 |
| 56. ಬಸವರಾಜೇಶ್ವರಿ | ಪ್ರಹ್ಲಾದ ಬೆಟಗೇರಿ | 20–00 |
| 57. ಕೊಲೂರು ಮಲ್ಲಪ್ಪ | ಗಂಗಾಧರಯ್ಯ ಹಿರೇಮಠ, ಡಾ. ದೇ.ಮಾ. ಪಾಟೀಲ | 20–00 |
| 58. ದೇವೇಂದ್ರಪ್ಪ ಘಾಳಪ್ಪ ಜಮಾದಾರ | ಡಾ. ನಾಗಬಾಯಿ ಬಿ.ಬುಳ್ಳಾ | 20–00 |
| 59. ಮೊಹಮ್ಮದ್ ಅಲಿ | ಪ್ರೊ॥ ಶಿವರಾಜ ಪಾಟೀಲ | 20–00 |
| 60. ಬಿ. ಶ್ಯಾಮಸುಂದರ್ | ಗಂಧರ್ವ ಸೇನಾ | 20–00 |
| 61. ಶಂಕರಶೆಟ್ಟಿ ಪಾಟೀಲ | ಡಾ. ಮಲ್ಲಿಕಾರ್ಜುನ ಶಿವಪ್ಪ ಲಠ್ಠೆ | 20–00 |
| 62. ಸದಾಶಿವ.ಎಸ್.ಶೆಟ್ಟರ್ | ನಾರಾಯಣ ಘಳಗಿ | 20–00 |
| 63. ಅಂದಾನಪ್ಪ ದೊಡ್ಡಮೇಟಿ | ಪ್ರೊ. ಸಿ.ವಿ. ಕೆರಿಮನಿ | 25–00 |
| 64. ಎಸ್.ವೈ. ಪಾಟೀಲ | ಡಾ. ಎಂ.ಎಸ್. ಪಾಟೀಲ್ | 20–00 |
| 65. ವೈ. ರಾಮಚಂದ್ರ | ಪ್ರೊ. ಚಿಕ್ಕಣ್ಣ | 20–00 |
| 66. ಕೆ.ಪಿ. ರೇವಣ್ಣಸಿದ್ದಪ್ಪ | ಸಿದ್ದಗಂಗಯ್ಯ ಕಂಬಾಳ್ | 20–00 |
| 67. ವೈ.ಕೆ. ರಾಮಯ್ಯ | ಡಾ. ಹಿ.ಚಿ. ಬೋರಲಿಂಗಯ್ಯ | 20–00 |
| 68. ಸೋಲೂರು ಸಿದ್ದಪ್ಪ | ಸಿದ್ದಗಂಗಯ್ಯ ಕಂಬಾಳ್ | 20–00 |
| 69. ಎಂ.ವೈ. ಘೋರ್ಪಡೆ | ಮಹಾಬಲೇಶ್ವರ ಕಾತ್ರಹಳ್ಳಿ | 20–00 |
| 70. ಎಂ.ಪಿ. ಪಾಟೀಲ್ | ಡಾ. ಗುರುಪಾದ ಮರಿಗುದ್ದಿ | 20–00 |
| 71. ಎಚ್.ವಿ. ಕೌಜಲಗಿ | ಡಾ. ಡಿ.ಎಸ್. ಜಯಪ್ಪಗೌಡ | 20–00 |
| 72. ಡಾ॥ ಎಂ.ಆರ್. ತಂಗಾ | ಎಸ್. ಸುರೇಶ್ ಕುಮಾರ್ | 25–00 |
| 73. ಕೆ.ಎನ್. ನಾಗೇಗೌಡ | ಪ್ರೊ. ಹೆಚ್.ಎಸ್. ಮುದ್ದೇಗೌಡ | 20–00 |
| 74. ಎ.ಆರ್. ಪಂಚಗಾವಿ | ಪ್ರೊ. ಚಂದ್ರಶೇಖರ ಅಕ್ಕಿ | 20–00 |

## ಭಾಷಾಂತರ ಪುಸ್ತಕಗಳು

| ಕ್ರ.ಸಂ. | ಪುಸ್ತಕದ ಹೆಸರು | ಲೇಖಕರ ಹೆಸರು | ದರ |
|---|---|---|---|
| 1. | ಡಾ॥ ಬಿ.ಆರ್. ಅಂಬೇಡ್ಕರ್ | ಭಾಷಾಂತರ ನಿರ್ದೇಶನಾಲಯ | 20–00 |
| 2. | ಡಾ॥ ರಾಂ ಮನೋಹರ ಲೋಹಿಯಾ | ಭಾಷಾಂತರ ನಿರ್ದೇಶನಾಲಯ | 15–00 |
| 3. | ವಿ.ಕೆ. ಕೃಷ್ಣಮೆನನ್ | ರಾಜ್ಯ ಭಾಷಾ ಆಯೋಗದ ಅಧ್ಯಕ್ಷರು | 20–00 |
| 4. | ಡಾ॥ ಶ್ಯಾಂಪ್ರಸಾದ್ ಮುಖರ್ಜಿ | ಭಾಷಾಂತರ ನಿರ್ದೇಶನಾಲಯ | 20–00 |
| 5. | ಶೇಕ್ ಮಹಮದ್ ಅಬ್ದುಲ್ಲಾ | ಭಾಷಾಂತರ ನಿರ್ದೇಶನಾಲಯ | 15–00 |
| 6. | ಡಾ॥ ರಾಜೇಂದ್ರ ಪ್ರಸಾದ್ | ಆರ್.ಕೆ. ಹುಡುಗಿ | 20–00 |
| 7. | ಭೂಪೇಶ್ ಗುಪ್ತ | ಆರ್.ಕೆ. ಹುಡುಗಿ | 20–00 |
| 8. | ಅನಂತಶಯನಂ ಅಯ್ಯಂಗಾರ್ | ಭಾಷಾಂತರ ನಿರ್ದೇಶನಾಲಯ | 15–00 |
| 9. | ರಾಜಕುಮಾರಿ ಅಮೃತ್‌ಕೌರ್ | ಕೆ.ಹೆಚ್. ಸಾವಿತ್ರಿ | 20–00 |
| 10. | ಡಾ॥ ಚಿಂತಾಮನ್ ಡಿ. ದೇಶಮುಖ್ | ಬೇಲೂರು ಸುದರ್ಶನ್ | 20–00 |
| 11. | ಪನಂಪಿಲ್ಲಿ ಗೋವಿಂದ ಮೆನನ್ | ಭಾಷಾಂತರ ನಿರ್ದೇಶನಾಲಯ | 15–00 |
| 12. | ಜೈ ಸುಖಿಲಾಲ್ ಹಾಥಿ | ಎಸ್. ಸುಮಿತ್ರ | 15–00 |
| 13. | ಎಸ್.ಎಂ. ಜೋಷಿ | ಕೆ.ಹೆಚ್. ಸಾವಿತ್ರಿ | 15–00 |
| 14. | ಡಾ॥ ಲಂಕಾ ಸುಂದರಂ | ಜವರಯ್ಯ | 15–00 |

ಸರ್ಕಾರಿ ಮುದ್ರಣಾಲಯ, ಕೆಂಗೇರಿ, ಬೆಂಗಳೂರು–59.